ವಿವಿಧಗೋಪಚರಣೇಷು ವಿದಗ್ಧೋ
ವೇಣುವಾದ್ಯ ಉರುಧಾ ನಿಜಶಿಕ್ಷಾಃ ।
ತವ ಸುತಃ ಸತಿ ಯದಾಧರಬಿಂಬೇ
ದತ್ತವೇಣುರನಯತ್ಸ್ವರಜಾತೀಃ ॥ ೧೪ ॥

ಸವನಶಸ್ತದುಪಧಾರ್ಯ ಸುರೇಶಾಃ
ಶಕ್ರಶರ್ವಪರಮೇಷ್ಠಿ ಪುರೋಗಾಃ ।
ಕವಯ ಆನತಕಂಧರಚಿತ್ತಾಃ
ಕಶ್ಮಲಂ ಯಯುರನಿಶ್ಚಿತತತ್ತ್ವಾಃ ॥ ೧೫ ॥

ಮತ್ತೊಬ್ಬ ಗೋಪಿಯು ಶ್ರೀಕೃಷ್ಣನ ಕೊಳಲಿನ ಮಹಿಮೆಯನ್ನು ಹೇಳುತ್ತಾಳೆ – ಯಶೋದಾಮಾತೆಯೇ ! ನಿನ್ನ ಮನಮೋಹಕನಾದ ಮಗನು ಗೋಪಬಾಲಕರೊಂದಿಗೆ ಆಟವಾಡುವುದರಲ್ಲಿ ಬಹಳ ನಿಪುಣನು. ಅವನು ಎಲ್ಲರ ಪ್ರೀತಿಗೆ ಪಾತ್ರನಾಗಿದ್ದು ಅತ್ಯಂತ ಚತುರನೂ ಆಗಿದ್ದಾನೆ. ಅವನು ಕೊಳಲನ್ನು ನುಡಿಸುವುದನ್ನು ಯಾರಿಂದಲೂ ಕಲಿಯಲಿಲ್ಲ, ಅವನು ತೊಂಡೆಹಣ್ಣಿನಂತಿರುವ ಸುಂದರವಾದ ತನ್ನ ತುಟಿಯ ಮೇಲೆ ಕೊಳಲನ್ನು ಇಡುತ್ತಲೇ ಹಲವಾರು ರಾಗ-ರಾಗಿಣಿಯರು ತಾವಾಗಿಯೇ ಪ್ರಕಟಗೊಳ್ಳುವುವು. ಕರ್ಣಾನಂದಕರವಾದ ಆ ವೇಣುಗಾನವನ್ನು ಕೇಳಿದ ಇಂದ್ರ-ರುದ್ರ-ಬ್ರಹ್ಮರೇ ಮೊದಲಾದ ದೇವತೆಗಳ ಮತ್ತು ವಿದ್ವಾಂಸರ ಕತ್ತೂ ಹಾಗೂ ಮನಸ್ಸು ಶ್ರೀಕೃಷ್ಣನ ಕಡೆಗೆ ವಾಲುತ್ತದೆ. ಅವರೆಷ್ಟೇ ಕೇಳಿದರೂ ಆನಂದಪಡುವುದು ಬಿಟ್ಟು ಶ್ರೀಕೃಷ್ಣನು ನುಡಿಸುತ್ತಿರುವ ರಾಗವಾಗಲೀ, ರಾಗದ ಭೇದವಾಗಲೀ ಅವರಿಗೆ ತಿಳಿಯುವುದಿಲ್ಲ, ವೇಣುಗಾನದ ರಹಸ್ಯವನ್ನು ತಿಳಿಯಲಾಗದೆ ಅವರು ವಿಮೋಹಿತರಾಗುತ್ತಾರೆ. ॥ ೧೪-೧೫ ॥

ನಿಜಪದಾಬ್ಜದಲೈರ್ಧ್ವಜವಜ್ರ-
ನೀರಜಾಂಕುಶವಿಚಿತ್ರಲಲಾಮೈಃ ।
ವ್ರಜಭುವಃ ಶಮಯನ್‌ಖುರತೋದಂ
ವರ್ಷ್ಮಧುರ್ಯಗತಿರೀಡಿತವೇಣುಃ ॥ ೧೬ ॥

ವ್ರಜತಿ ತೇನ ವಯಂ ಸವಿಲಾಸ-
ವೀಕ್ಷಣಾರ್ಪಿತಮನೋಭವವೇಗಾಃ ।
ಕುಜಗತಿಂ ಗಮಿತಾ ನ ವಿದಾಮಃ
ಕಶ್ಮಲೇನ ಕಬರಂ ವಸನಂ ವಾ ॥ ೧೭ ॥

ಇನ್ನೋರ್ವಳು ಹೇಳುವಳು – ಸಖಿಯೇ ! ನಮ್ಮ ಪ್ರಾಣಸಖನಾದ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಧ್ವಜ, ವಜ್ರ, ಕಮಲ, ಅಂಕುಶ ಇವೇ ಮೊದಲಾದ ವಿಚಿತ್ರವಾದ, ಸುಂದರವಾದ ಚಿಹ್ನೆಗಳಿವೆ. ವ್ರಜಭೂಮಿಯು ಗೋವುಗಳ ಗೊರಸುಗಳಿಂದ ಪೀಡಿಸಲ್ಪಟ್ಟಾಗ ಶ್ರೀಕೃಷ್ಣನು ಅದರ ನೋವನ್ನು ಹೋಗಲಾಡಿಸಲು ಮದಗಜದಂತೆ ನಿಧಾನವಾಗಿ ನಡೆಯುತ್ತಾ , ಕೊಳಲನ್ನು ನುಡಿಸುತ್ತಾ ಹೋಗುತ್ತಿರುತ್ತಾನೆ. ಅವರ ಚೇತೋಹಾರಿಯಾದ ವೇಣುಗಾನ, ಅವನ ನಡಿಗೆ ಮತ್ತು ಮಂದಹಾಸಗಳು ನಮ್ಮ ಹೃದಯದಲ್ಲಿ ಪ್ರೇಮವನ್ನು ಹಾಗೂ ಅವನನ್ನು ಸೇರಬೇಕೆಂಬ ಆಕಾಂಕ್ಷೆಯನ್ನು ಹೆಚ್ಚಿಸುತ್ತದೆ. ವಿಲಾಸದಿಂದ ಕೂಡಿದ ಅವನ ಕುಡಿನೋಟದಿಂದ ಪ್ರೇಮ ವಿಹ್ವಲರಾದ ನಾವು ವೃಕ್ಷಗಳಂತೆ ಜಡರಾಗಿಬಿಡುತ್ತೇವೆ. ಅವನಲ್ಲಿ ವಿಮೋಹಿತರಾದ ನಾವು ತುರುಬು ಬಿಚ್ಚಿಹೋಗುವುದೂ, ಸೀರೆ ಜಾರಿ ಹೋಗುವುದೂ ತಿಳಿಯದಷ್ಟು ತನ್ಮಯರಾಗುತ್ತೇವೆ. ॥ ೧೬-೧೭ ॥

ಮಣಿಧರಃ ಕ್ವಚಿದಾಗಣಯನ್ ಗಾ
ಮಾಲಯಾ ದಯಿತಗಂಧತುಲಸ್ಯಾಃ ।
ಪ್ರಣಯಿನೋಽನುಚರಸ್ಯ ಕದಾಂಸೇ
ಪ್ರಕ್ಷಿಪನ್ಭುಜಮಗಾಯತ ಯತ್ರ ॥ ೧೮ ॥

ಕ್ವಣಿತವೇಣುರವವಂಚಿತಚಿತ್ತಾಃ
ಕೃಷ್ಣಮನ್ವಸತ ಕೃಷ್ಣಗೃಹಿಣ್ಯಃ ।
ಗುಣಗಣಾರ್ಣಮನುಗತ್ಯ ಹರಿಣ್ಯೋ
ಗೋಪಿಕಾ ಇವ ವಿಮುಕ್ತಗೃಹಾಶಾಃ ॥ ೧೯ ॥

ಇನ್ನೊಬ್ಬ ಗೋಪಿಯು ಹೇಳುತ್ತಾಳೆ – ಗೆಳತಿಯರೇ ! ಮಣಿಗಳ ಸರವು ನಮ್ಮ ಶ್ಯಾಮಸುಂದರನ ಕೊರಳಿನಲ್ಲಿ ಸದಾ ವಿರಾಜಿಸುತ್ತವೆ. ತುಳಸಿಯ ಪರಿಮಳವು ಅವನಿಗೆ ಅತಿಪ್ರಿಯವಾಗಿದೆ. ಆದುದರಿಂದ ಶ್ರೀಕೃಷ್ಣನು ತುಳಸೀಮಾಲೆಯನ್ನು ನಿರಂತರವಾಗಿ ಧರಿಸಿಯೇ ಇರುತ್ತಾನೆ. ಅವನು ಮಣಿಗಳ ಮಾಲೆಯಿಂದ ಹಸುಗಳನ್ನು ಎಣಿಸುತ್ತಾ, ಮತ್ತೊಂದು ತೋಳನ್ನು ತನ್ನ ಪ್ರಿಯಸಖನ ಹೆಗಲ ಮೇಲಿಟ್ಟು ಹಾಡುತ್ತಿರುತ್ತಾನೆ. ಕೆಲವು ವೇಳೆ ಕೊಳಲನ್ನು ನುಡಿಸುತ್ತಿರುತ್ತಾನೆ. ಆ ಕರ್ಣಾನಂದಕರವಾದ ವೇಣುಗಾನದಿಂದ ಆಕರ್ಷಿತರಾದ ಹೆಣ್ಣು ಜಿಂಕೆಗಳು ಗೋಪಿಕೆಯರಾದ ನಾವು ಮನೆ-ಮಠ, ಪತಿ-ಸುತರನ್ನೂ, ಬಂಧು-ಬಾಂಧವರನ್ನು ಪರಿತ್ಯಜಿಸಿ ಶ್ರೀಕೃಷ್ಣನನ್ನು ಹಿಂಬಾಲಿಸಿದಂತೆ – ಸಕಲವನ್ನು ತ್ಯಜಿಸಿ ಮೇಯುವುದನ್ನು ಬಿಟ್ಟು ಗುಣಗಳಿಗೆ ಸಮುದ್ರ ಪ್ರಾಯನಾದ ಶ್ರೀಕೃಷ್ಣನನ್ನು ಹಿಂಬಾಲಿಸಿ ಹೋಗುತ್ತವೆ. ॥ ೧೮-೧೯ ॥

ಕುಂದದಾಮಕೃತಕೌತುಕವೇಷೋ
　ಗೋಪಗೋಧನವೃತೋ ಯಮುನಾಯಾಮ್ ।
ನಂದಸೂನುರನಘೇ ತವ ವತ್ಸೋ
　ನರ್ಮದಃ ಪ್ರಣಯಿನಾಂ ವಿಜಹಾರ ॥ ೨೦ ॥

ಮಂದವಾಯುರುಪವಾತ್ಯನುಕೂಲಂ
　ಮಾನಯನ್ ಮಲಯಜಸ್ಪರ್ಶೇನ ।
ವಂದಿನಸ್ತಮುಪದೇವಗಣಾ ಯೇ
　ವಾದ್ಯಗೀತಬಲಿಭಿಃ ಪರಿವವ್ರುಃ ॥ ೨೧ ॥

ವತ್ಸಲೋ ವ್ರಜಗವಾಂ ಯದಗಧ್ರೋ
　ವಂದ್ಯಮಾನಚರಣಃ ಪಥಿ ವೃದ್ಧೈಃ ।
ಕೃತ್ಸ್ನಗೋಧನಮುಪೋಹ್ಯ ದಿನಾಂತೇ
　ಗೀತವೇಣುರನುಗೇಡಿತಕೀರ್ತಿಃ ॥ ೨೨ ॥

ಉತ್ಸವಂ ಶ್ರಮರುಚಾಪಿ ದೃಶೀನಾ-
　ಮುನ್ನಯನ್ ಖುರರಜಶ್ಛುರಿತಸ್ರಕ್ ।
ದಿತ್ಸಯೈತಿ ಸುಹೃದಾಶಿಷ ಏಷ
　ದೇವಕೀಜಠರಭೂರುಡುರಾಜಃ ॥ ೨೩ ॥

ಮದವಿಘೂರ್ಣಿತಲೋಚನ ಈಷನ್-
　ಮಾನದಃ ಸ್ವಸುಹೃದಾಂ ವನಮಾಲೀ ।
ಬದರಪಾಂಡುವದನೋ ಮೃದುಗಂಡಂ
　ಮಂಡಯನ್ ಕನಕಕುಂಡಲಲಕ್ಷ್ಮ್ಯಾ ॥ ೨೪ ॥

ಮತ್ತೊಬ್ಬ ಗೋಪಿಕೆಯು ಹೇಳಿದಳು - ಯಶೋದಾ ರಾಣಿಯೇ! ಅಂತಹ ಜಗದಾನಂದಕಂದನನ್ನು ಮಗನನ್ನಾಗಿ ಪಡೆದಿರುವ ನೀನೇ ಪುಣ್ಯವತಿಯು. ಅವನ ಮನಸ್ಸು ಬಹಳ ಕೋಮಲವಾದುದು. ಅವನು ಬಗೆ-ಬಗೆಯ ಹಾಸ-ಪರಿಹಾಸಗಳ ಮೂಲಕವಾಗಿ ತನ್ನ ಗೆಳೆಯರಿಗೆ ಆನಂದವನ್ನುಂಟುಮಾಡುತ್ತಾ ಇರುತ್ತಾನೆ. ಗೋಪ-ಗೋಪಿಯರಿಗೆ ಕೌತುಕವನ್ನುಂಟುಮಾಡುವ ನಿನ್ನ ಮಗನು ವಿಚಿತ್ರವಾದ ವೇಷಗಳನ್ನು ಧರಿಸಿ, ಮಲ್ಲಿಗೆಯ ಹೂವಿನ ಹಾರವನ್ನು ಹಾಕಿಕೊಂಡು ಗೋ-ಗೋಪಾಲಕರೊಡನೆ ಯಮುನಾ ನದಿಯ ತೀರದಲ್ಲಿ ಆಟವಾಡುವಾಗ ಮಲಯಾಚಲ ಚಂದನದಂತೆ ಸುಗಂಧಿತವಾಯುವು ಮಂದ-ಮಂದವಾಗಿ ಅನುಕೂಲಕರವಾಗಿ ಬೀಸುತ್ತಾ ನಿನ್ನ ಮಗನ ಸೇವೆ ಮಾಡುತ್ತಾ ಇರುತ್ತದೆ. ಗಂಧರ್ವಾದಿ ಉಪದೇವತೆಗಳು ವಂದೀಜನರಂತೆ ಅವನ ಗುಣಗಾನವನ್ನು ಮಾಡುತ್ತಾ ಅವನನ್ನು ಸಂತೋಷಪಡಿಸುತ್ತಾ, ಅನೇಕ ಉಪಹಾರಾದಿಗಳನ್ನು ನೀಡಿ ಸುತ್ತಲೂ ನಿಂತು ಸೇವೆ ಮಾಡುತ್ತಾ ಇರುತ್ತಾರೆ. ॥ ೨೦-೨೧ ॥

ಇನ್ನೋರ್ವಳು ಹೇಳುತ್ತಾಳೆ - ಸಖಿಯರೇ! ನಮ್ಮ ಶ್ಯಾಮಸುಂದರನು ಗೋಕುಲದ ಗೋವುಗಳನ್ನು ಬಹಳವಾಗಿ ಪ್ರೀತಿಸುತ್ತಾನೆ. ಹಸುಗಳನ್ನು ರಕ್ಷಿಸುವುಕ್ಕಾಗಿಯೇ ಅವನು ಗೋವರ್ಧನವನ್ನು ಎತ್ತಿದುದು. ಈ ವೇಳೆಗಾಗಲೇ ನಮ್ಮ ಪ್ರೇಮಮೂರ್ತಿಯು ಗೋವುಗಳನ್ನು ಅಟ್ಟಿಕೊಂಡು ಗೋಕುಲದ ಕಡೆಗೆ ಬರುತ್ತಿರಬಹುದು. ಆದರೂ ಏಕಿಷ್ಟು ತಡವಾಗುತ್ತಿದೆ ? ವಯೋವೃದ್ಧರೂ, ಜ್ಞಾನವೃದ್ಧರೂ, ತಪೋವೃದ್ಧರೂ ಅವನ ಚರಣಗಳಿಗೆ ವಂದಿಸುತ್ತಿರಬಹುದು. ಈಗ ಅವನು ಕೊಳಲನ್ನೂದುತ್ತಾ ಗೋವುಗಳ ಹಿಂದೆ ಹಿಂದೆಯೇ ಬರುತ್ತಿರಬಹುದು. ಹಸುಗಳ ಗೊರಸುಗಳಿಂದ ಎದ್ದ ಧೂಳಿಯು ಶ್ರೀಕೃಷ್ಣನ ವನಮಾಲೆಯನ್ನು ಮುಚ್ಚಿಕೊಂಡಿದೆ. ಅವನು ದಿನವೆಲ್ಲ ತಿರುಗಿ-ತಿರುಗಿ ಬಹಳವಾಗಿ ದಣಿದಿದ್ದಾನೆ. ಆ ಬಳಲಿಕೆಯಿಂದ ಸೌಂದರ್ಯವೇ ಅಡಗಿದೆ. ಅವನ ಅಲೌಕಿಕವಾದ ಶೋಭೆಯಿಂದಲೇ - ನಮ್ಮ ಕಣ್ಣುಗಳಿಗೆ ಆನಂದವನ್ನುಂಟು ಮಾಡುತ್ತಾನೆ. ಯಶೋದಾದೇವಿಯ ಗರ್ಭಾಂಬುಧಿಯಲ್ಲಿ ಹುಟ್ಟಿ ಸಮಸ್ತರಿಗೂ ಆಹ್ಲಾದವನ್ನು ಉಂಟುಮಾಡುವ ಶ್ರೀಕೃಷ್ಣಚಂದ್ರನು ಭಕ್ತಜನರಿಗೆ ಒಳ್ಳೆಯದನ್ನು ಮಾಡಲಿಕ್ಕಾಗಿ, ನಮ್ಮ ಆಸೆ-ಆಕಾಂಕ್ಷೆಗಳನ್ನು ಪೂರ್ಣಗೊಳಿಸಲಿಕ್ಕಾಗಿಯೇ ನಮ್ಮ ಬಳಿಗೆ ಈಗ ಬರುತ್ತಿದ್ದಾನೆ. ॥ ೨೨-೨೩ ॥

ಸಖಿಯರೇ ! ಇನಿಯನ ಸೌಂದರ್ಯವೆಷ್ಟೆಂಬುದನ್ನು ನೋಡಿ. ಅವನ ಕಣ್ಣುಗಳು ಮದದಿಂದ ಸೊಕ್ಕಿರುವಂತೆ ಕಾಣುತ್ತಿವೆ. ಅವನು ಕೊರಳಲ್ಲಿ ಸುಂದರವಾದ ವನಮಾಲೆಯನ್ನು ಧರಿಸಿದ್ದಾನೆ. ಚಿನ್ನದ ಕರ್ಣಾಭರಣಗಳಿಂದ ಅವನ ಕೆನ್ನೆಗಳು ಅಲಂಕೃತವಾಗಿವೆ. ಸ್ವಲ್ಪ ಪಕ್ವವಾದ ಬೋರೆ ಹಣ್ಣಿನಂತೆ ಕಿರುಹಳದಿಯಾದ ಮುಖಾರವಿಂದದಿಂದ ರಾರಾಜಿಸುತ್ತಿದ್ದಾನೆ. ರೋಮ-ರೋಮಗಳಲ್ಲಿ ವಿಶೇಷವಾಗಿ ಮುಖಕಮಲದಲ್ಲಿ ಪ್ರಸನ್ನತೆಯು ಮೂಡಿದೆ. ಅದೋ ನೋಡು, ನೋಡು ! ಈಗ ಅವನು ಸ್ನೇಹಿತರಾದ ಗೊಲ್ಲಬಾಲಕರನ್ನು ಸಂತೈಸಿ ಬೀಳ್ಕೊಳ್ಳುತ್ತಿರುವನು. ವ್ರಜವಿಭೂಷಣ ಶ್ರೀಕೃಷ್ಣನು ಮದಭರಿತ ಗಜರಾಜನ ನಡಿಗೆಯಂತೆ ನಡೆಯುತ್ತಾ ಈ

ಯದುಪತಿರ್ದ್ವಿರದರಾಜವಿಹಾರೋ
ಯಾಮಿನೀಪತಿರಿವೈಷ ದಿನಾಂತೇ ।
ಮುದಿತವಕ್ತ್ರ ಉಪಯಾತಿ ದುರಂತಂ
ಮೋಚಯನ್ ವ್ರಜಗವಾಂ ದಿನತಾಪಮ್ ॥ ೨೫ ॥

ಶ್ರೀಶುಕ ಉವಾಚ

ಏವಂ ವ್ರಜಸ್ತ್ರಿಯೋ ರಾಜನ್ ಕೃಷ್ಣಲೀಲಾ ನು ಗಾಯತೀಃ ।
ರೇಮಿರೇಽಹಸ್ಸು ತಚ್ಚಿತ್ತಾಸ್ತನ್ಮನಸ್ಕಾ ಮಹೋದಯಾಃ
॥ ೨೬ ॥

ಸಂಧ್ಯಾಕಾಲದಲ್ಲಿ ನಮ್ಮ ಬಳಿಗೆ ಬರುತ್ತಿರವನು. ವ್ರಜದಲ್ಲಿರುವ ಗೋವುಗಳ ಮತ್ತು ನಮ್ಮಗಳ ಹಗಲಿನ ಅಸಹನೀಯವಾದ ವಿರಹತಾಪನ್ನು ಹೋಗಲಾಡಿಸಲು ಉದಯಿಸುವ ಚಂದ್ರನಂತೆ ಪ್ರಿಯ ಶ್ಯಾಮಸುಂದರನು ನಮ್ಮ ಬಳಿಗೆ ಬರುತ್ತಿದ್ದಾನೆ. ॥೨೪-೨೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಶ್ರೇಷ್ಠರಾದ ಗೋಪಿಯರ ಮನಸ್ಸು ಶ್ರೀಕೃಷ್ಣನಲ್ಲೇ ಲೀನವಾಗಿ ಹೋಗಿತ್ತು. ಅವರೆಲ್ಲರೂ ಕೃಷ್ಣಮಯರೇ ಆಗಿದ್ದರು. ಭಗವಾನ್ ಶ್ರೀಕೃಷ್ಣನು ಬೆಳಿಗ್ಗೆ ಗೋವುಗಳನ್ನು ಮೇಯಿಸಲು ವೃಂದಾವನಕ್ಕೆ ಹೊರಟು ಹೋದಾಗ, ಸಖಿಯರೆಲ್ಲರೂ ಸೇರಿ ಅವನನ್ನೇ ಚಿಂತಿಸುತ್ತಾ ಅವನ ಲೀಲೆಗಳನ್ನು ಹಾಡುತ್ತಾ ಅದರಲ್ಲೇ ರಮಿಸಿ ಹೋಗುತ್ತಾರೆ. ಹೀಗೆ ತಮ್ಮ ದಿನಗಳನ್ನು ಅವರು ಕಳೆಯುತ್ತಾರೆ. ॥ ೨೬ ॥

ಮೂವತ್ತೈದನೆಯ ಅಧ್ಯಾಯವು ಮುಗಿಯಿತು. ॥ ೩೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ವೃಂದಾವನಕ್ರೀಡಾಯಾಂ ಗೋಪಿಕಾ ಯುಗಳಗೀತಂ ನಾಮ ಪಂಚತ್ರಿಂಶೋಽಧ್ಯಾಯಃ ॥ ೩೫ ॥

# ಮೂವತ್ತಾರನೆಯ ಅಧ್ಯಾಯ

## ಅರಿಷ್ಟಾಸುರನ ಉದ್ಧಾರ, ಕಂಸನು ಅಕ್ರೂರನನ್ನು ವ್ರಜಕ್ಕೆ ಕಳುಹಿಸಿಕೊಟ್ಟಿದ್ದು

ಶ್ರೀಶುಕ ಉವಾಚ

ಅಥ ತರ್ಹ್ಯಾಗತೋ ಗೋಷ್ಠಮರಿಷ್ಟೋ ವೃಷಭಾಸುರಃ ।
ಮಹೀಂ ಮಹಾಕಕುತ್ಕಾಯಃ ಕಂಪಯನ್ ಖುರವಿಕ್ಷತಾಮ್
॥ ೧ ॥

ರಂಭಮಾಣಃ ಖರತರಂ ಪದಾ ಚ ವಿಲಿಖನ್ಮಹೀಮ್ ।
ಉದ್ಯಮ್ಯ ಪುಚ್ಛಂ ವಪ್ರಾಣಿ ವಿಷಾಣಾಗ್ರೇಣ ಚೋದ್ಧರನ್
॥ ೨ ॥

ಕಿಂಚಿತ್ಕಿಂಚಚ್ಛಕೃನ್ಮುಂಚನ್ ಮೂತ್ರಯನ್ ಸ್ತಬ್ಧಲೋಚನಃ ।
ಯಸ್ಯ ನಿರ್ಹ್ರಾದಿತೇನಾಂಗ ನಿಷ್ಠುರೇಣ ಗವಾಂ ನೃಣಾಮ್
॥ ೩ ॥

ಪತಂತ್ಯಕಾಲತೋ ಗರ್ಭಾಃ ಸ್ರವಂತಿ ಸ್ಮ ಭಯೇನ ವೈ ।
ನಿರ್ವಿಶಂತಿ ಘನಾ ಯಸ್ಯ ಕಕುದ್ಯಚಲಶಂಕಯಾ
॥ ೪ ॥

ತಂ ತೀಕ್ಷ್ಣಶೃಂಗಮುದ್ವೀಕ್ಷ್ಯ ಗೋಪ್ಯೋ ಗೋಪಾಶ್ಚ ತತ್ರಸುಃ ।
ಪಶವೋ ದುದ್ರುವುರ್ಭೀತಾ ರಾಜನ್ ಸಂತ್ಯಜ್ಯ ಗೋಕುಲಮ್
॥ ೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಗೋ-ಗೋಪಾಲಕರೊಂದಿಗೆ ವ್ರಜಕ್ಕೆ ಹಿಂದಿರುಗುತ್ತಿರುವಾಗ ಮಹಾಕಾಯನಾದ ಅರಿಷ್ಟಾಸುರನೆಂಬ ದೈತ್ಯನು ಎತ್ತರವಾದ ಹಿಳಲುಗಳುಳ್ಳ ಗೂಳಿಯ ರೂಪವನ್ನು ಧರಿಸಿ ತನ್ನ ಗೊರಸುಗಳಿಂದ ಭೂಮಿಯನ್ನು ಕೆದಕುತ್ತಾ, ನಡುಗಿಸುತ್ತಾ ಗೋಕುಲಕ್ಕೆ ನುಗ್ಗಿದನು. ॥ ೧ ॥ ಅವನು ಗಟ್ಟಿಯಾಗಿ ಗರ್ಜಿಸುತ್ತಾ, ಕಾಲುಗಳಿಂದ ಧೂಳನ್ನು ಹಾರಿಸುತ್ತಿದ್ದನು. ಬಾಲವನ್ನೆತ್ತಿಕೊಂಡು, ಕೋಡುಗಳಿಂದ ಹೊಲಗಳ ಬದುಗಳನ್ನು, ಆವಾರದ ಗೋಡೆಗಳನ್ನು ಕೆಡಹುತ್ತಾ ಹೋಗುತ್ತಿದ್ದನು. ॥ ೨ ॥ ಆ ಗೂಳಿಯ ರೂಪದ ರಾಕ್ಷಸನು ಬಾರಿ-ಬಾರಿಗೂ ಸ್ವಲ್ಪ-ಸ್ವಲ್ಪ ಪುರೀಷ-ಮೂತ್ರೋತ್ಸರ್ಜನೆ ಮಾಡುತ್ತಿದ್ದನು. ಎವೆಯಿಕ್ಕದೆ ಕಣ್ಣುಗಳಿಂದ ದುರುಗುಟ್ಟಿಕೊಂಡು ನೋಡುತ್ತಿದ್ದನು. ಅವನ ನಿಷ್ಠುರವಾದ ಗುಟರಿನಿಂದ ಸ್ತ್ರೀಯರ ಮತ್ತು ಹಸುಗಳ ಗರ್ಭಗಳು ಅಕಾಲದಲ್ಲಿ ಕಳಚಿ ಬೀಳುತ್ತಿದ್ದವು. ಕೆಲವರಿಗೆ ಭಯದಿಂದಲೇ ಗರ್ಭಸ್ರಾವವಾಗುತ್ತಿತ್ತು. ಅರಿಷ್ಟಾಸುರನ ಹಿಳಲಿನ ಮೇಲೆ ಅದು ಪರ್ವತವಾಗಿರಬಹುದೆಂದು ಭ್ರಮಿಸಿ ಮೋಡಗಳು ಕುಳಿತುಕೊಳ್ಳುತ್ತಿದ್ದವು. ॥ ೩-೪ ॥ ಪರೀಕ್ಷಿತನೇ! ತೀಕ್ಷ್ಣವಾದ ಕೊಂಬುಗಳುಳ್ಳ ಆ ಗೂಳಿಯನ್ನು ನೋಡಿ ಗೋಪಿಯರು, ಗೋಪಾಲಕರೆಲ್ಲರೂ ಭಯಗೊಂಡರು. ಪಶುಗಳಾದರೋ ಅತ್ಯಂತ ಭಯದಿಂದ ಗೋಕುಲವನ್ನೇ ತೊರೆದು ಓಡಿಹೋದವು. ॥ ೫ ॥

ಕೃಷ್ಣ ಕೃಷ್ಣೇತಿ ತೇ ಸರ್ವೇ ಗೋವಿಂದಂ ಶರಣಂ ಯಯುಃ ।
ಭಗವಾನಪಿ ತದ್ವೀಕ್ಷ್ಯ ಗೋಕುಲಂ ಭಯವಿದ್ರುತಮ್
॥ ೬ ॥

ಮಾ ಭೈಷ್ಟೇತಿ ಗಿರಾಽಽಶ್ವಾಸ್ಯ ವೃಷಾಸುರಮುಪಾಹ್ವಯತ್ ।
ಗೋಪಾಲೈಃ ಪಶುಭಿರ್ಮಂದ ತ್ರಾಸಿತೈಃ ಕಿಮಸತ್ತಮ
॥ ೭ ॥

ಬಲದರ್ಪಹಾಹಂ ದುಷ್ಟಾನಾಂ ತ್ವದ್ವಿಧಾನಾಂ ದುರಾತ್ಮನಾಮ್ ।
ಇತ್ಯಾಸ್ಫೋಟ್ಯಾಚ್ಯುತೋಽರಿಷ್ಟಂ ತಲಶಬ್ದೇನ ಕೋಪಯನ್
॥ ೮ ॥

ಸಖ್ಯುರಂಸೇ ಭುಜಾಭೋಗಂ ಪ್ರಸಾರ್ಯಾವಸ್ಥಿತೋ ಹರಿಃ ।
ಸೋಽಪ್ಯೇವಂ ಕೋಪಿತೋಽರಿಷ್ಟಃ ಖುರೇಣಾವನಿಮುಲ್ಲಿಖನ್ ।
ಉದ್ಯತ್ಪುಚ್ಛಭ್ರಮನ್ಮೇಘಃ ಕ್ರುದ್ಧಃ ಕೃಷ್ಣಮುಪಾದ್ರವತ್
॥ ೯ ॥

ಅಗ್ರನ್ಯಸ್ತವಿಷಾಣಾಗ್ರಃ ಸ್ತಬ್ಧಾಸೃಗ್ಲೋಚನೋಽಚ್ಯುತಮ್ ।
ಕಟಾಕ್ಷಿಪ್ಯಾದ್ರವತ್ತೂರ್ಣಮಿಂದ್ರಮುಕ್ತೋಽಶನಿರ್ಯಥಾ
॥ ೧೦ ॥

ಗೃಹೀತ್ವಾ ಶೃಂಗಯೋಸ್ತಂ ವಾ ಅಷ್ಟಾದಶ ಪದಾನಿ ಸಃ ।
ಪ್ರತ್ಯಪೋವಾಹ ಭಗವಾನ್ ಗಜಃ ಪ್ರತಿಗಜಂ ಯಥಾ
॥ ೧೧ ॥

ಸೋಽಪವಿದ್ಧೋ ಭಗವತಾ ಪುನರುತ್ಥಾಯ ಸತ್ವರಃ ।
ಆಪತತ್ಸ್ವಿನ್ನಸರ್ವಾಂಗೋ ನಿಃಶ್ವಸನ್ ಕ್ರೋಧಮೂರ್ಛಿತಃ
॥ ೧೨ ॥

ತಮಾಪತಂತಂ ಸ ನಿಗೃಹ್ಯ ಶೃಂಗಯೋಃ
ಪದಾ ಸಮಾಕ್ರಮ್ಯ ನಿಪಾತ್ಯ ಭೂತಲೇ ।
ನಿಷ್ಪೀಡಯಾಮಾಸ ಯಥಾಽಽರ್ದ್ರಮಂಬರಂ
ಕೃತ್ವಾ ವಿಷಾಣೇನ ಜಘಾನ ಸೋಽಪತತ್ ॥ ೧೩ ॥

ಅಸೃಗ್ ವಮನ್ಮೂತ್ರಶಕೃತ್ ಸಮುತ್ಸೃಜನ್
ಕ್ಷಿಪಂಶ್ಚ ಪಾದಾನನವಸ್ಥಿತೇಕ್ಷಣಃ ।
ಜಗಾಮ ಕೃಚ್ಛ್ರಂ ನಿರ್ಋತೇರಥ ಕ್ಷಯಂ
ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ ॥ ೧೪ ॥

ಏವಂ ಕಕುದ್ಮಿನಂ ಹತ್ವಾ ಸ್ತೂಯಮಾನಃ ಸ್ವಜಾತಿಭಿಃ ।
ವಿವೇಶ ಗೋಷ್ಠಂ ಸಬಲೋ ಗೋಪೀನಾಂ ನಯನೋತ್ಸವಃ
॥ ೧೫ ॥

ಆ ಸಮಯದಲ್ಲಿ ವ್ರಜವಾಸಿಗಳೆಲ್ಲರೂ 'ಶ್ರೀಕೃಷ್ಣ! ಕೃಷ್ಣಾ! ನಮ್ಮನ್ನು ಕಾಪಾಡು, ಕಾಪಾಡು' ಎಂದು ಕೂಗುತ್ತಾ ಭಗವಾನ್ ಶ್ರೀಕೃಷ್ಣನಿಗೆ ಶರಣಾದರು. ಗೋಕುಲವು ಅತ್ಯಂತ ಭಯಾತುರವಾಗಿ ಇರುವುದನ್ನು ಭಗವಂತನು ನೋಡಿದನು. ॥ ೬ ॥ ಆಗ ಅವನು 'ಹೆದರ ಬೇಡಿರಿ, ಭಯಪಡಬೇಡಿ' ಎಂದು ಹೇಳುತ್ತಾ ಅವರಲ್ಲಿ ಧೈರ್ಯವನ್ನು ತುಂಬಿ, ಮತ್ತೆ ವೃಷಾಸುರನನ್ನು ಸಂಬೋಧಿಸುತ್ತಾ 'ಎಲೈ ಮೂರ್ಖನೇ! ಮಹಾದುಷ್ಟನೇ! ನೀನು ಈ ಗೋವುಗಳನ್ನು, ಗೋಪಾಲಕರನ್ನು ಏಕೆ ಹೆದರಿಸುತ್ತಿರುವೆ? ॥ ೭ ॥ ನೋಡು, ನಿನ್ನಂತಹ ದುರಾತ್ಮರಾದ ದುಷ್ಟರ ಬಲವನ್ನು ಮುರಿಯುವಂತಹ ಕಾಲನೇ ಆಗಿದ್ದೇನೆ ನಾನು.' ಈ ಪ್ರಕಾರವಾಗಿ ಕೆಣಕುತ್ತಾ ಅವನನ್ನು ಚಪ್ಪಾಳೆತಟ್ಟಿ ಕೋಪವನ್ನು ಕೆರಳಿಸುತ್ತಾ ಅವನು ಓರ್ವ ಸ್ನೇಹಿತನ ಹೆಗಲ ಮೇಲೆ ಕೈಯನ್ನಿಡುತ್ತಾ ನಿಂತುಕೊಂಡನು. ಭಗವಾನ್ ಶ್ರೀಕೃಷ್ಣನ ಈ ಮಾತಿನಿಂದ ಆ ದುಷ್ಟನು ಕ್ರೋಧಾವಿಷ್ಟನಾಗಿ ತನ್ನ ಗೊರಸುಗಳಿಂದ ಭೂಮಿಯನ್ನು ಕೆರೆಯುತ್ತಾ ಶ್ರೀಕೃಷ್ಣನ ಕಡೆಗೆ ನುಗ್ಗಿದನು. ಆಗ ಅವನು ಬಾಲದಿಂದ ಆಕಾಶದಲ್ಲಿನ ಮೋಡಗಳನ್ನು ಚದುರಿಸುತ್ತಿದ್ದನು. ॥ ೮-೯ ॥ ಅವನು ತೀಕ್ಷ್ಣವಾದ ಕೋಡುಗಳನ್ನು ಮುಂದೆ ಚಾಚಿಕೊಂಡು, ಕೆಂಡದಂತಹ ಕಣ್ಣುಗಳಿಂದ ಶ್ರೀಕೃಷ್ಣನನ್ನು ದುರುಗುಟ್ಟಿ ನೋಡುತ್ತಾ ಇಂದ್ರನಿಂದ ಬಿಡಲ್ಪಟ್ಟ ವಜ್ರಾಯುಧದಂತೆ ಅತ್ಯಂತ ವೇಗವಾಗಿ ಅವನ ಮೇಲೆ ಎರಗಿದನು. ॥ ೧೦ ॥ ಭಗವಾನ್ ಶ್ರೀಕೃಷ್ಣನು ತನ್ನ ಕೈಗಳಿಂದ ಅವನ ಎರಡು ಕೋಡುಗಳನ್ನು ಹಿಡಿದು-ಆನೆಯು ಎದುರಾಳಿಯಾದ ಆನೆಯನ್ನು ಹಿಂದಕ್ಕೆ ತಳ್ಳುವಂತೆ ಅಸುರನನ್ನು ಹಿಂದಕ್ಕೆ ತಳ್ಳಿ, ಬೀಳಿಸಿ ಬಿಟ್ಟನು. ॥ ೧೧ ॥ ಹೀಗೆ ಭಗವಂತನಿಂದ ತಳ್ಳಲ್ಪಟ್ಟು ಕೆಳಕ್ಕೆ ಬಿದ್ದರೂ ಅವನು ಶೀಘ್ರವಾಗಿ ಎದ್ದು ನಿಂತನು. ಅವನ ಶರೀರವು ಬೆವರುತ್ತಿತ್ತು. ಅವನು ಬಿರುಸಾಗಿ ನಿಟ್ಟುಸಿರು ಬಿಡುತ್ತಾ, ಅತ್ಯಂತ ಕ್ರುದ್ಧನಾಗಿ ಪುನಃ ಶ್ರೀಕೃಷ್ಣನ ಮೇಲೆ ಎರಗಿದನು. ॥ ೧೨ ॥ ದೈತ್ಯನು ತನ್ನ ಮೇಲೆ ಪ್ರಹರಿಸುತ್ತಿರುವನೆಂದು ನೋಡಿದ ಶ್ರೀಕೃಷ್ಣನು ಅವನ ಕೊಂಬುಗಳನ್ನು ಹಿಡಿದು, ಕಾಲಿನಿಂದ ಒದ್ದು ನೆಲಕ್ಕೆ ಬೀಳಿಸಿದನು. ಕಾಲಿನಿಂದ ಒತ್ತಿಹಿಡಿದು ಬಟ್ಟೆಯನ್ನು ಹಿಂಡುವಂತೆ ಅದರ ಕೊಂಬುಗಳನ್ನು ಹಿಗ್ಗಾ-ಮುಗ್ಗಾ ತಿರುಗಿಸುತ್ತಾ, ಆ ಕೊಂಬುಗಳನ್ನು ಕಿತ್ತು ಅದರಿಂದಲೇ ಅರಿಷ್ಟಾಸುರನನ್ನು ಪ್ರಹರಿಸಿದನು. ॥ ೧೩ ॥ ಪರೀಕ್ಷಿತನೇ! ಹೀಗೆ ಆ ದೈತ್ಯನು ಬಾಯಿಂದ ರಕ್ತವನ್ನು ಕಾರುತ್ತಾ ಮೂತ್ರ-ಪುರೀಷಗಳನ್ನು ವಿಸರ್ಜಿಸುತ್ತಾ, ಕಾಲನ್ನು ಬಡಿಯುತ್ತಾ, ಕಣ್ಣುಗಳನ್ನು ತಿರುಗಿಸುತ್ತಾ ಬಹಳ ಕಷ್ಟದಿಂದ ಪ್ರಾಣಗಳನ್ನು ತ್ಯಜಿಸಿದನು. ಆಗ ದೇವತೆಗಳು ಭಗವಂತನ ಮೇಲೆ ಹೂವಿನ ಮಳೆ ಸುರಿಸುತ್ತಾ ಅವನನ್ನು ಸ್ತುತಿಸತೊಡಗಿದರು. ॥ ೧೪ ॥ ಭಗವಾನ್ ಶ್ರೀಕೃಷ್ಣನು ಹೀಗೆ ಗೂಳಿಯ ರೂಪದಲ್ಲಿ ಬಂದ ಅರಿಷ್ಟಾಸುರನನ್ನು ಕೊಂದು ಹಾಕಿದಾಗ ಎಲ್ಲ ಗೋಪಾಲಕರು ಅವನನ್ನು ಪ್ರಶಂಸಿಸಿದರು. ಅವನು ಬಲರಾಮನೊಂದಿಗೆ ಗೋಕುಲವನ್ನು ಪ್ರವೇಶಿಸಿದುದನ್ನು ನೋಡಿದ ಗೋಪಿಯರ ಕಣ್ಣುಗಳು ಆನಂದದಿಂದ ತುಂಬಿ ಬಂದುವು. ॥ ೧೫ ॥

ಅರಿಷ್ಟೇ ನಿಹತೇ ದೈತ್ಯೇ ಕೃಷ್ಣೇನಾದ್ಭುತಕರ್ಮಣಾ ।
ಕಂಸಾಯಾಥಾಹ ಭಗವಾನ್ ನಾರದೋ ದೇವದರ್ಶನಃ ॥ ೧೬ ॥

ಯಶೋದಾಯಾಃ ಸುತಾಂ ಕನ್ಯಾಂ ದೇವಕ್ಯಾಃ ಕೃಷ್ಣಮೇವ ಚ ।
ರಾಮಂ ಚ ರೋಹಿಣೀಪುತ್ರಂ ವಸುದೇವೇನ ಬಿಭ್ಯತಾ ॥ ೧೭ ॥

ನ್ಯಸ್ತೌ ಸ್ವಮಿತ್ರೇ ನಂದೇ ವೈ ಯಾಭ್ಯಾಂ ತೇ ಪುರುಷಾ ಹತಾಃ ।
ನಿಶಮ್ಯ ತದ್ಭೋಜಪತಿಃ ಕೋಪಾತ್ ಪ್ರಚಲಿತೇಂದ್ರಿಯಃ ॥ ೧೮ ॥

ನಿಶಾತಮಸಿಮಾದತ್ತ ವಸುದೇವಜಿಘಾಂಸಯಾ ।
ನಿವಾರಿತೋ ನಾರದೇನ ತತ್ಸುತೌ ಮೃತ್ಯುಮಾತ್ಮನಃ ॥ ೧೯ ॥

ಜ್ಞಾತ್ವಾ ಲೋಹಮಯೈಃ ಪಾಶೈರ್ಬಬಂಧ ಸಹ ಭಾರ್ಯಯಾ ।
ಪ್ರತಿಯಾತೇ ತು ದೇವರ್ಷೌ ಕಂಸ ಆಭಾಷ್ಯ ಕೇಶಿನಮ್ ॥ ೨೦ ॥

ಪ್ರೇಷಯಾಮಾಸ ಹನ್ಯೇತಾಂ ಭವತಾ ರಾಮಕೇಶವೌ ।
ತತೋ ಮುಷ್ಟಿಕಚಾಣೂರಶಲತೋಶಲಕಾದಿಕಾನ್ ॥ ೨೧ ॥

ಅಮಾತ್ಯಾನ್ ಹಸ್ತಿಪಾಂಶ್ಚೈವ ಸಮಾಹೂಯಾಹ ಭೋಜರಾಟ್ ।
ಭೋ ಭೋ ನಿಶಮ್ಯ ತಾಮೇತದ್ವೀರಚಾಣೂರಮುಷ್ಟಿಕೌ ॥ ೨೨ ॥

ನಂದವ್ರಜೇ ಕಿಲಾಸಾತೇ ಸುತಾವಾನಕದುಂದುಭೇಃ ।
ರಾಮಕೃಷ್ಣೌ ತತೋ ಮಹ್ಯಂ ಮೃತ್ಯುಃ ಕಿಲ ನಿದರ್ಶಿತಃ ॥ ೨೩ ॥

ಭವದ್ಭ್ಯಾಮಿಹ ಸಂಪ್ರಾಪ್ತೌ ಹನ್ಯೇತಾಂ ಮಲ್ಲಲೀಲಯಾ ।
ಮಂಚಾಃ ಕ್ರಿಯಂತಾಂ ವಿವಿಧಾ ಮಲ್ಲರಂಗ ಪರಿಶ್ರಿತಾಃ ।
ಪೌರಾ ಜಾನಪದಾಃ ಸರ್ವೇ ಪಶ್ಯಂತು ಸ್ವೈರಸಂಯುಗಮ್ ॥ ೨೪ ॥

ಮಹಾಮಾತ್ರ ತ್ವಯಾ ಭದ್ರರಂಗದ್ವಾರ್ಯುಪನೀಯತಾಮ್ ।
ದ್ವಿಪಃ ಕುವಲಯಾಪೀಡೋ ಜಹಿ ತೇನ ಮಮಾಹಿತೌ ॥ ೨೫ ॥

ಆರಭ್ಯತಾಂ ಧನುರ್ಯಾಗಶ್ಚತುರ್ದಶ್ಯಾಂ ಯಥಾವಿಧಿ ।
ವಿಶಸಂತು ಪಶೂನ್ ಮೇಧ್ಯಾನ್ ಭೂತರಾಜಾಯ ಮೀಢುಷೇ ॥ ೨೬ ॥

ಪರೀಕ್ಷಿತ ಮಹಾರಾಜನೇ! ಭಗವಂತನ ಲೀಲೆಯು ಪರಮಾದ್ಭುತವಾದುದು. ಇತ್ತ ಅದ್ಭುತಕರ್ಮನಾದ ಶ್ರೀಕೃಷ್ಣನು ಅರಿಷ್ಟಾಸುರನನ್ನು ಶೀಘ್ರಾತಿಶೀಘ್ರವಾಗಿ ಸಂಹರಿಸಿದಾಗ, ಅತ್ತ ಮಥುರೆಯಲ್ಲಿ ಜನರಿಗೆ ಭಗವದ್ದರ್ಶನ ಮಾಡಿಸುವಂತಹ ಭಗವನ್ಮಯ ನಾರದರು ಕಂಸನ ಬಳಿಗೆ ಬಂದು ಇಂತೆಂದರು. ॥ ೧೬ ॥ ಎಲೈ ಕಂಸನೇ! ನಿನ್ನ ಕೈಯಿಂದ ತಪ್ಪಿಸಿಕೊಂಡು ಆಕಾಶಕ್ಕೆ ನೆಗೆದು ಹೋದ ಕನ್ಯೆಯು ಯಶೋದೆಯ ಪುತ್ರಿಯಾಗಿದ್ದಳು. ವ್ರಜದಲ್ಲಿರುವ ಶ್ರೀಕೃಷ್ಣನು ದೇವಕಿಯ ಪುತ್ರನಾಗಿದ್ದಾನೆ. ಬಲರಾಮನು ರೋಹಿಣಿ ಪುತ್ರನು. ವಸುದೇವನು ನಿನಗೆ ಹೆದರಿ ತನ್ನ ಮಿತ್ರನಾದ ನಂದಗೋಪನ ಬಳಿಯಲ್ಲಿ ಇವರಿಬ್ಬರನ್ನು ಇರಿಸಿರುವನು. ದೇವಕಿಯ ಪುತ್ರನಾದ ಶ್ರೀಕೃಷ್ಣನೇ ನಿನ್ನ ಅನುಚರರಾದ ದೈತ್ಯರನ್ನು ವಧಿಸಿದವನು. ನಾರದರ ಈ ಮಾತನ್ನು ಕೇಳಿದ ಕಂಸನ ಇಂದ್ರಿಯಗಳು ಕ್ರೋಧದಿಂದ ನಡುಗತೊಡಗಿದವು. ॥ ೧೭-೧೮ ॥ ಅವನು ವಸುದೇವನನ್ನು ಕೊಂದು ಹಾಕಲು ಖಡ್ಗವನ್ನು ಹಿರಿದನು. ಆದರೆ ನಾರದರು ಅವನನ್ನು ತಡೆದು ನಿಲ್ಲಿಸುತ್ತಾ, ಅವನ ಮಕ್ಕಳು ಮಾತ್ರವೇ ನಿನಗೆ ಮೃತ್ಯುರೂಪರಾಗಿರುವರು. ವಸುದೇವನಲ್ಲವಲ್ಲ. ಆಗ ಕಂಸನು ವಸುದೇವ-ದೇವಕಿಯರಿಬ್ಬರಿಗೂ ಕೈಗಳಿಗೆ ಕೋಳವನ್ನು ತೊಡಿಸಿ ಕಾರಾಗೃಹದಲ್ಲಿರಿಸಿದನು. ನಾರದ ಮಹರ್ಷಿಗಳು ಹೊರಟು ಹೋದ ಬಳಿಕ ಕಂಸನು ಕೇಶಿಯೆಂಬ ರಾಕ್ಷಸನನ್ನು ಕರೆದು ಹೇಳಿದನು – 'ನೀನು ಗೋಕುಲಕ್ಕೆ ಹೋಗಿ ಅಲ್ಲಿರುವ ಬಲರಾಮ-ಕೃಷ್ಣರನ್ನು ಕೊಂದುಬಿಡು. 'ಕೇಶಿಯು ಹಾಗೆಯೇ ಆಗಲೆಂದು ಹೇಳಿ ಹೊರಟುಹೋದನು. ಕೇಶಿಯು ಹೊರಟು ಹೋಗುತ್ತಲೇ ಕಂಸನು ಮುಷ್ಟಿಕ, ಚಾಣೂರ, ಶಲ, ತೋಶಲ ಮೊದಲಾದ ಜಟ್ಟಿಗಳನ್ನು ಮಂತ್ರಿಗಳನ್ನೂ ಮತ್ತು ಮಾವಟಿಗರನ್ನು ಕರೆಸಿ ಹೇಳಿದನು - ವೀರರಾದ ಚಾಣೂರ-ಮುಷ್ಟಿಕರೇ! ನೀವೆಲ್ಲರೂ ನನ್ನ ಮಾತನ್ನು ಗಮನವಿಟ್ಟು ಕೇಳಿರಿ. ॥ ೧೯-೨೨ ॥ ವಸುದೇವನ ಇಬ್ಬರು ಪುತ್ರರು ನಂದಗೋಪನ ವ್ರಜದಲ್ಲಿ ಇರುತ್ತಾರೆ. ಅವರ ಕೈಯಿಂದಲೇ ನನ್ನ ಮೃತ್ಯುವೆಂದು ಹಿಂದೆಯೇ ತಿಳಿಸಲಾಗಿದೆ. ॥ ೨೩ ॥ ಆದ್ದರಿಂದ ಅವರು ಇಲ್ಲಿಗೆ ಬಂದಾಗ ನೀವುಗಳು ಮಲ್ಲಯುದ್ಧದ ಮೂಲಕವಾಗಿ ನಾನಾ ಪ್ರಕಾರದ ವರಸೆಗಳನ್ನು ತೋರುತ್ತಾ ಅವರನ್ನು ಕೊಂದು ಹಾಕಿರಿ. ಮಲ್ಲಯುದ್ಧಕ್ಕಾಗಿ ರಂಗವನ್ನು ಕಲ್ಪಿಸಿರಿ. ರಂಗದ ಸುತ್ತಲೂ ಬಗೆ-ಬಗೆಯಾದ ಎತ್ತರದ ಆಸನಗಳನ್ನು ಕಲ್ಪಿಸಿರಿ. ಪಟ್ಟಣಿಗರೂ ದೇಶೀಯ ಜನರೂ ಸ್ವೇಚ್ಛೆಯಿಂದ ಮಲ್ಲಯುದ್ಧವನ್ನು ನೋಡಲಿ. ॥ ೨೪ ॥ ಮಾವಟಿಗನೇ! ನೀನು ತುಂಬಾ ಚತುರನಾಗಿರುವೆ. ನೋಡು, ನೀನು ರಂಗಸ್ಥಳದ ಮಹಾದ್ವಾರದಲ್ಲೇ ನಮ್ಮ ಕುವಲಯಾಪೀಡ ಸಲಗವನ್ನು ನಿಲ್ಲಿಸಿಕೊಂಡಿರಬೇಕು. ನನ್ನ ಶತ್ರುಗಳು ಆ ದಾರಿಯಿಂದ ಬರುತ್ತಲೇ ಆ ಆನೆಯಿಂದ ಅವರನ್ನು ಕೊಲ್ಲಿಸಿಬಿಡು. ॥ ೨೫ ॥ ಇದೇ ಚತುರ್ದಶಿಗೆ ವಿಧಿವತ್ತಾಗಿ ಧನುರ್ಯಜ್ಞವನ್ನು ಪ್ರಾರಂಭಿಸಿರಿ. ಅದರ ಸಫಲತೆಗಾಗಿ ವರದನಾದ ಭೂತಪತಿಯಾದ ರುದ್ರನ ಪ್ರೀತ್ಯರ್ಥವಾಗಿ ಪರಿಶುದ್ಧ ಪಶುಗಳನ್ನು ಬಲಿಕೊಡಿರಿ. ॥ ೨೬ ॥

ಇತ್ಯಾಜ್ಞಾಪ್ಯಾರ್ಥತಂತ್ರಜ್ಞ ಆಹೂಯ ಯದುಪುಂಗವಮ್ ।
ಗೃಹೀತ್ವಾ ಪಾಣಿನಾ ಪಾಣಿಂ ತತೋಽಕ್ರೂರಮುವಾಚ ಹ
॥ ೨೭ ॥

ಭೋ ಭೋ ದಾನಪತೇ ಮಹ್ಯಂ ಕ್ರಿಯತಾಂ ಮೈತ್ರಮಾದೃತಃ ।
ನಾನ್ಯಸ್ತ್ವತ್ತೋ ಹಿತತಮೋ ವಿದ್ಯತೇ ಭೋಜವೃಷ್ಣಿಷು
॥ ೨೮ ॥

ಅತಸ್ತ್ವಾಮಾಶ್ರಿತಃ ಸೌಮ್ಯ ಕಾರ್ಯಗೌರವಸಾಧನಮ್ ।
ಯಥೇಂದ್ರೋ ವಿಷ್ಣುಮಾಶ್ರಿತ್ಯ ಸ್ವಾರ್ಥಮಧ್ಯಗಮದ್ವಿಭುಃ
॥ ೨೯ ॥

ಗಚ್ಛ ನಂದವ್ರಜಂ ತತ್ರ ಸುತಾವಾನಕದುಂದುಭೇಃ ।
ಆಸಾತೇ ತಾವಿಹಾನೇನ ರಥೇನಾನಯ ಮಾ ಚಿರಮ್
॥ ೩೦ ॥

ನಿಸೃಷ್ಟಃ ಕಿಲ ಮೇ ಮೃತ್ಯುರ್ದೇವೈರ್ವೈಕುಂಠಸಂಶ್ರಯೈಃ ।
ತಾವಾನಯ ಸಮಂ ಗೋಪೈರ್ನಂದಾದ್ಯೈಃ ಸಾಭ್ಯುಪಾಯನೈಃ
॥ ೩೧ ॥

ಘಾತಯಿಷ್ಯ ಇಹಾನೀತೌ ಕಾಲಕಲ್ಪೇನ ಹಸ್ತಿನಾ ।
ಯದಿ ಮುಕ್ತೌ ತತೋ ಮಲ್ಲೈರ್ಘಾತಯೇ ವೈದ್ಯುತೋಪಮೈಃ
॥ ೩೨ ॥

ತಯೋರ್ನಿಹತಯೋಸ್ತಪ್ತಾನ್ ವಸುದೇವಪುರೋಗಮಾನ್ ।
ತದ್ಬಂಧೂನ್ ನಿಹನಿಷ್ಯಾಮಿ ವೃಷ್ಣಿಭೋಜದಶಾರ್ಹಕಾನ್
॥ ೩೩ ॥

ಉಗ್ರಸೇನಂ ಚ ಪಿತರಂ ಸ್ಥವಿರಂ ರಾಜ್ಯಕಾಮುಕಮ್ ।
ತದ್ಭ್ರಾತರಂ ದೇವಕಂ ಚ ಯೇ ಚಾನ್ಯೇ ವಿದ್ವಿಷೋ ಮಮ
॥ ೩೪ ॥

ತತಶ್ಚೈಷಾ ಮಹೀ ಮಿತ್ರ ಭವಿತ್ರೀ ನಷ್ಟಕಂಟಕಾ ।
ಜರಾಸಂಧೋ ಮಮ ಗುರುರ್ದ್ವಿವಿದೋ ದಯಿತಃ ಸಖಾ
॥ ೩೫ ॥

ಶಂಬರೋ ನರಕೋ ಬಾಣೋ ಮಯ್ಯೇವ ಕೃತಸೌಹೃದಾಃ ।
ತೈರಹಂ ಸುರಪಕ್ಷೀಯಾನ್ ಹತ್ವಾ ಭೋಕ್ಷ್ಯೇ ಮಹೀಂ ನೃಪಾನ್
॥ ೩೬ ॥

ಪರೀಕ್ಷಿತನೇ! ಹೀಗೆ ಮಂತ್ರಿಗಳಿಗೆ, ಜಟ್ಟಿಗಳಿಗೆ, ಮಾವಟಿಗನಿಗೆ ಆಜ್ಞಾಪಿಸಿ ತಂತ್ರಜ್ಞನಾದ ಆ ಕಂಸನು ಯದುಶ್ರೇಷ್ಠನಾದ ಅಕ್ರೂರನನ್ನು ಕರೆಸಿ, ಅವನ ಕೈಗಳನ್ನು ಹಿಡಿದುಕೊಂಡು ಅವನಿಗೆ ಹೇಳಿದನು. ॥ ೨೭ ॥ ಅಕ್ರೂರನೇ! ನೀನು ಉದಾರವಾದ ಮಹಾದಾನಿಯಾಗಿರುವೆ. ಎಲ್ಲ ರೀತಿಯಿಂದಲೂ ನೀನು ನನಗೆ ಆದರಣೀಯನಾಗಿರುವೆ. ಇಂದು ನೀನು ನನಗೆ ಮಿತ್ರೋಚಿತವಾದ ಒಂದು ಕಾರ್ಯವನ್ನು ನಡೆಸಿಕೊಡಬೇಕಾಗಿದೆ. ಏಕೆಂದರೆ, ಭೋಜವಂಶೀಯರಲ್ಲಿ, ವೃಷ್ಣಿವಂಶೀಯರಲ್ಲಿ, ಯಾದವರಲ್ಲಿ ನಿನಗಿಂತ ಹೆಚ್ಚಾಗಿ ನನ್ನ ಒಳಿತನ್ನು ಮಾಡುವವರು ಬೇರೆ ಯಾರು ಇಲ್ಲ. ॥ ೨೮ ॥ ನಾನು ಹೇಳಲಿರುವ ಕಾರ್ಯವು ಅತ್ಯಂತ ಮಹತ್ವಪೂರ್ಣವಾಗಿದೆ. ದೇವೇಂದ್ರನು ಸ್ವತಃ ಸಮರ್ಥನಾಗಿದ್ದರೂ ಮಹಾವಿಷ್ಣುವನ್ನು ಆಶ್ರಯಿಸಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವಂತೆ ನಾನು ನಿನ್ನನ್ನು ಆಶ್ರಯಿಸಿದ್ದೇನೆ. ॥ ೨೯ ॥ ಅಕ್ರೂರನೇ! ನೀನು ನಂದಗೋಪನ ವ್ರಜಕ್ಕೆ ಹೋಗಬೇಕು. ಅಲ್ಲಿ ವಸುದೇವನ ಇಬ್ಬರು ಪುತ್ರರಿದ್ದಾರೆ. ಅವರನ್ನು ಇದೇ ರಥದಲ್ಲಿ ಕುಳ್ಳಿರಿಸಿಕೊಂಡು ಇಲ್ಲಿಗೆ ಕರಕೊಂಡು ಬರಬೇಕು. ಇನ್ನು ಇದರಲ್ಲಿ ತಡಮಾಡಬಾರದು. ॥ ೩೦ ॥ ವಿಷ್ಣುವಿನ ಮೇಲೆ ಭರವಸೆಯನ್ನಿಟ್ಟಿರುವ ದೇವತೆಗಳು ಇವರಿಬ್ಬರನ್ನು ನನ್ನ ಮೃತ್ಯುವಿಗೆ ಕಾರಣವೆಂದು ನಿಶ್ಚಯಿಸಿರುವರೆಂದು ಕೇಳಿದ್ದೇನೆ. ಅದಕ್ಕಾಗಿ ಅವರಿಬ್ಬರನ್ನು ಕರೆದುಕೊಂಡು ಬಾ. ಜೊತೆಗೆ ನಂದಗೋಪನೇ ಮೊದಲಾದ ಗೋಪಾಲಕರು ಅಪಾರವಾದ ಕಾಣಿಕೆಗಳೊಂದಿಗೆ ಇಲ್ಲಿಗೆ ಬರುವಂತೆ ಮಾಡು. ॥ ೩೧ ॥ ಇಲ್ಲಿಗೆ ಬರುತ್ತಲೇ ನಾನು ಅವರನ್ನು ಕಾಲಸದೃಶವಾದ ಕುವಲಯಾಪೀಡವೆಂಬ ಆನೆಯಿಂದ ಕೊಲ್ಲಿಸಿ ಬಿಡುವೆನು. ಒಂದು ವೇಳೆ ಆ ಆನೆಯಿಂದ ಅವರು ಬದುಕುಳಿದರೆ, ವಜ್ರದಂತಿರುವ ಮಹಾಬಲಿಷ್ಠರಾದ ಮುಷ್ಟಿಕ, ಚಾಣೂರರೇ ಮೊದಲಾದ ಮಲ್ಲರಿಂದ ಕೊಲ್ಲಿಸಿ ಬಿಡುವೆನು. ॥ ೩೨ ॥ ಬಲರಾಮ-ಕೃಷ್ಣರು ಸತ್ತುಹೋದ ಮೇಲೆ ವಸುದೇವನೇ ಮೊದಲಾದ ವೃಷ್ಣಿವಂಶೀಯರು, ಭೋಜ ಮತ್ತು ದಾಶಾರ್ಹ ವಂಶೀಯರಾದ ಅವರ ಬಂಧುಗಳು ಶೋಕಾಕುಲರಾಗುವರು. ಮತ್ತೆ ನಾನೇ ಅವರೆಲ್ಲರನ್ನೂ ನನ್ನ ಕೈಯ್ಯಾರೆ ಕೊಂದು ಬಿಡುವೆನು. ॥ ೩೩ ॥ ನನ್ನ ತಂದೆಯಾದರೋ ಮುದುಕನಾಗಿದ್ದಾನೆ. ಆದರೂ ಅವನಿಗೆ ರಾಜ್ಯಲೋಭ ಇನ್ನೂ ಇದೆ. ಇದೆಲ್ಲ ಮಾಡಿದ ಮೇಲೆ ಅವನನ್ನೂ, ಅವನ ತಮ್ಮನಾದ ದೇವಕನನ್ನು ಹಾಗೂ ನನ್ನನ್ನು ದ್ವೇಷಿಸುವವರೆಲ್ಲರನ್ನು ಖಡ್ಗದಿಂದ ನಾನೇ ಸಾಯಿಸಿ ಬಿಡುವೆನು. ॥ ೩೪ ॥ ಪ್ರಾಣಸಖನೇ! ಅನಂತರವೇ ಈ ಭೂಮಂಡಲವು ನನಗೆ ಕಂಟಕರಹಿತವಾಗುತ್ತದೆ. ಜರಾಸಂಧನೇ ನನಗೆ ಪರಮಗುರು ಮತ್ತು ಮಾವನಾಗಿದ್ದಾನೆ. ವಾನರರಾಜ ದ್ವಿವಿದನೇ ನನ್ನ ಪ್ರಿಯಸಖನು. ॥ ೩೫ ॥ ಶಂಬರಾಸುರ, ನರಕಾಸುರ, ಬಾಣಾಸುರ ಇವರು ನನ್ನೊಡನೆ ಮೈತ್ರಿಯನ್ನು ಬೆಳೆಸಿದ್ದಾರೆ. ಇವರೆಲ್ಲರ ಸಹಾಯದಿಂದ ದೇವಪಕ್ಷಪಾತಿಯಾದ ರಾಜರೆಲ್ಲರನ್ನೂ ಕೊಂದು ಪೃಥ್ವಿಯ ನಿಷ್ಕಂಟಕವಾದ ರಾಜ್ಯವನ್ನು ನಾನು ಅನುಭವಿಸುತ್ತೇನೆ. ॥ ೩೬ ॥

ಏತಜ್ಜ್ಞಾತ್ವಾಽನಯ ಕ್ಷಿಪ್ರಂ ರಾಮಕೃಷ್ಣಾವಿಹಾರ್ಭಕೌ ।
ಧನುರ್ಮಖನಿರೀಕ್ಷಾರ್ಥಂ ದ್ರಷ್ಟುಂ ಯದುಪುರಶ್ರಿಯಮ್
॥ ೩೭ ॥

ಅಕ್ರೂರ! ಇದೆಲ್ಲ ರಹಸ್ಯದ ಮಾತುಗಳನ್ನು ನಾನು ನಿನಗೆ ಹೇಳಿರುವೆನು. ಈಗ ನೀನು ಅತಿಶೀಘ್ರವಾಗಿ ಬಲರಾಮ-ಕೃಷ್ಣರನ್ನು ಇಲ್ಲಿಗೆ ಕರೆದುಕೊಂಡು ಬಾ, ಅವರಿನ್ನೂ ಮಕ್ಕಳಾಗಿರುವುದರಿಂದ ಸುಲಭವಾಗಿ ಅವರನ್ನು ಮುಗಿಸಿಬಿಡಬಹುದು. ಧನುರ್ಯಜ್ಞವನ್ನು ಸಂದರ್ಶಿಸಲು ಮತ್ತು ರಾಜಧಾನಿಯಾದ ಮಥುರಾ ಪಟ್ಟಣದ ಸೊಬಗನ್ನು ವೀಕ್ಷಿಸಲು ಬರಬೇಕೆಂದು ಅವರಿಗೆ ತಿಳಿಸಬೇಕು. ॥ ೩೭ ॥

*ಅಕ್ರೂರ ಉವಾಚ*

ರಾಜನ್ಮನೀಷಿತಂ ಸಮ್ಯಕ್ ತವ ಸ್ವಾವದ್ಯಮಾರ್ಜನಮ್ ।
ಸಿದ್ಧ್ಯಸಿದ್ಧ್ಯೋಃ ಸಮಂ ಕುರ್ಯಾದ್ದೈವಂ ಹಿ ಫಲಸಾಧನಮ್
॥ ೩೮ ॥

**ಅಕ್ರೂರನು ಹೇಳಿದನು** - ಮಹಾರಾಜ ! ನೀನು ನಿನ್ನ ಮೃತ್ಯುವನ್ನು ಅರಿಷ್ಟವನ್ನು ತೊಡೆದು ಹಾಕುವುದಕ್ಕಾಗಿ ಹೀಗೆ ಯೋಚಿಸುವುದು ಸಾಧುವೇ ಆಗಿದೆ. ಕಾರ್ಯವು ಸಿದ್ಧಿಸಲಿ, ಸಿದ್ಧಿಸದೆ ಹೋಗಲಿ ಎರಡರಲ್ಲಿಯೂ ಸಮಭಾವವನ್ನಿಟ್ಟುಕೊಂಡು ಕಾರ್ಯ ಮಾಡುವುದು ಯುಕ್ತವಾಗಿದೆ. ಮನುಷ್ಯನಿಗೆ ಫಲವಾದರೋ ಪ್ರಯತ್ನದಿಂದ ದೊರೆಯದೆ ದೈವಪ್ರೇರಣೆಯಿಂದ ದೊರೆಯುತ್ತದೆ. ॥ ೩೮ ॥ ಮನುಷ್ಯನು ದೊಡ್ಡ-ದೊಡ್ಡ ಮನೋರಥಗಳನ್ನು ಹೆಣೆಯುತ್ತಾನೆ. ಆದರೆ ಅವನ್ನು ದೈವವು, ಪ್ರಾರಬ್ಧವು ಮೊದಲೇ ನಾಶಮಾಡಿಬಿಟ್ಟಿದೆ ಎಂಬುದನ್ನು ಅತನು ತಿಳಿಯುವುದಿಲ್ಲ, ಇದೇ ಕಾರಣದಿಂದ ಕೆಲವೊಮ್ಮೆ ಪ್ರಾರಬ್ಧಕ್ಕನುಕೂಲವಾಗಿ ಪ್ರಯತ್ನವು ಸಫಲವಾದರೆ ಹರ್ಷದಿಂದ ಹಿಗ್ಗುವನು. ಪ್ರತಿಕೂಲವಾಗಿ ವಿಫಲವಾದರೆ ಶೋಕಗ್ರಸ್ತನಾಗುತ್ತಾನೆ. ಹೀಗಿದ್ದರೂ ನಾನು ನಿನ್ನ ಆಜ್ಞೆಯನ್ನು ಪಾಲಿಸಿಯೇ ತೀರುತ್ತೇನೆ. ॥ ೩೯ ॥

ಮನೋರಥಾನ್ಕರೋತ್ಯುಚ್ಚೈರ್ಜನೋ ದೈವಹತಾನಪಿ ।
ಯುಜ್ಯತೇ ಹರ್ಷಶೋಕಾಭ್ಯಾಂ ತಥಾಪ್ಯಾಜ್ಞಾಂ ಕರೋಮಿ ತೇ
॥ ೩೯ ॥

*ಶ್ರೀಶುಕ ಉವಾಚ*

ಏವಮಾದಿಶ್ಯ ಚಾಕ್ರೂರಂ ಮಂತ್ರಿಣಶ್ಚ ವಿಸೃಜ್ಯ ಸಃ ।
ಪ್ರವಿವೇಶ ಗೃಹಂ ಕಂಸಸ್ತಥಾಕ್ರೂರಃ ಸ್ವಮಾಲಯಮ್
॥ ೪೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಕಂಸನು ಮಂತ್ರಿಗಳಿಗೆ ಮತ್ತು ಅಕ್ರೂರನಿಗೆ ಹೀಗೆ ಅಪ್ಪಣೆಯನ್ನು ಕೊಟ್ಟು ಎಲ್ಲರನ್ನು ಬೀಳ್ಕೊಟ್ಟನು. ಬಳಿಕ ಅವನು ತನ್ನರಮನೆಗೆ ಹೊರಟು ಹೋದನು. ಅಕ್ರೂರನು ತನ್ನ ಮನೆಗೆ ಮರಳಿದನು. ॥ ೪೦ ॥

ಮೂವತ್ತಾರನೆಯ ಅಧ್ಯಾಯವು ಮುಗಿಯಿತು. ॥ ೩೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ
ಅಕ್ರೂರ ಪ್ರೇಷಣಂ ನಾಮ ಷಟ್‌ತ್ರಿಂಶೋಽಧ್ಯಾಯಃ ॥ ೩೬ ॥

# ಮೂವತ್ತೇಳನೆಯ ಅಧ್ಯಾಯ

## ಕೇಶಿ-ವ್ಯೋಮಾಸುರರ ಉದ್ಧಾರ, ನಾರದರಿಂದ ಭಗವಂತನ ಸ್ತುತಿ

*ಶ್ರೀಶುಕ ಉವಾಚ*

ಕೇಶೀ ತು ಕಂಸಪ್ರಹಿತಃ ಖುರೈರ್ಮಹೀಂ
ಮಹಾಹಯೋ ನಿರ್ಜರಯನ್ಮನೋಜವಃ ।
ಸಟಾವಧೂತಾಭ್ರವಿಮಾನಸಂಕುಲಂ
ಕುರ್ವನ್ನಭೋ ಹೇಷಿತಭೀಷಿತಾಖಿಲಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ಕಂಸನು ಕಳಿಸಿದ ಕೇಶಿಯೆಂಬ ದೈತ್ಯನು ಕುದುರೆಯ ರೂಪವನ್ನು ಧರಿಸಿ ದೊಡ್ಡದಾದ ಶರೀರವನ್ನು ಹೊಂದಿ, ಗೊರಸುಗಳಿಂದ ಭೂಮಿಯನ್ನು ಕೆದಕುತ್ತಾ ಮನೋವೇಗದಂತೆ ಓಡುತ್ತಾ ಗೋಕುಲಕ್ಕೆ ಬಂದನು. ಅವನ ಹೆಗಲಮೇಲಿನ ಕೂದಲುಗಳಿಂದ ಆಕಾಶದಲ್ಲಿ ಮೋಡಗಳು, ವಿಮಾನಗಳು ಚದುರಿ ಹೋದುವು. ಅವನ ಭಯಂಕರ ಕೆನೆತದಿಂದ ಸಮಸ್ತರೂ ಭಯಗೊಂಡರು. ಅವನಿಗೆ ದೊಡ್ಡದಾದ ಕಣ್ಣುಗಳಿದ್ದು, ಬಾಯಿ ಯಾದರೋ

ವಿಶಾಲನೇತ್ರೋ ವಿಕಟಾಸ್ಯಕೋಟರೋ
　ಬೃಹದ್ಗಲೋ ನೀಲಮಹಾಂಬುದೋಪಮಃ ।
ದುರಾಶಯಃ ಕಂಸಹಿತಂ ಚಿಕೀರ್ಷು-
　ರ್ವ್ರಜಂ ಸ ನಂದಸ್ಯ ಜಗಾಮ ಕಂಪಯನ್ ॥ ೨ ॥

ತಂ ತ್ರಾಸಯಂತಂ ಭಗವಾನ್ ಸ್ವಗೋಕುಲಂ
　ತದ್ಧೇಷಿತೈರ್ವಾಲವಿಘೂರ್ಣಿತಾಂಬುದಮ್ ।
ಆತ್ಮಾನಮಾಜೌ ಮೃಗಯಂತಮಗ್ರಣೀ-
　ರುಪಾಹ್ವಯತ್ಸ ವ್ಯನದನ್ಮೃಗೇಂದ್ರವತ್ ॥ ೩ ॥

ಸ ತಂ ನಿಶಾಮ್ಯಾಭಿಮುಖೋ ಮುಖೇನ ಖಂ
　ಪಿಬನ್ನಿವಾಭ್ಯದ್ರವದತ್ಯಮರ್ಷಣಃ ।
ಜಘಾನ ಪದ್ಭ್ಯಾಮರವಿಂದಲೋಚನಂ
　ದುರಾಸದಶ್ಚಂಡಜವೋ ದುರತ್ಯಯಃ ॥ ೪ ॥

ತದ್ವಂಚಯಿತ್ವಾ ತಮಧೋಕ್ಷಜೋ ರುಷಾ
　ಪ್ರಗೃಹ್ಯ ದೋರ್ಭ್ಯಾಂ ಪರಿವಿಧ್ಯ ಪಾದಯೋಃ ।
ಸಾವಜ್ಞಮುತ್ಸೃಜ್ಯ ಧನುಃಶತಾಂತರೇ
　ಯಥೋರಗಂ ತಾರ್ಕ್ಷ್ಯಸುತೋ ವ್ಯವಸ್ಥಿತಃ ॥ ೫ ॥

ಸ ಲಬ್ಧಸಂಜ್ಞಃ ಪುನರುತ್ಥಿತೋ ರುಷಾ
　ವ್ಯಾದಾಯ ಕೇಶೀ ತರಸಾಽಽಪತದ್ಧರಿಮ್ ।
ಸೋಽಪ್ಯಸ್ಯ ವಕ್ತ್ರೇ ಭುಜಮುತ್ತರಂ ಸ್ಮಯನ್
　ಪ್ರವೇಶಯಾಮಾಸ ಯಥೋರಗಂ ಬಿಲೇ ॥ ೬ ॥

ದಂತಾ ನಿಪೇತುರ್ಭಗವದ್ಭುಜಸ್ಪೃಶ-
　ಸ್ತೇ ಕೇಶಿನಸ್ತಪ್ತಮಯಃಸ್ಪೃಶೋ ಯಥಾ ।
ಬಾಹುಶ್ಚ ತದ್ದೇಹಗತೋ ಮಹಾತ್ಮನೋ
　ಯಥಾಽಽಮಯಃ ಸಂವವೃಧೇ ಉಪೇಕ್ಷಿತಃ ॥ ೭ ॥

ಸಮೇಧಮಾನೇನ ಸ ಕೃಷ್ಣಬಾಹುನಾ
　ನಿರುದ್ಧವಾಯುಶ್ಚರಣಾಂಶ್ಚ ವಿಕ್ಷಿಪನ್ ।
ಪ್ರಸ್ವಿನ್ನಗಾತ್ರಃ ಪರಿವೃತ್ತಲೋಚನಃ
　ಪಪಾತ ಲೇಂಡಂ ವಿಸೃಜನ್ ಕ್ಷಿತೌ ವ್ಯಸುಃ ॥ ೮ ॥

ತದ್ದೇಹತಃ ಕರ್ಕಟಿಕಾಫಲೋಪಮಾದ್
　ವ್ಯಸೋರಪಾಕೃಷ್ಯ ಭುಜಂ ಮಹಾಭುಜಃ ।
ಅವಿಸ್ಮಿತೋಽಯತ್ನಹತಾರಿರುತ್ಸ್ಮಯೈಃ
　ಪ್ರಸೂನವರ್ಷೈರ್ದಿವಿಷದ್ಭಿರೀಡಿತಃ ॥ ೯ ॥

ಮರದ ಪೊಟರೆಯಂತಿತ್ತು. ಅವನನ್ನು ನೋಡುತ್ತಲೇ ಭಯವುಂಟಾಗುತ್ತಿತ್ತು. ಅವನಿಗೆ ದಪ್ಪವಾದ ಕುತ್ತಿಗೆಯಿತ್ತು. ಕಪ್ಪುಬಣ್ಣದ ವಿಶಾಲವಾದ ಅವನ ದೇಹವು ನೀಲಾಚಲದಂತಿತ್ತು. ಕೃಷ್ಣನನ್ನು ಸಂಹರಿಸಿ ಕಂಸನಿಗೆ ಹಿತವನ್ನುಂಟು ಮಾಡುವುದೇ ಅವನ ಆಶಯವಾಗಿತ್ತು. ಅವನು ನಡೆದಾಗ ಭೂಕಂಪವೇ ಆಗುತ್ತಿತ್ತು. ॥ ೧-೨ ॥ ಕೆನೆತಗಳಿಂದ ತನ್ನ ಗೋಕುಲವನ್ನೇ ಭಯಪಡಿಸುತ್ತಿದ್ದ, ಬಾಲದ ಕೂದಲುಗಳಿಂದ ಮೋಡಗಳನ್ನೇ ಚದುರಿಸುತ್ತಿದ್ದ, ಯುದ್ಧಕ್ಕಾಗಿ ತನ್ನನ್ನು ಗೋಕುಲದಲ್ಲಿ ಹುಡುಕುತ್ತಿದ್ದ ಕೇಶಿಯನ್ನು ನೋಡಿ ವೀರಾಗ್ರಣಿಯಾದ ಶ್ರೀಕೃಷ್ಣನು ಸಿಂಹದಂತೆ ಗರ್ಜಿಸುತ್ತಾ ರಾಕ್ಷಸನನ್ನು ಯುದ್ಧಕ್ಕಾಗಿ ಆಹ್ವಾನಿಸಿದನು. ॥ ೩ ॥ ಬಳಿಕ ಕೇಶಿಯು ತನಗೆದುರಾಗಿ ಬಂದ ಶ್ರೀಕೃಷ್ಣನನ್ನು ನೋಡಿ ಆಕಾಶವನ್ನೇ ನುಂಗಿಬಿಡುವನೋ ಎಂಬಂತೆ ಬಾಯನ್ನು ಅಗಲಿಸಿಕೊಂಡು ಮುನ್ನುಗ್ಗಿ ಹೋದನು. ಅತ್ಯಂತ ಕ್ರುದ್ಧನಾಗಿದ್ದ, ದುರಾಸದನಾದ, ಭಯಂಕರವಾಗಿ ಶಬ್ದಮಾಡುತ್ತಿದ್ದ, ಎದುರಿಸಲು ಅಸಾಧ್ಯನಾಗಿದ್ದ ಆ ರಾಕ್ಷಸನು ತನ್ನೆರಡು ಹಿಂದಿನ ಕಾಲುಗಳಿಂದ ಅರವಿಂದಾಕ್ಷನಾದ ಶ್ರೀಕೃಷ್ಣನನ್ನು ಒದೆದನು. ॥ ೪ ॥ ಆದರೆ ಭಗವಂತನು ಉಪಾಯದಿಂದ ಆ ಒದೆಯನ್ನು ತಪ್ಪಿಸಿಕೊಂಡು, ಅತ್ಯಂತ ಕ್ರುದ್ಧನಾಗಿ ಗರುಡನು ಸರ್ಪವನ್ನು ಹಿಡಿಯುವಂತೆ ಅದೇ ಕಾಲುಗಳನ್ನು ಹಿಡಿದು ಗರಗರನೆ ತಿರುಗಿಸುತ್ತಾ ಅನಾಯಾಸವಾಗಿ ನೂರು ಮಾರುಗಳ ದೂರಕ್ಕೆ ಬಿಸಾಡಿ ಸ್ವಸ್ಥವಾಗಿ ನಿಂತುಕೊಂಡನು. ॥ ೫ ॥ ಕೇಶಿಯು ಸ್ವಲ್ಪ ಹೊತ್ತಿನಲ್ಲೇ ಚೇತರಿಸಿಕೊಂಡು ಮೇಲೆದ್ದು ಕ್ರುದ್ಧವಾಗಿ ಬಾಯನ್ನು ಅಗಲವಾಗಿ ತೆರೆದುಕೊಂಡು ರಭಸದಿಂದ ಭಗವಂತನೆಡೆಗೆ ನುಗ್ಗಿದನು. ಶ್ರೀಕೃಷ್ಣನು ನಸುನಗುತ್ತಾ - ಸರ್ಪವು ತನ್ನ ಬಿಲದೊಳಗೆ ನುಸುಳಿಹೋಗುವಂತೆ ತನ್ನ ಎಡತೋಳನ್ನು ಕೇಶಿಯ ಅಗಲವಾಗಿದ್ದ ಬಾಯೊಳಗೆ ರಭಸದಿಂದ ತೂರಿಸಿದನು. ॥ ೬ ॥ ಪರೀಕ್ಷಿತನೇ! ಭಗವಂತನ ಅತ್ಯಂತ ಕೋಮಲವಾದ ಬಾಹುವು ಆ ಸಮಯದಲ್ಲಿ ಕಾದ ಕಬ್ಬಿಣದಂತಾಗಿ ಅದರ ಸ್ಪರ್ಶಮಾತ್ರದಿಂದ ಕೇಶಿಯ ಹಲ್ಲುಗಳೆಲ್ಲವೂ ಉದುರಿಹೋದುವು. ಚಿಕಿತ್ಸೆಯನ್ನು ಹೊಂದದ ಮಹೋದರ ರೋಗವು ಉಲ್ಬಣಿಸುವಂತೆ ಶ್ರೀಕೃಷ್ಣನ ತೋಳು ಕ್ಷಣ-ಕ್ಷಣಕ್ಕೂ ಅಸುರನ ಬಾಯೊಳಗೆ ವರ್ಧಿಸುತ್ತಿತ್ತು. ॥ ೭ ॥ ಅಚಿಂತ್ಯ ಶಕ್ತಿ ಸಂಪನ್ನನಾದ ಭಗವಾನ್ ಶ್ರೀಕೃಷ್ಣನ ತೋಳು ಕ್ಷಣ-ಕ್ಷಣಕ್ಕೂ ದಪ್ಪವಾಗುತ್ತಾ ಕೇಶಿಯ ಕುತ್ತಿಗೆಗೆ ಹಾಕಿದ ಬಿರಟೆಯಂತಾಗಿ ರಾಕ್ಷಸನ ಉಸಿರುನಿಂತು ಹೋಯಿತು. ಕಾಲುಗಳು ಒದರ ತೊಡಗಿದವು. ಶರೀರವು ಬೆವರಿನಿಂದ ಒದ್ದೆಯಾಯಿತು. ಕಣ್ಣುಗುಡ್ಡೆಗಳು ಹೊರಬಂದುವು. ಕೇಶಿಯು ಮಲ-ಮೂತ್ರಗಳನ್ನು ಸುರಿಸುತ್ತಾ, ನೆಲದ ಮೇಲೆ ಬಿದ್ದು ಸ್ವಲ್ಪ ಹೊತ್ತಿನಲ್ಲೆ ಪ್ರಾಣಗಳನ್ನು ತೊರೆದನು. ॥ ೮ ॥ ಪಕ್ವವಾದ ಕೆಕ್ಕರಿಕೆ ಹಣ್ಣು ಬಿರಿಯುವಂತೆ ಬಿರಿದು ಹೋದ ರಾಕ್ಷಸನ ಬಾಯಿಂದ ಮಹಾಬಾಹುವಾದ ಶ್ರೀಕೃಷ್ಣನು ತನ್ನ ಎಡದ ಕೈಯನ್ನು ಸೆಳೆದುಕೊಂಡನು. ಇದರಿಂದ ಶ್ರೀಕೃಷ್ಣನಿಗೆ ಆಶ್ಚರ್ಯವುಂಟಾಗಲಿಲ್ಲ, ಹೆಚ್ಚಿನ ಪ್ರಯತ್ನವಿಲ್ಲದೆಯೇ ಶತ್ರುವಿನ ನಾಶವಾಯಿತು. ದೇವತೆಗಳಿಗೆ ಇದನ್ನು ಕಂಡು ಆಶ್ಚರ್ಯವಾಯಿತು. ಅವರೆಲ್ಲರೂ ಅತ್ಯಂತ ಪ್ರಸನ್ನರಾಗಿ ಭಗವಂತನ ಮೇಲೆ ಹೂಮಳೆಗರೆದು, ಅವನನ್ನು ನಾನಾ ರೀತಿಯಿಂದ ಸ್ತೋತ್ರಮಾಡಿದರು. ॥ ೯ ॥

ದೇವರ್ಷಿರುಪಸಂಗಮ್ಯ ಭಾಗವತಪ್ರವರೋ ನೃಪ ।
ಕೃಷ್ಣಮಕ್ಲಿಷ್ಟಕರ್ಮಾಣಂ ರಹಸ್ಯೇತದಭಾಷತ
॥ ೧೦ ॥

ಕೃಷ್ಣ ಕೃಷ್ಣಾಪ್ರಮೇಯಾತ್ಮನ್ ಯೋಗೇಶ ಜಗದೀಶ್ವರ ।
ವಾಸುದೇವಾಖಿಲಾವಾಸ ಸಾತ್ವತಾಂ ಪ್ರವರ ಪ್ರಭೋ
॥ ೧೧ ॥

ತ್ವಮಾತ್ಮಾ ಸರ್ವಭೂತಾನಾಮೇಕೋ ಜ್ಯೋತಿರಿವೈಧಸಾಮ್ ।
ಗೂಢೋ ಗುಹಾಶಯಃ ಸಾಕ್ಷೀ ಮಹಾಪುರುಷ ಈಶ್ವರಃ
॥ ೧೨ ॥

ಆತ್ಮನಾಽಽತ್ಮಾಶ್ರಯಃ ಪೂರ್ವಂ ಮಾಯಯಾ ಸಸೃಜೇ ಗುಣಾನ್ ।
ತೈರಿದಂ ಸತ್ಯಸಂಕಲ್ಪಃ ಸೃಜಸ್ಯತ್ಸ್ಯವಸೀಶ್ವರಃ
॥ ೧೩ ॥

ಸ ತ್ವಂ ಭೂಧರಭೂತಾನಾಂ ದೈತ್ಯಪ್ರಮಥರಕ್ಷಸಾಮ್ ।
ಅವತೀರ್ಣೋ ವಿನಾಶಾಯ ಸೇತೂನಾಂ ರಕ್ಷಣಾಯ ಚ
॥ ೧೪ ॥

ದಿಷ್ಟ್ಯಾ ತೇ ನಿಹತೋ ದೈತ್ಯೋ ಲೀಲಯಾಯಂ ಹಯಾಕೃತಿಃ ।
ಯಸ್ಯ ಹೇಷಿತಸಂತ್ರಸ್ತಾಸ್ತ್ಯಜಂತ್ಯನಿಮಿಷಾ ದಿವಮ್
॥ ೧೫ ॥

ಚಾಣೂರಂ ಮುಷ್ಟಿಕಂ ಚೈವ ಮಲ್ಲಾನನ್ಯಾಂಶ್ಚ ಹಸ್ತಿನಮ್ ।
ಕಂಸಂ ಚ ನಿಹತಂ ದ್ರಕ್ಷ್ಯೇ ಪರಶ್ವೋಽಹನಿ ತೇ ವಿಭೋ
॥ ೧೬ ॥

ತಸ್ಯಾನುಶಂಖಯವನಮುರಾಣಾಂ ನರಕಸ್ಯ ಚ ।
ಪಾರಿಜಾತಾಪಹರಣಮಿಂದ್ರಸ್ಯ ಚ ಪರಾಜಯಮ್
॥ ೧೭ ॥

ಉದ್ವಾಹಂ ವೀರಕನ್ಯಾನಾಂ ವೀರ್ಯಶುಲ್ಕಾದಿಲಕ್ಷಣಮ್ ।
ನೃಗಸ್ಯ ಮೋಕ್ಷಣಂ ಶಾಪಾದ್ದ್ವಾರಕಾಯಾಂ ಜಗತ್ಪತೇ
॥ ೧೮ ॥

ಸ್ಯಮಂತಕಸ್ಯ ಚ ಮಣೇರಾದಾನಂ ಸಹ ಭಾರ್ಯಯಾ ।
ಮೃತಪುತ್ರಪ್ರದಾನಂ ಚ ಬ್ರಾಹ್ಮಣಸ್ಯ ಸ್ವಧಾಮತಃ
॥ ೧೯ ॥

ಪರೀಕ್ಷಿತನೇ! ಭಾಗವತರಲ್ಲಿ ಶ್ರೇಷ್ಠರಾದ ನಾರದ ಮುನಿಗಳು ಕಂಸನಲ್ಲಿಂದ ಮರಳಿ ಅದ್ಭುತ ಕರ್ಮಿಯಾದ ಭಗವಾನ್ ಶ್ರೀಕೃಷ್ಣನಲ್ಲಿಗೆ ಬಂದು ಏಕಾಂತದಲ್ಲಿ ಅವನನ್ನು ಸಂಧಿಸಿ ಹೀಗೆ ಹೇಳತೊಡಗಿದರು. ॥ ೧೦ ॥ ಸಚ್ಚಿದಾನಂದ ಸ್ವರೂಪನಾದ ಕೃಷ್ಣನೇ! ನಿನ್ನ ಸ್ವರೂಪವು ಮನ-ವಚನಗಳಿಗೆ ನಿಲುಕುವುದಿಲ್ಲ, ನೀನು ಯೋಗೇಶ್ವರನಾಗಿರುವೆ. ಜಗದೀಶ್ವರನೇ! ವಾಸುದೇವನೇ! ಸಮಸ್ತ ಪ್ರಾಣಿಗಳ ಹೃದಯದಲ್ಲಿ ವಾಸಿಸುವವನೇ! ಸಾತ್ವತ ಶ್ರೇಷ್ಠನೇ! ಪ್ರಭುವೇ! ನಿನಗೆ ನಮಸ್ಕಾರವು. ॥ ೧೧ ॥ ದೇವದೇವನೇ! ಒಂದೇ ಅಗ್ನಿಯು ಎಲ್ಲ ಕಟ್ಟಿಗೆಗಳಲ್ಲಿಯೂ ವ್ಯಾಪಿಸಿರುವಂತೆ ನೀನೊಬ್ಬನೇ ಸಕಲ ಪ್ರಾಣಿಗಳ ಹೃದಯದಲ್ಲಿ ಆತ್ಮರೂಪದಿಂದ ವ್ಯಾಪಿಸಿಕೊಂಡಿರುವೆ. ಆತ್ಮರೂಪದಲ್ಲಿದ್ದರೂ ನೀನು ನಿಗೂಢನಾಗಿರುವೆ. ಪಂಚಕೋಶಾತ್ಮಕವಾದ ಗುಹೆಯಲ್ಲಿ ಅಡಗಿಕೊಂಡಿರುವೆ. ಈಶ್ವರನೂ, ಸರ್ವಸಾಕ್ಷಿಯೂ, ಪುರುಷೋತ್ತಮನೂ, ಸರ್ವನಿಯಾಮಕನೂ ನೀನೇ ಆಗಿರುವೆ. ಅಂತಹ ನಿನಗೆ ನಮಸ್ಕಾರವು. ॥ ೧೨ ॥ ಪ್ರಭುವೇ! ಆತ್ಮಸ್ವರೂಪನಾದ ನೀನು ಸರ್ವಕ್ಕೂ ಆಶ್ರಯನಾಗಿರುವೆ. ನೀನು ಯಾರನ್ನೂ ಆಶ್ರಯಿಸತಕ್ಕವನಲ್ಲ. ಸೃಷ್ಟಿಯ ಪ್ರಾರಂಭದಲ್ಲಿ ನಿನ್ನ ಮಾಯೆಯಿಂದ ಗುಣಗಳನ್ನು ಸೃಷ್ಟಿಸಿ, ಆ ಗುಣಗಳನ್ನೇ ಸ್ವೀಕರಿಸಿಕೊಂಡು ನೀನು ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಮಾಡುತ್ತಿರುವೆ. ಸರ್ವಶಕ್ತಿ ಸಂಪನ್ನನೂ, ಸತ್ಯಸಂಕಲ್ಪನೂ ಆದ ನಿನಗೆ ವಂದಿಸುತ್ತೇನೆ. ॥ ೧೩ ॥ ಅಂತಹ ಸಚ್ಚಿದಾನಂದ ಸ್ವರೂಪನಾದ ನೀನು ಈ ಸಮಯದಲ್ಲಿ ರಾಜರಾಗಿ ಹುಟ್ಟಿರುವ ದೈತ್ಯ-ಪ್ರಮಥ-ರಾಕ್ಷಸರ ವಿನಾಶಕ್ಕಾಗಿ ಮತ್ತು ಧರ್ಮದ ಮರ್ಯಾದೆಯನ್ನು ರಕ್ಷಿಸಲಿಕ್ಕಾಗಿಯೇ ಯದುವಂಶದಲ್ಲಿ ಅವತರಿಸಿರುವೆ. ॥ ೧೪ ॥ ಮಹಾನುಭಾವನೇ! ಕುದುರೆಯ ರೂಪದಲ್ಲಿದ್ದ ಕೇಶಿರಾಕ್ಷಸನನ್ನು ಲೀಲಾಜಾಲವಾಗಿ ಸಂಹರಿಸಿದೆ. ಇದು ಸಂತೋಷದ ಸಂಗತಿಯೇ ಆಗಿದೆ. ಆ ರಾಕ್ಷಸನ ಕೆನೆಯುವಿಕೆಯನ್ನು ಕೇಳುತ್ತಲೇ ದೇವತೆಗಳು ಸ್ವರ್ಗದಿಂದ ಓಡಿಹೋಗುತ್ತಿದ್ದರು. ॥ ೧೫ ॥

ಪ್ರಭುವೇ! ಮುಂದಿನ ಎರಡು ದಿವಸಗಳಲ್ಲಿಯೇ ಚಾಣೂರ ಮುಷ್ಟಿಕರನ್ನೂ, ಕುವಲಯಾಪೀಡವೆಂಬ ಮತ್ತಗಜವನ್ನೂ, ಇತರ ಹಲವಾರು ಜಟ್ಟಿಗಳನ್ನೂ, ಕಂಸನನ್ನೂ ನೀನು ಸಂಹರಿಸುವ ಅದ್ಭುತ ದೃಶ್ಯವನ್ನು ನಾನು ಕಾಣಲಿದ್ದೇನೆ. ॥ ೧೬ ॥ ಅನಂತರ ಶಂಖಾಸುರ, ಕಾಲಯವನ, ಮುರ, ನರಕಾಸುರರ ವಧೆಯನ್ನು ನೋಡುವೆ. ಇಂದ್ರನ ಪರಾಜಯವನ್ನು ಸ್ವರ್ಗದಿಂದ ಪಾರಿಜಾತಾಪಹರಣವನ್ನು ನಾನು ಕಾಣಲಿರುವೆನು. ॥ ೧೭ ॥ ವೀರ್ಯ ಪರಾಕ್ರಮಗಳೇ ಕನ್ಯಾಶುಲ್ಕವಾಗಿ ಉಳ್ಳ ವೀರಕನ್ಯೆಯರೊಡನೆ ನಿನ್ನ ಶುಭವಿವಾಹಗಳಾಗುವುದನ್ನು ನಾನು ನೋಡುವೆನು. ಜಗತ್ಪತಿಯೇ! ನೀನು ದ್ವಾರಕೆಯಲ್ಲಿಯೇ ಇರುತ್ತಾ ನೃಗರಾಜನನ್ನು ಶಾಪದಿಂದ ಮುಕ್ತಗೊಳಿಸುವೆ. ॥ ೧೮ ॥ ಸ್ಯಮಂತಕ ಮಣಿಯನ್ನು ಜಾಂಬವತಿಯನ್ನು ಜಾಂಬವಂತನಿಂದ ಪಡೆದು ಕೊಳ್ಳುವೆ. ಬ್ರಾಹ್ಮಣನ ಮೃತಪುತ್ರನನ್ನು ತನ್ನ ಧಾಮದಿಂದ ತಂದು ಕೊಡುವೆ. ॥ ೧೯ ॥

ಪೌಂಡ್ರಕಸ್ಯ ವಧಂ ಪಶ್ಚಾತ್ ಕಾಶೀಪುರ್ಯಾಶ್ಚ ದೀಪನಮ್ ।
ದಂತವಕ್ತ್ರಸ್ಯ ನಿಧನಂ ಚೈದ್ಯಸ್ಯ ಚ ಮಹಾಕ್ರತೌ
॥ ೨೦ ॥

ಯಾನಿ ಚಾನ್ಯಾನಿ ವೀರ್ಯಾಣಿ ದ್ವಾರಕಾಮಾವಸನ್ ಭವಾನ್ ।
ಕರ್ತಾ ದ್ರಕ್ಷ್ಯಾಮ್ಯಹಂ ತಾನಿ ಗೇಯಾನಿ ಕವಿಭಿರ್ಭುವಿ
॥ ೨೧ ॥

ಅಥ ತೇ ಕಾಲರೂಪಸ್ಯ ಕ್ಷಪಯಿಷ್ಣೋರಮುಷ್ಯ ವೈ ।
ಅಕ್ಷೌಹಿಣೀನಾಂ ನಿಧನಂ ದ್ರಕ್ಷ್ಯಾಮ್ಯರ್ಜುನಸಾರಥೇಃ
॥ ೨೨ ॥

ವಿಶುದ್ಧವಿಜ್ಞಾನಘನಂ ಸ್ವಸಂಸ್ಥಯಾ
ಸಮಾಪ್ತ ಸರ್ವಾರ್ಥಮಮೋಘವಾಂಛಿತಮ್ ।
ಸ್ವತೇಜಸಾ ನಿತ್ಯನಿವೃತ್ತಮಾಯಾ
ಗುಣಪ್ರವಾಹಂ ಭಗವಂತಮೀಮಹಿ ॥ ೨೩ ॥

ತ್ವಾಮೀಶ್ವರಂ ಸ್ವಾಶ್ರಯಮಾತ್ಮಮಾಯಯಾ
ವಿನಿರ್ಮಿತಾಶೇಷವಿಶೇಷಕಲ್ಪನಮ್ ।
ಕ್ರೀಡಾರ್ಥಮದ್ಯಾತ್ತಮನುಷ್ಯವಿಗ್ರಹಂ
ನತೋऽಸ್ಮಿ ಧುರ್ಯಂ ಯದುವೃಷ್ಣಿ ಸಾತ್ವತಾಮ್ ॥ ೨೪ ॥

*ಶ್ರೀಶುಕ ಉವಾಚ*

ಏವಂ ಯದುಪತಿಂ ಕೃಷ್ಣಂ ಭಾಗವತಪ್ರವರೋ ಮುನಿಃ ।
ಪ್ರಣಿಪತ್ಯಾಭ್ಯನುಜ್ಞಾತೋ ಯಯೌ ತದ್ದರ್ಶನೋತ್ಸವಃ
॥ ೨೫ ॥

ಭಗವಾನಪಿ ಗೋವಿಂದೋ ಹತ್ವಾ ಕೇಶಿನಮಾಹವೇ ।
ಪಶೂನಪಾಲಯತ್ಪಾಲೈಃ ಪ್ರೀತೈರ್ವ್ರಜಸುಖಾವಹಃ
॥ ೨೬ ॥

ಏಕದಾ ತೇ ಪಶೂನ್ ಪಾಲಾಶ್ಚಾರಯಂತೋऽದ್ರಿಸಾನುಷು ।
ಚಕ್ರುರ್ನಿಲಾಯನಕ್ರೀಡಾಶ್ಚೋರಪಾಲಾಪದೇಶತಃ
॥ ೨೭ ॥

ತತ್ರಾಸನ್ಕತಿಚಿಚ್ಚೋರಾಃ ಪಾಲಾಶ್ಚ ಕತಿಚಿನ್ನೃಪ ।
ಮೇಷಾಯಿತಾಶ್ಚ ತತ್ರೈಕೇ ವಿಜಹ್ರುರಕುತೋಭಯಾಃ
॥ ೨೮ ॥

ಇದಾದ ಬಳಿಕ ನೀನು ಪೌಂಡ್ರಕ ವಾಸುದೇವನನ್ನು ಸಂಹರಿಸುವೆ. ಕಾಶೀಪುರಿಯನ್ನು ಸುಟ್ಟುಹಾಕುವೆ. ಯುಧಿಷ್ಠಿರನ ರಾಜಸೂಯ ಯಾಗದಲ್ಲಿ ಚೇದಿರಾಜನಾದ ಶಿಶುಪಾಲನನ್ನು ಸಂಹರಿಸುವೆ. ಅಲ್ಲಿಂದ ಹಿಂದಿರುಗುವಾಗ ಅವನ ತಮ್ಮನಾದ ದಂತವಕ್ತ್ರನನ್ನೂ ನಾಶಮಾಡುವೆ. ॥ ೨೦ ॥ ಪ್ರಭುವೇ! ದ್ವಾರಕೆಯಲ್ಲಿ ವಾಸಿಸುತ್ತಿರುವಾಗ ನೀನು ಪ್ರಕಟಿಸಲಿರುವ ಇನ್ನೂ ಹಲವಾರು ಪ್ರಸಂಗಗಳನ್ನು ಪ್ರಭಾವಶಾಲಿಗಳಾದ ಜ್ಞಾನೀ ಕವಿಗಳು ಭೂಲೋಕದಲ್ಲಿ ಹಾಡುವರು. ಇವೆಲ್ಲವನ್ನು ನಾನು ಪ್ರತ್ಯಕ್ಷವಾಗಿ ಕಾಣಲಿದ್ದೇನೆ. ॥ ೨೧ ॥ ಅನಂತರ ಭೂಭಾರಹರಣಕ್ಕಾಗಿ ಕಾಲಸ್ವರೂಪನಾದ ನೀನು ಅರ್ಜುನನಿಗೆ ಸಾರಥಿಯಾಗಿ ಅನೇಕ ಅಕ್ಷೌಹಿಣೀ ಸೈನ್ಯವನ್ನು ಸಂಹರಿಸುವೆ.ಇವೆಲ್ಲವನ್ನೂ ನಾನು ಕಣ್ಣಾರೆ ಕಾಣಲಿದ್ದೇನೆ. ॥ ೨೨ ॥

ಸ್ವಾಮಿಯೇ! ನೀನು ವಿಶುದ್ಧವಿಜ್ಞಾನ ಘನಸ್ವರೂಪನು. ಕೇವಲ ಜ್ಞಾನಮೂರ್ತಿಯು. ಬ್ರಹ್ಮಾನಂದವೆಂಬ ನಿಜಸ್ವರೂಪ ಸ್ಥಿತಿಯಿಂದ ಸರ್ವಾರ್ಥಗಳನ್ನು ಪಡೆದುಕೊಂಡಿರುವವನು. ಆಪ್ತಕಾಮನು, ಸಫಲವಾದ ಇಷ್ಟಾರ್ಥವುಳ್ಳವನು. ಸತ್ಯಸಂಕಲ್ಪನು, ಚಿನ್ಮಯಶಕ್ತಿಯ ತೇಜಸ್ಸಿನಿಂದ ಸತ್ತ್ವಾದಿಮಾಯಾಗುಣಗಳ ಪ್ರವಾಹವನ್ನು ನಿತ್ಯನಿರಂತರವಾಗಿ ನಿರಾಕರಿಸತಕ್ಕವನು. ಅಂತಹ ಸರ್ವಶಕ್ತನಾದ ಭಗವಂತನನ್ನು ಶರಣು ಹೊಂದುತ್ತೇನೆ. ॥ ೨೩ ॥ ನೀನು ಸಮಸ್ತರ ಅಂತರ್ಯಾಮಿಯಾಗಿದ್ದು, ಎಲ್ಲರನ್ನೂ ನಿಯಂತ್ರಿಸುವೆ. ತಾನೇ-ತನ್ನಲ್ಲಿ ಸ್ಥಿತನಾದ ಪರಮ ಸ್ವತಂತ್ರನು. ಜಗತ್ತು ಮತ್ತು ಅದರ ಆಶೇಷ ವಿಶೇಷಗಳನ್ನು - ಭಾವ - ಅಭಾವ ರೂಪವಾದ ಎಲ್ಲ ಭೇದ ವಿಭೇದಗಳ ಕಲ್ಪನೆ ಕೇವಲ ನಿನ್ನ ಮಾಯೆಯಿಂದಲೇ ಉಂಟಾಗಿದೆ. ಈ ಸಮಯದಲ್ಲಿ ನೀನು ನಿನ್ನ ಲೀಲೆಗಳನ್ನು ಪ್ರಕಟಿಸಲಿಕ್ಕಾಗಿ ಮನುಷ್ಯನಂತೆ ಶ್ರೀವಿಗ್ರಹದಿಂದ ಪ್ರಕಟನಾಗಿರುವೆ. ನೀನು ಯದು, ವೃಷ್ಣಿ, ಸಾತ್ವತ ವಂಶೀಯರ ಶಿರೋಮಣಿಯಾಗಿರುವೆ. ಪ್ರಭೋ! ನಾನು ನಿನಗೆ ನಮಸ್ಕರಿಸುತ್ತಿದ್ದೇನೆ. ॥ ೨೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಭಾಗವತ ಶ್ರೇಷ್ಠರಾದ ನಾರದ ಮಹರ್ಷಿಗಳು ಹೀಗೆ ಭಗವಂತನನ್ನು ಸ್ತುತಿಸಿ, ನಮಸ್ಕರಿಸಿದರು. ಭಗವಂತನ ದರ್ಶನದಿಂದ ಉತ್ಸಾಹಗೊಂಡು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಹೊರಟುಹೋದರು. ॥ ೨೫ ॥ ಇತ್ತ ಭಗವಾನ್ ಶ್ರೀಕೃಷ್ಣನು ಯುದ್ಧದಲ್ಲಿ ಕೇಶಿಯನ್ನು ಕೊಂದು ಮತ್ತೆ ತನ್ನ ಪ್ರಿಯರಾದ ಮತ್ತು ಪ್ರಸನ್ನಚಿತ್ತರಾದ ಗೋಪಾಲಕರೊಡನೆ ಮೊದಲಿನಂತೆ ಪಶುಪಾಲನೆಯಲ್ಲಿ ತೊಡಗಿ ವ್ರಜವಾಸಿಗಳಿಗೆ ಪರಮಾನಂದವನ್ನು ಉಂಟುಮಾಡುತ್ತಿದ್ದನು. ॥ ೨೬ ॥ ಒಮ್ಮೆ ಗೋಪಾಲಕರು ಪರ್ವತದ ತಪ್ಪಲಿನಲ್ಲಿ ಹಸುವೇ ಮೊದಲಾದ ಪಶುಗಳನ್ನು ಮೇಯಿಸುತ್ತಾ ಕೆಲವರು ಕಳ್ಳರೂ, ಕೆಲವರು ಕುರುಬರೂ, ಕೆಲವರು ಕುರಿಗಳೂ ಆಗಿ ಆಟವಾಡತೊಡಗಿದರು.॥೨೭॥ ರಾಜೇಂದ್ರ! ಅವರಲ್ಲಿ ಕೆಲವರು ಕಳ್ಳರು, ಕೆಲವರು ರಕ್ಷಕರು, ಕೆಲವರು ಕುರಿಗಳೂ ಆಗಿದ್ದರು. ಹೀಗೆ ನಿರ್ಭಯರಾಗಿ ಆಟದಲ್ಲಿ ತನ್ಮಯರಾದರು. ॥ ೨೮ ॥

ಮಯಪುತ್ರೋ ಮಹಾಮಾಯೋ
ವ್ಯೋಮೋ ಗೋಪಾಲವೇಷಧೃಕ್ ।
ಮೇಷಾಯಿತಾನಪೋವಾಹ
ಪ್ರಾಯಶ್ಚೋರಾಯಿತೋ ಬಹೂನ್ ॥ ೨೯ ॥

ಗಿರಿದರ್ಯಾಂ ವಿನಿಕ್ಷಿಪ್ಯ ನೀತಂ ನೀತಂ ಮಹಾಸುರಃ ।
ಶಿಲಯಾ ಪಿದಧೇ ದ್ವಾರಂ ಚತುಃಪಂಚಾವಶೇಷಿತಾಃ ॥ ೩೦ ॥

ತಸ್ಯ ತತ್ಕರ್ಮ ವಿಜ್ಞಾಯ ಕೃಷ್ಣಃ ಶರಣದಃ ಸತಾಮ್ ।
ಗೋಪಾನ್ ನಯಂತಂ ಜಗ್ರಾಹ ವೃಕಂ ಹರಿರಿವೌಜಸಾ ॥ ೩೧ ॥

ಸ ನಿಜಂ ರೂಪಮಾಸ್ಥಾಯ ಗಿರೀಂದ್ರಸದೃಶಂ ಬಲೀ ।
ಇಚ್ಛನ್ವಿಮೋಕ್ತುಮಾತ್ಮಾನಂ ನಾಶಕ್ನೋದ್ಗ್ರಹಣಾತುರಃ ॥ ೩೨ ॥

ತಂ ನಿಗೃಹ್ಯಾಚ್ಯುತೋ ದೋರ್ಭ್ಯಾಂ ಪಾತಯಿತ್ವಾ ಮಹೀತಲೇ ।
ಪಶ್ಯತಾಂ ದಿವಿ ದೇವಾನಾಂ ಪಶುಮಾರಮಮಾರಯತ್ ॥ ೩೩ ॥

ಗುಹಾಪಿಧಾನಂ ನಿರ್ಭಿದ್ಯ ಗೋಪಾನ್ನಿಃಸಾರ್ಯ ಕೃಚ್ಛ್ರತಃ ।
ಸ್ತೂಯಮಾನಃ ಸುರೈರ್ಗೋಪೈಃ ಪ್ರವಿವೇಶ ಸ್ವಗೋಕುಲಮ್ ॥ ೩೪ ॥

ಅದೇ ಸಮಯದಲ್ಲಿ ಗೊಲ್ಲನ ವೇಷವನ್ನು ಧರಿಸಿ ವ್ಯೋಮಾಸುರನೆಂಬ ರಕ್ಕಸನು ಅಲ್ಲಿಗೆ ಬಂದನು. ಅವನು ಮಾಯಾವಿಗಳ ಆಚಾರ್ಯ ಮಯಾಸುರನ ಪುತ್ರನಾಗಿದ್ದನು ಹಾಗೂ ಸ್ವತಃ ಮಹಾ ಮಾಯಾವಿಯಾಗಿದ್ದನು. ಅವನು ಆಟದಲ್ಲಿ ಕಳ್ಳನಾಗಿ ಕುರಿಗಳಾಗಿದ್ದ ಹುಡುಗರನ್ನು ಕದ್ದುಕೊಂಡು ಹೋಗಿ ಅಡಗಿಸುತ್ತಿದ್ದನು. ॥ ೨೯ ॥

ಆ ಮಹಾಸುರನು ಪದೇ-ಪದೇ ಹುಡುಗರನ್ನು ಎತ್ತಿಕೊಂಡು ಹೋಗಿ ಪರ್ವತದ ಗುಹೆಯೊಂದರಲ್ಲಿ ಇಟ್ಟು ಬಾಗಿಲಿಗೆ ಒಂದು ದೊಡ್ಡ ಬಂಡೆಯನ್ನು ಮುಚ್ಚಿಡುತ್ತಿದ್ದನು. ಹೀಗೆ ಆಡುತ್ತಿದ್ದ ಗೊಲ್ಲಬಾಲಕರಲ್ಲಿ ಕೇವಲ ನಾಲ್ಕೈದು ಬಾಲಕರು ಮಾತ್ರ ಉಳಿದರು. ॥ ೩೦ ॥ ಭಕ್ತವತ್ಸಲನಾದ ಭಗವಂತನು ಆ ರಾಕ್ಷಸನ ದುಷ್ಟಕಾರ್ಯವನ್ನು ಅರಿತುಕೊಂಡು, ಅವನು ಬಾಲಕನನ್ನು ಎತ್ತಿಕೊಂಡು ಹೋಗುತ್ತಿರುವಾಗ ತೋಳವನ್ನು ಸಿಂಹವು ಹಿಡಿಯುವಂತೆ ಅವನನ್ನು ಹಿಡಿದುಕೊಂಡನು. ॥ ೩೧ ॥ ಮಹಾಬಲಿಯಾದ ವ್ಯೋಮಾಸುರನು ಪರ್ವತದಂತಿರುವ ತನ್ನ ನಿಜರೂಪವನ್ನು ಪ್ರಕಟಿಸಿ ಶ್ರೀಕೃಷ್ಣನಿಂದ ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಶ್ರೀಕೃಷ್ಣನ ಹಿಡಿತದಲ್ಲಿ ಸಿಲುಕಿದ ಅವನಿಂದ ಬಿಡಿಸಿಕೊಳ್ಳಲಾಗಲಿಲ್ಲ. ॥ ೩೨ ॥ ಆಗ ಭಗವಾನ್ ಶ್ರೀಕೃಷ್ಣನು ತನ್ನೆರಡೂ ಕೈಗಳಿಂದ ಅದುಮಿ ಹಿಡಿದು ಯಜ್ಞಪಶುವನ್ನು ಕೊಲ್ಲುವಂತೆ ಕತ್ತು ಹಿಸುಕಿ ಕೊಂದುಬಿಟ್ಟನು. ಆಗ ದೇವತೆಗಳು, ಗೊಲ್ಲಬಾಲಕರು ಭಗವಂತನನ್ನು ಸ್ತುತಿಸಿದರು. ಅನಂತರ ಪರಮದಯಾಳುವಾದ ಶ್ರೀಕೃಷ್ಣನು ಗುಹೆಯ ದ್ವಾರಕ್ಕೆ ಮುಚ್ಚಿದ್ದ ಬಂಡೆಯನ್ನು ಜರುಗಿಸಿ ಒಳಗೆ ಕೂಡಿಹಾಕಿದ್ದ ಗೊಲ್ಲಬಾಲಕರೊಂದಿಗೆ ವ್ರಜವನ್ನು ಪ್ರವೇಶಿಸಿದನು. ॥ ೩೩-೩೪ ॥

ಮೂವತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೩೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ವ್ಯೋಮಾಸುರವಧೋ ನಾಮ ಸಪ್ತತ್ರಿಂಶೋಽಧ್ಯಾಯಃ ॥ ೩೭ ॥

# ಮೂವತ್ತೆಂಟನೆಯ ಅಧ್ಯಾಯ

## ಅಕ್ರೂರನ ವ್ರಜಯಾತ್ರೆ

*ಶ್ರೀಶುಕ ಉವಾಚ*

ಅಕ್ರೂರೋಽಪಿ ಚ ತಾಂ ರಾತ್ರಿಂ ಮಧುಪುರ್ಯಾಂ ಮಹಾಮತಿಃ ।
ಉಷಿತ್ವಾ ರಥಮಾಸ್ಥಾಯ ಪ್ರಯಯೌ ನಂದಗೋಕುಲಮ್ ॥ ೧ ॥

ಗಚ್ಛನ್ಪಥಿ ಮಹಾಭಾಗೋ ಭಗವತ್ಯಂಬುಜೇಕ್ಷಣೇ ।
ಭಕ್ತಿಂ ಪರಾಮುಪಗತ ಏವಮೇತದಚಿಂತಯತ್ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ! ಮಹಾಮತಿಯಾದ ಅಕ್ರೂರನು ಆ ರಾತ್ರಿಯನ್ನು ಮಥುರಾಪುರಿಯಲ್ಲೇ ಕಳೆದು ಪ್ರಾತಃಕಾಲವಾಗುತ್ತಲೇ ರಥವನ್ನು ಹತ್ತಿಕೊಂಡು ನಂದಗೋಪನ ಗೋಕುಲಕ್ಕೆ ಪ್ರಯಾಣ ಮಾಡಿದನು. ॥ ೧ ॥ ಪರಮ ಭಾಗ್ಯವಂತನಾದ ಅಕ್ರೂರನು ವ್ರಜದ ಯಾತ್ರೆಮಾಡುತ್ತಿದ್ದಾಗ ದಾರಿಯಲ್ಲಿ ಕಮಲನಯನ ಭಗವಾನ್ ಶ್ರೀಕೃಷ್ಣನ ಪರಮ ಪ್ರೇಮಮಯ ಭಕ್ತಿಯಿಂದ ಪರಿಪೂರ್ಣನಾಗಿ ಹೀಗೆ ಯೋಚಿಸುತ್ತಿದ್ದನು. ॥ ೨ ॥

ಕಿಂ ಮಯಾऽऽಚರಿತಂ ಭದ್ರಂ ಕಿಂ ತಪ್ತಂ ಪರಮಂ ತಪಃ ।
ಕಿಂ ವಾಥಾಪ್ಯರ್ಹತೇ ದತ್ತಂ ಯದ್ದ್ರಕ್ಷ್ಯಾಮ್ಯದ್ಯ ಕೇಶವಮ್ ॥ ೩ ॥

ಮಮೈತದ್ದುರ್ಲಭಂ ಮನ್ಯ ಉತ್ತಮಶ್ಲೋಕದರ್ಶನಮ್ ।
ವಿಷಯಾತ್ಮನೋ ಯಥಾ ಬ್ರಹ್ಮಕೀರ್ತನಂ ಶೂದ್ರಜನ್ಮನಃ ॥ ೪ ॥

ಮೈವಂ ಮಮಾಧಮಸ್ಯಾಪಿ ಸ್ಯಾದೇವಾಚ್ಯುತದರ್ಶನಮ್ ।
ಹ್ರಿಯಮಾಣಃ ಕಾಲನದ್ಯಾ ಕ್ವಚಿತ್ತರತಿ ಕಶ್ಚನ ॥ ೫ ॥

ಮಮಾದ್ಯಾಮಂಗಲಂ ನಷ್ಟಂ ಫಲವಾಂಶ್ಚೈವ ಮೇ ಭವಃ ।
ಯನ್ನಮಸ್ಯೇ ಭಗವತೋ ಯೋಗಿಧ್ಯೇಯಾಂಘ್ರಿಪಂಕಜಮ್ ॥ ೬ ॥

ಕಂಸೋ ಬತಾದ್ಯಾಕೃತ ಮೇऽತ್ಯನುಗ್ರಹಂ
ದ್ರಕ್ಷ್ಯೇऽಂಘ್ರಿಪದ್ಮಂ ಪ್ರಹಿತೋऽಮುನಾ ಹರೇಃ ।
ಕೃತಾವತಾರಸ್ಯ ದುರತ್ಯಯಂ ತಮಃ
ಪೂರ್ವೇऽತರನ್ ಯನ್ನಖಮಂಡಲತ್ವಿಷಾ ॥ ೭ ॥

ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈಃ
ಶ್ರಿಯಾ ಚ ದೇವ್ಯಾ ಮುನಿಭಿಃ ಸಸಾತ್ವತೈಃ ।
ಗೋಚಾರಣಾಯಾನುಚರೈಶ್ಚರದ್ವನೇ
ಯದ್ಗೋಪಿಕಾನಾಂ ಕುಚಕುಂಕುಮಾಂಕಿತಮ್ ॥ ೮ ॥

ದ್ರಕ್ಷ್ಯಾಮಿ ನೂನಂ ಸುಕಪೋಲನಾಸಿಕಂ
ಸ್ಮಿತಾವಲೋಕಾರುಣಕಂಜಲೋಚನಮ್ ।
ಮುಖಂ ಮುಕುಂದಸ್ಯ ಗುಡಾಲಕಾವೃತಂ
ಪ್ರದಕ್ಷಿಣಂ ಮೇ ಪ್ರಚರಂತಿ ವೈ ಮೃಗಾಃ ॥ ೯ ॥

ಇಂದು ನಾನು ಭಗವಾನ್ ಶ್ರೀಕೃಷ್ಣನನ್ನು ದರ್ಶಿಸುತ್ತಿರುವೆನಲ್ಲ! ಇದಕ್ಕಾಗಿ ಹಿಂದೆ ನಾನು ಎಂತಹ ಶುಭಕರ್ಮಗಳನ್ನು, ಎಂತಹ ಶ್ರೇಷ್ಠವಾದ ತಪಸ್ಸನ್ನು ಮಾಡಿರುವೆನೋ! ಅಥವಾ ಯಾವ ಸತ್ಪಾತ್ರಕ್ಕೆ ಎಂತಹ ಮಹತ್ವಪೂರ್ಣವಾದ ದಾನ ಮಾಡಿರುವೆನೋ ? ॥ ೩ ॥ ಶೂದ್ರಜನ್ಮವನ್ನು ಪಡೆದವನಿಗೆ ವೇದಾಧ್ಯಯನದ ಅಧಿಕಾರ ವಿರದಂತೆ, ವಿಷಯಾಸಕ್ತನಾದ ನನಗೆ ಉತ್ತಮಶ್ಲೋಕನಾದ ಶ್ರೀಕೃಷ್ಣನ ದರ್ಶನವು ದುರ್ಲಭವೆಂದೇ ಭಾವಿಸುತ್ತೇನೆ. ॥ ೪ ॥ ಆದರೆ ಹಾಗೇನಿಲ್ಲ, ಅಧಮನಾದ ನನಗೂ ಕೂಡ ಭಗವಾನ್ ಶ್ರೀಕೃಷ್ಣನ ದರ್ಶನವು ಖಂಡಿತವಾಗಿ ಆಗುವುದು. ಏಕೆಂದರೆ, ನದಿಯಲ್ಲಿ ಹರಿಯುತ್ತಿರುವ ಕಡ್ಡಿಗಳು ಕೆಲವೊಮ್ಮೆ ಈ ದಡದಿಂದ ಆ ದಡಮುಟ್ಟುವುದಿದೆ. ಹಾಗೆಯೇ ಸಮಯದ ಪ್ರವಾಹದಿಂದ ಎಲ್ಲಾದರೂ ಯಾರಾದರೂ ಸಂಸಾರ ಸಾಗರವನ್ನು ದಾಟ ಬಲ್ಲರು. ॥ ೫ ॥ ನಿಶ್ಚಯವಾಗಿಯೂ ಇಂದು ನನ್ನ ಸಮಸ್ತ ಅಶುಭಗಳು ನಾಶಹೊಂದಿದವು. ಇಂದು ನನ್ನ ಜನ್ಮವು ಸಫಲವಾಯಿತು. ಏಕೆಂದರೆ, ಇಂದು ನಾನು ಮಹಾಯೋಗಿ-ಯತಿಗಳಿಗೂ ಕೂಡ ಧ್ಯಾನಕ್ಕೆ ವಿಷಯವಾದ ಭಗವಂತನ ಚರಣಕಮಲಗಳನ್ನು ಸಾಕ್ಷಾತ್ತಾಗಿ ನೋಡಿ ನಮಸ್ಕರಿಸುವೆನು. ॥ ೬ ॥ ಆಹಾ ! ಕಂಸನು ಇಂದು ನನ್ನ ಮೇಲೆ ಮಹತ್ಕೃಪೆಯನ್ನೇ ಮಾಡಿರುವನು. ಅಂತಹ ಕಂಸನಿಂದ ಕಳುಹಲ್ಪಟ್ಟ ನಾನು ಈ ಭೂತಳದಲ್ಲಿ ಅವತರಿಸಿದ ಸಾಕ್ಷಾತ್ ಭಗವಂತನ ಚರಣಕಮಲಗಳ ದರ್ಶನವನ್ನು ಪಡೆಯುವೆನು. ಯಾರ ನಖಮಂಡಲದ ಕಾಂತಿಯನ್ನು ಧ್ಯಾನಿಸುತ್ತಾ ಹಿಂದಿನ ಯುಗದ ಋಷಿ-ಮಹರ್ಷಿಗಳು ಈ ಅಜ್ಞಾನರೂಪವಾದ ಅಪಾರ ತಮಸ್ಸನ್ನು ದಾಟಿಹೋಗಿರುವರೋ, ಅಂತಹ ಸಾಕ್ಷಾತ್ ಭಗವಂತನೇ ಮನುಷ್ಯನಾಗಿ ಈಗ ಅವತರಿಸಿರುವನು. ॥ ೭ ॥ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಯಾವ ಚರಣಕಮಲಗಳನ್ನು ಉಪಾಸನೆ ಮಾಡುತ್ತಾ ಇರುತ್ತಾರೋ, ಸಾಕ್ಷಾತ್ ಲಕ್ಷ್ಮೀದೇವಿಯೂ ಒಂದು ಕ್ಷಣವಾದರೂ ಯಾರ ಸೇವೆಯನ್ನು ತೊರೆಯುವುದಿಲ್ಲವೋ, ಪ್ರೇಮೀ ಭಕ್ತರೊಡನೆ ಮಹಾಜ್ಞಾನಿಗಳೂ ಯಾರ ಆರಾಧನೆಯಲ್ಲಿ ಸಂಲಗ್ನವಾಗಿರುತ್ತಾರೋ, ಅಂತಹ ಭಗವಂತನ ಆ ಚರಣಕಮಲಗಳು ಹಸುಗಳನ್ನು ಮೇಯಿಸಲಿಕ್ಕಾಗಿ ಗೋಪಬಾಲಕರೊಂದಿಗೆ ವನದಲ್ಲಿ ಸಂಚರಿಸುತ್ತವೆ. ಸುರ-ಮುನಿ-ವಂದಿತ ಆ ಚರಣಗಳೇ ಗೋಪಿಯರ ವಕ್ಷಃಸ್ಥಳದಲ್ಲಿನ ಕುಂಕುಮ ಕೇಸರಿಯಿಂದ ಲೇಪಿತ ವಾಗಿರುತ್ತವೆ. ॥ ೮ ॥ ನಿಶ್ಚಯವಾಗಿಯೂ ನಾನು ಅವನ್ನು ದರ್ಶಿಸುವೆನು. ಇದೋ ಈ ಮೃಗಗಳು ನನ್ನನ್ನು ಬಲಕ್ಕೆ ಹಾಕಿ ಪ್ರದಕ್ಷಿಣಾಕಾರವಾಗಿ ಹೋಗುತ್ತಾ ಶುಭವನ್ನೇ ಸೂಚಿಸುತ್ತವೆ. ಆದುದರಿಂದ ನಾನಿಂದು ಮನೋಹರವಾದ ಕಪೋಲಗಳಿಂದಲೂ, ಸುಂದರವಾದ ಮೂಗಿನಿಂದಲೂ, ಕಿರುನಗೆಯಿಂದ ಕೂಡಿದ ನೋಟದಿಂದಲೂ, ಕೆಂದಾವರೆಯಂತಿರುವ ಕಣ್ಣುಗಳಿಂದಲೂ, ಗುಂಗುರು ಕೂದಲುಗಳಿಂದಲೂ ಸಮಲಂಕೃತವಾದ ಮುಖಕಮಲದಿಂದ ಶೋಭಿಸುವ ಮುಕುಂದನನ್ನು ನೋಡಿಯೇ ನೋಡುವೆನು. ॥ ೯ ॥

ಅಪ್ಯದ್ಯ ವಿಷ್ಣೋರ್ಮನುಜತ್ವಮೀಯುಷೋ
ಭಾರಾವತಾರಾಯ ಭುವೋ ನಿಜೇಚ್ಛಯಾ ।
ಲಾವಣ್ಯಧಾಮ್ನೋ ಭವಿತೋಪಲಂಭನಂ
ಮಹ್ಯಂ ನ ನ ಸ್ಯಾತ್ಫಲಮಂಜಸಾ ದೃಶಃ ॥ ೧೦ ॥

ಯ ಈಕ್ಷಿತಾಹಂರಹಿತೋಽಪ್ಯಸತ್ಸತೋಃ
ಸ್ವತೇಜಸಾಪಾಸ್ತತಮೋಭಿದಾಭ್ರಮಃ ।
ಸ್ವಮಾಯಯಾಽಽತ್ಮನ್ ರಚಿತೈಸ್ತದೀಕ್ಷಯಾ
ಪ್ರಾಣಾಕ್ಷಧೀಭಿಃ ಸದನೇಷ್ವಭೀಯತೇ ॥ ೧೧ ॥

ಯಸ್ಯಾಖಿಲಾಮೀವಹಭಿಃ ಸುಮಂಗಲೈ-
ರ್ವಾಚೋ ವಿಮಿಶ್ರಾ ಗುಣಕರ್ಮಜನ್ಮಭಿಃ ।
ಪ್ರಾಣಂತಿ ಶುಂಭಂತಿ ಪುನಂತಿ ವೈ ಜಗದ್
ಯಾಸ್ತದ್ವಿರಕ್ತಾಃ ಶವಶೋಭನಾ ಮತಾಃ ॥ ೧೨ ॥

ಸ ಚಾವತೀರ್ಣಃ ಕಿಲ ಸಾತ್ವತಾನ್ವಯೇ
ಸ್ವಸೇತುಪಾಲಾಮರವರ್ಯಶರ್ಮಕೃತ್ ।
ಯಶೋ ವಿತನ್ವನ್ ವ್ರಜ ಆಸ್ತ ಈಶ್ವರೋ
ಗಾಯಂತಿ ದೇವಾ ಯದಶೇಷಮಂಗಲಮ್ ॥ ೧೩ ॥

ತಂ ತ್ವದ್ಯ ನೂನಂ ಮಹತಾಂ ಗತಿಂ ಗುರುಂ
ತ್ರೈಲೋಕ್ಯಕಾಂತಂ ದೃಶಿಮನ್ಮಹೋತ್ಸವಮ್ ।
ರೂಪಂ ದಧಾನಂ ಶ್ರಿಯ ಈಪ್ಸಿತಾಸ್ಪದಂ
ದ್ರಕ್ಷ್ಯೇ ಮಮಾಸನ್ನುಷಸಃ ಸುದರ್ಶನಾಃ ॥ ೧೪ ॥

ಭಗವಾನ್ ವಿಷ್ಣುವು ಭೂಭಾರಹರಣಕ್ಕಾಗಿ ಸ್ವೇಚ್ಛೆಯಿಂದ ಮನುಷ್ಯನಾಗಿ ಅವತರಿಸಿದ್ದಾನೆ. ಅವನು ಸೌಂದರ್ಯಕ್ಕೆ ನೆಲೆಯಾಗಿದ್ದಾನೆ. ಸೌಂದರ್ಯದ ಮೂರ್ತಿಮಂತ ನಿಧಿಯಾಗಿದ್ದಾನೆ. ಇಂದು ನನಗೆ ಅವನ ದರ್ಶನವು ಆಗಿಯೇ ತೀರುತ್ತದೆ. ಇಂದು ನನ್ನ ಕಣ್ಣುಗಳು ಸಫಲವಾಗುವುವು. ॥ ೧೦ ॥ ಭಗವಂತನು ಈ ಕಾರ್ಯ-ಕಾರಣರೂಪವಾದ ಜಗತ್ತಿಗೆ ದ್ರಷ್ಟಾಮಾತ್ರನಾಗಿದ್ದರೂ ಅಹಂಕಾರ ರಹಿತನಾಗಿದ್ದಾನೆ. ಅಜ್ಞಾನದಿಂದ ಉಂಟಾದ ಭೇದ ಭ್ರಮೆಯು ಅವನ ಚಿನ್ಮಯಶಕ್ತಿಯಿಂದ ಅಜ್ಞಾನ ಸಹಿತವಾಗಿ ನಾಶವಾಗಿ ಹೋಗುತ್ತದೆ. ಅವನು ತನ್ನ ಯೋಗಮಾಯೆಯನ್ನು ಆಶ್ರಯಿಸಿ ಕೇವಲ ವೀಕ್ಷಣಮಾತ್ರದಿಂದ ಸ್ವಪ್ರಕೃತಿಯಿಂದಲೇ ನಿರ್ಮಿತವಾದ ಪ್ರಾಣೇಂದ್ರಿಯಗಳ ಬುದ್ಧಿಗಳಲ್ಲಿ ಪ್ರವೇಶಿಸಿ, ಗೋಪಿಯರ ಮನೆಗಳಲ್ಲಿಯೂ, ವೃಂದಾವನದಲ್ಲಿಯೂ ವ್ಯವಹರಿಸುವನೋ ಅಂತಹ ಪರಬ್ರಹ್ಮ ಪರಮಾತ್ಮ ಸ್ವರೂಪನಾದ ಶ್ರೀಕೃಷ್ಣನನ್ನು ನಾನಿಂದು ಸಂದರ್ಶಿಸುವೆನು. ॥ ೧೧ ॥ ಸಮಸ್ತ ಪಾಪಗಳನ್ನು ಹೋಗಲಾಡಿಸಿ ಮಂಗಳವನ್ನುಂಟುಮಾಡುವ ಶ್ರೀಕೃಷ್ಣನ ಭಕ್ತವಾತ್ಸಲ್ಯಾದಿ ಕಲ್ಯಾಣಗುಣಗಳಿಂದಲೂ, ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮೊದಲಾದ ಕರ್ಮಗಳಿಂದಲೂ ರಾಮ-ಕೃಷ್ಣಾದ್ಯವತಾರಗಳಿಂದಲೂ ಕೂಡಿದ ಮಾತುಗಳು (ಕೀರ್ತನೆಗಳು) ಪ್ರಪಂಚವನ್ನು ಉದ್ಧರಿಸುತ್ತವೆ; ಪಾವನಗೊಳಿಸುತ್ತವೆ. ಆದರೆ ಶ್ರೀಕೃಷ್ಣನ ಲೀಲಾಪ್ರಸಂಗಗಳಿಂದ ರಹಿತವಾದ ಮಾತುಗಳು ಹೆಣದಂತೆ ವ್ಯರ್ಥವಾಗಿದೆ. ॥ ೧೨ ॥ ಯಾರ ಗುಣಗಾನಕ್ಕೆ ಇಂತಹ ಮಹಾತ್ಮ್ಯವಿರುವುದೋ ಅಂತಹ ಭಗವಂತನು ಸಾಕ್ಷಾತ್ತಾಗಿ ಯದುವಂಶದಲ್ಲಿ ಅವತರಿಸಿರುವನು. ತನ್ನಿಂದಲೇ ಕಲ್ಪಿತವಾದ ಲೋಕಮರ್ಯಾದೆಗಳನ್ನು ಪಾಲಿಸುತ್ತಿರುವ ಶ್ರೇಷ್ಠರಾದ ದೇವತೆಗಳ ಕಲ್ಯಾಣಕ್ಕೋಸ್ಕರವೇ ಅವನ ಅವತಾರವಾಗಿದೆ. ಐಶ್ವರ್ಯಶಾಲಿಯಾದ ಆ ಭಗವಂತನು ತನ್ನ ಮಂಗಳಮಯ ಯಶಸ್ಸನ್ನು ವಿಸ್ತಾರಗೊಳಿಸುತ್ತಾ ಗೋಕುಲದಲ್ಲಿ ವಾಸಿಸುತ್ತಿರುವನು. ದೇವತೆಗಳೂ ಕೂಡ ಅವನ ಮಂಗಳಮಯವಾದ ಯಶಸ್ಸನ್ನು ಯಾವಾಗಲೂ ಗಾನಮಾಡುತ್ತಿರುತ್ತಾರೆ. ॥ ೧೩ ॥ ಇಂದು ನಾನು ಖಂಡಿತವಾಗಿ ಅವನನ್ನು ನೋಡುವೆನು, ಇದರಲ್ಲಿ ಸಂದೇಹವೇ ಇಲ್ಲ. ಅವನು ದೊಡ್ಡ-ದೊಡ್ಡ ಸಂತರಿಗೂ, ಲೋಕಪಾಲರಿಗೂ ಏಕಮಾತ್ರ ಆಶ್ರಯನಾಗಿದ್ದಾನೆ. ಎಲ್ಲರಿಗೂ ಪರಮಗುರುವಾಗಿ ಇದ್ದಾನೆ. ಅವನ ರೂಪ-ಸೌಂದರ್ಯಗಳು ಮೂರು ಲೋಕಗಳನ್ನು ವಿಮೋಹಗೊಳಿಸುವಂತಹುದು. ಕಣ್ಣುಳ್ಳವರಿಗೆ ಅವನನ್ನು ನೋಡುವುದೇ ಹಬ್ಬವಾಗಿದೆ. ಇದರಿಂದ ಸೌಂದರ್ಯದ ಅಧೀಶ್ವರಿಯಾದ ಸಾಕ್ಷಾತ್ ಲಕ್ಷ್ಮೀದೇವಿಯೂ ಕೂಡ ಅವನನ್ನು ಪಡೆಯಲು ಕಾತರಳಾಗಿದ್ದಾಳೆ. ಅಂತಹ ಸುಂದರಮೂರ್ತಿಯನ್ನು ನಾನಿಂದು ನೋಡಿಯೇ ನೋಡುವೆನು. ಬೆಳಗಿನಿಂದಲೂ ನನಗೆ ಶುಭ ಶಕುನಗಳೇ ಕಾಣಿಸಿಕೊಳ್ಳುತ್ತವೆ. ॥ ೧೪ ॥

ಅಥಾವರೂಢಃ ಸಪದೀಶಯೋಃ ರಥಾತ್
ಪ್ರಧಾನಪುಂಸೋಶ್ಚರಣಂ ಸ್ವಲಬ್ಧಯೇ ।
ಧಿಯಾ ಧೃತಂ ಯೋಗಿಭಿರಪ್ಯಹಂ ಧ್ರುವಂ
ನಮಸ್ಯ ಆಭ್ಯಾಂ ಚ ಸಖೀನ್‌ವನೌಕಸಃ ॥ ೧೫ ॥

ಅಪ್ಯಂಘ್ರಿಮೂಲೇ ಪತಿತಸ್ಯ ಮೇ ವಿಭುಃ
ಶಿರಸ್ಯಧಾಸ್ಯನ್ನಿಜಹಸ್ತಪಂಕಜಮ್ ।
ದತ್ತಾಭಯಂ ಕಾಲಭುಜಂಗರಂಹಸಾ
ಪ್ರೋದ್ವೇಜಿತಾನಾಂ ಶರಣೈಷಿಣಾಂ ನೃಣಾಮ್ ॥ ೧೬ ॥

ಸಮರ್ಹಣಂ ಯತ್ರ ನಿಧಾಯ ಕೌಶಿಕ-
ಸ್ತಥಾ ಬಲಿಶ್ಚಾಪ ಜಗತ್ರಯೇಂದ್ರತಾಮ್ ।
ಯದ್ವಾ ವಿಹಾರೇ ವ್ರಜಯೋಷಿತಾಂ ಶ್ರಮಂ
ಸ್ಪರ್ಶೇನ ಸೌಗಂಧಿಕಗಂಧ್ಯಪಾನುದತ್ ॥ ೧೭ ॥

ನ ಮಯ್ಯುಪೈಷ್ಯತ್ಯರಿಬುದ್ಧಿಮಚ್ಯುತಃ
ಕಂಸಸ್ಯ ದೂತಃ ಪ್ರಹಿತೋಽಪಿ ವಿಶ್ವದೃಕ್ ।
ಯೋಽಂತರ್ಬಹಿಶ್ಚೇತಸ ಏತದೀಹಿತಂ
ಕ್ಷೇತ್ರಜ್ಞ ಈಕ್ಷತ್ಯಮಲೇನ ಚಕ್ಷುಷಾ ॥ ೧೮ ॥

ಅಪ್ಯಂಘ್ರಿಮೂಲೇಽವಹಿತಂ ಕೃತಾಂಜಲಿಂ
ಮಾಮೀಕ್ಷಿತಾ ಸಸ್ಮಿತಮಾರ್ದ್ರಯಾ ದೃಶಾ ।
ಸಪದ್ಯಪಧ್ವಸ್ತಸಮಸ್ತಕಿಲ್ಬಿಷೋ
ವೋಢಾ ಮುದಂ ವೀತವಿಶಂಕ ಊರ್ಜಿತಾಮ್ ॥ ೧೯ ॥

ಸರ್ವಶ್ರೇಷ್ಠರಾದ ಬಲರಾಮ-ಕೃಷ್ಣರನ್ನು ನಾನು ನೋಡುತ್ತಲೇ ಅವರ ಚರಣಾರವಿಂದಗಳಲ್ಲಿ ನಮಸ್ಕರಿಸಲು ರಥದಿಂದ ಇಳಿಯುವೆನು. ಅವರ ಪಾದಪದ್ಮಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುವೆನು. ಅವರ ಚರಣಗಳು ಅತ್ಯಂತ ದುರ್ಲಭವಾದವುಗಳು. ಮಹಾ-ಮಹಾ ಯೋಗಿಗಳು ಆತ್ಮಸಾಕ್ಷಾತ್ಕಾರಕ್ಕಾಗಿ ಧ್ಯಾನದ ಮೂಲಕ ಭಗವಂತನ ಚರಣ-ಕಮಲಗಳನ್ನು ತಮ್ಮ ಹೃದಯದಲ್ಲಿರಿಸಿಕೊಳ್ಳುತ್ತಾರೆ. ನಾನಾದರೋ ಅಂತಹ ಪರಮ ಪವಿತ್ರವಾದ ಚರಣಕಮಲಗಳನ್ನು ಪ್ರತ್ಯಕ್ಷವಾಗಿ ನೋಡಿ ಅವುಗಳ ಮೇಲೆ ಹೊರಳಾಡುವೆನು. ಅವರಿಬ್ಬರೊಡನೆ ಅವರ ವನವಾಸಿ ಮಿತ್ರರಾದ ಗೋಪಾಲಕರ ಪಾದಗಳಿಗೆ ಪ್ರತ್ಯೇಕ-ಪ್ರತ್ಯೇಕವಾಗಿ ವಂದಿಸುವೆನು. ॥ ೧೫ ॥ ಹಾಗೆ ಚರಣಾವಿಂದಗಳಿಗೆ ನಮಸ್ಕರಿಸಿದ ನನ್ನ ತಲೆಯ ಮೇಲೆ ತನ್ನ ಕರಕಮಲವನ್ನು ಭಗವಂತನು ಇಡುವನಲ್ಲವೇ! ನಿಶ್ಚಯವಾಗಿಯೂ ಅದು ನನ್ನ ಸೌಭಾಗ್ಯವೇ ಸರಿ. ಕಾಲರೂಪವಾದ ಸರ್ಪಕ್ಕೆ ಭಯಗೊಂಡು ಭಗವಂತನ ಚರಣಾರವಿಂದಗಳನ್ನು ಆಶ್ರಯಿಸುವವರಿಗೆ, ಶರಣಾಗತರಾದವರಿಗೆ ಅವನ ಕರಕಮಲವು ಅಭಯದಾನ ಕೊಟ್ಟಿದೆ. ॥ ೧೬ ॥ ಆ ಭಗವಂತನ ಕರಕಮಲಗಳಲ್ಲಿ ಪೂಜಾಂಗವಾದ ಅರ್ಘ್ಯಪ್ರದಾನ ಮಾಡಿದ ಮಾತ್ರದಿಂದಲೇ ಇಂದ್ರ ಮತ್ತು ಬಲಿ ಇವರು ತ್ರೈಲೋಕ್ಯಾಧಿಪತ್ಯವನ್ನು ಪಡೆದುಕೊಂಡರು. ಕಮಲದ ಪರಿಮಳವನ್ನು ಹೊಂದಿದ ಆ ದಿವ್ಯ ಕರಕಮಲಗಳ ಸ್ಪರ್ಶಮಾತ್ರದಿಂದಲೇ ರಾಸಲೀಲೆಯ ಸಮಯದಲ್ಲಿ ವ್ರಜಯುವತಿಯರ ಆಯಾಸವೆಲ್ಲವೂ ಪರಿಹಾರವಾಯಿತು. ॥ ೧೭ ॥ ನಾನು ಈಗ ಕಂಸನದೂತನಾಗಿ ಅವನು ಕಳುಹಿಸಿದ್ದರಿಂದಲೆ ಶ್ರೀಕೃಷ್ಣನ ಬಳಿಗೆ ಹೋಗುತ್ತಿದ್ದೇನೆ. ಇದರಿಂದ ಶ್ರೀಕೃಷ್ಣನೇನಾದರೂ ನನ್ನನ್ನು ಶತ್ರುವೆಂದು ಭಾವಿಸಿಯಾನೇ? ಇಲ್ಲ, ಅತನೆಂದಿಗೂ ಹೀಗೆ ತಿಳಿಯಲಾರನು. ಏಕೆಂದರೆ, ಅವನು ನಿರ್ವಿಕಾರನೂ, ಸರ್ವಸಮನೂ, ಅಚ್ಯುತನೂ ಆಗಿರುವನು. ಸಮಸ್ತ ವಿಶ್ವಕ್ಕೆ ಸಾಕ್ಷಿಯೂ, ಸರ್ವಜ್ಞನೂ, ಚಿತ್ತದ ಒಳಗೂ-ಹೊರಗೂ ಇರತಕ್ಕವನು. ಅವನು ಸಮಸ್ತ ಪ್ರಾಣಿಗಳಲ್ಲಿಯೂ ಕ್ಷೇತ್ರಜ್ಞರೂಪದಿಂದ ನೆಲೆಸಿ ಅಂತಃಕರಣದ ಪ್ರತಿಯೊಂದು ಚೇಷ್ಟೆಯನ್ನು ತನ್ನ ನಿರ್ಮಲ ಜ್ಞಾನದೃಷ್ಟಿಯಿಂದ ನೋಡುತ್ತಾ ಇರುತ್ತಾನೆ. ॥ ೧೮ ॥ ಹಾಗಿರುವಾಗ ನನ್ನ ಶಂಕೆಯು ವ್ಯರ್ಥವಾದುದು. ನಾನಾದರೋ ಅವನ ಚರಣಗಳಲ್ಲಿ ಕೈಜೋಡಿಸಿಕೊಂಡು ವಿನೀತನಾಗಿ ನಿಂತುಕೊಳ್ಳುವೆನು. ಅವನು ನಸುನಗುತ್ತಾ ದಯಾಪೂರ್ಣವಾದ ಸ್ನೇಹದೃಷ್ಟಿಯಿಂದ ನನ್ನ ಕಡೆಗೆ ನೋಡುವನು. ಆ ಸಮಯದಲ್ಲಿ ನನ್ನ ಜನ್ಮ-ಜನ್ಮಾಂತರಗಳ ಸಮಸ್ತ ಪಾಪಗಳು ನಾಶವಾಗಿ ಹೋಗುವುವು. ಆಗ ನಾನು ಯಾವ ಸಂದೇಹವೂ ಇಲ್ಲದೆ ನಿತ್ಯನಿರಂತರವಾಗಿ ಪರಮಾನಂದದಲ್ಲಿ ಮುಳುಗಿ ಹೋಗುವೆನು. ॥ ೧೯ ॥ ನಾನು ಅವನ ಕುಟುಂಬಿಯೇ ಅಲ್ಲವೇ! ಯಾವಾಗಲೂ ಅವನ ಹಿತವನ್ನೇ ಬಯಸುವವನು. ಅವನಲ್ಲದೆ ಬೇರೆ ಯಾರೂ ನನಗೆ ಆರಾಧ್ಯದೇವರಿಲ್ಲ. ಇಂತಹ ಸ್ಥಿತಿಯಲ್ಲಿ ಅವನು ತನ್ನ ದೀರ್ಘವಾದ ಬಾಹುಗಳಿಂದ ಬರಸೆಳೆದು ನನ್ನನ್ನು ನಿಶ್ಚಯವಾಗಿ ಆಲಿಂಗಿಸಿಕೊಳ್ಳುವನು. ಆಹಾ! ಆ ಸಮಯ

ಸುಹೃತ್ತಮಂ ಜ್ಞಾತಿಮನನ್ಯದೈವತಂ
ದೋರ್ಭ್ಯಾಂ ಬೃಹದ್ಭ್ಯಾಂ ಪರಿರಪ್ಸ್ಯತೇಽಥ ಮಾಮ್ ।
ಆತ್ಮಾ ಹಿ ತೀರ್ಥೀಕ್ರಿಯತೇ ತದೈವ ಮೇ
ಬಂಧಶ್ಚ ಕರ್ಮಾತ್ಮಕ ಉಚ್ಛ್ವಸಿತ್ಯತಃ ॥ ೨೦ ॥

ಲಬ್ಧಾಂಗಸಂಗಂ ಪ್ರಣತಂ ಕೃತಾಂಜಲಿಂ
ಮಾಂ ವಕ್ಷ್ಯತೇಽಕ್ರೂರ ತತೇತ್ಯುರುಶ್ರವಾಃ ।
ತದಾ ವಯಂ ಜನ್ಮಭೃತೋ ಮಹೀಯಸಾ
ನೈವಾದೃತೋ ಯೋ ಧಿಗಮುಷ್ಯ ಜನ್ಮ ತತ್ ॥ ೨೧ ॥

ನ ತಸ್ಯ ಕಶ್ಚಿದ್ದಯಿತಃ ಸುಹೃತ್ತಮೋ
ನ ಚಾಪ್ರಿಯೋ ದ್ವೇಷ್ಯ ಉಪೇಕ್ಷ್ಯ ಏವ ವಾ ।
ತಥಾಪಿ ಭಕ್ತಾನ್ಭಜತೇ ಯಥಾ ತಥಾ
ಸುರದ್ರುಮೋ ಯದ್ವದುಪಾಶ್ರಿತೋಽರ್ಥದಃ ॥ ೨೨ ॥

ಕಿಂಚಾಗ್ರಜೋ ಮಾವನತಂ ಯದೂತ್ತಮಃ
ಸ್ಮಯನ್ಪರಿಷ್ವಜ್ಯ ಗೃಹೀತಮಂಜಲೌ ।
ಗೃಹಂ ಪ್ರವೇಶ್ಯಾಪ್ತಸಮಸ್ತಸತ್ಕೃತಂ
ಸಂಪ್ರಕ್ಷ್ಯತೇ ಕಂಸಕೃತಂ ಸ್ವಬಂಧುಷು ॥ ೨೩ ॥

ಶ್ರೀಶುಕ ಉವಾಚ

ಇತಿ ಸಂಚಿಂತಯನ್ ಕೃಷ್ಣಂ ಶ್ವಫಲ್ಕತನಯೋಽಧ್ವನಿ ।
ರಥೇನ ಗೋಕುಲಂ ಪ್ರಾಪ್ತಃ ಸೂರ್ಯಶ್ಚಾಸ್ತಗಿರಿಂ ನೃಪ ॥ ೨೪ ॥

ಪದಾನಿ ತಸ್ಯಾಖಿಲಲೋಕಪಾಲ-
ಕಿರೀಟಜುಷ್ಟಾಮಲಪಾದರೇಣೋಃ ।
ದದರ್ಶ ಗೋಷ್ಠೇ ಕ್ಷಿತಿಕೌತುಕಾನಿ
ವಿಲಕ್ಷಿತಾನ್ಯಬ್ಜಯವಾಂಕುಶಾದ್ಯೈಃ ॥ ೨೫ ॥

ತದ್ದರ್ಶನಾಹ್ಲಾದವಿವೃದ್ಧಸಂಭ್ರಮಃ
ಪ್ರೇಮ್ಣೋರ್ಧ್ವರೋಮಾಶ್ರುಕಲಾಕುಲೇಕ್ಷಣಃ ।
ರಥಾದವಸ್ಕಂದ್ಯ ಸ ತೇಷ್ವಚೇಷ್ಟತ
ಪ್ರಭೋರಮೂನ್ಯಂಘ್ರಿರಜಾಂಸ್ಯಹೋ ಇತಿ ॥ ೨೬ ॥

ದಲ್ಲಿ ನನ್ನ ದೇಹವು ಪವಿತ್ರವಾಗುವುದಲ್ಲದೆ ಬೇರೆಯವರನ್ನು ಪವಿತ್ರವಾಗಿಸುವಂತಹುದಾಗಬಹುದು. ಅವನ ಆಲಿಂಗನವು ದೊರೆತಾಕ್ಷಣವೇ ಅನಾದಿಕಾಲದಿಂದ ಅಲೆಯುತ್ತಿರಲು ಕಾರಣವಾದ ನನ್ನ ಕರ್ಮಬಂಧನಗಳು ಕಡಿದು ಹೋಗುವವು. ॥ ೨೦ ॥ ಶ್ರೀಕೃಷ್ಣನು ನನ್ನನ್ನು ಅಪ್ಪಿಕೊಂಡಾಗ ನಾನು ಕೈಜೊಡಿಸಿಕೊಂಡು ತಲೆಯನ್ನು ತಗ್ಗಿಸಿ ನಿಂತುಕೊಂಡಾಗ ಅವನು ನನ್ನನ್ನು – ಅಕ್ರೂರ ಚಿಕ್ಕಪ್ಪ! ಎಂದು ಸಂಬೋಧಿಸುವನು. ಪವಿತ್ರ ಹಾಗೂ ಮಧುರ ಕೀರ್ತಿಯನ್ನು ವಿಸ್ತಾರಮಾಡಲಿಕ್ಕಾಗಿಯೇ ಅವನು ಲೀಲೆಯನ್ನು ಮಾಡುತ್ತಿದ್ದಾನಲ್ಲ! ಆಗ ನನ್ನ ಜೀವನವು ಸಫಲವಾಗಿ ಹೋಗುವುದು. ಶ್ರೀಕೃಷ್ಣನು ತನ್ನವರನ್ನಾಗಿಸಿ ಕೊಳ್ಳದವರ ಜನ್ಮವು ವ್ಯರ್ಥ, ಅವರ ಜೀವನಕ್ಕೆ ಧಿಕ್ಕಾರವಿರಲಿ. ॥ ೨೧ ॥ ಆದರೆ ಭಗವಂತನಿಗೆ ಪ್ರಿಯರಾದವರಿರಲೀ, ಅಪ್ರಿಯರಾದವರಿರಲಿ ಯಾರೂ ಇಲ್ಲ. ಆತ್ಮೀಯ ಮಿತ್ರನೂ ಇಲ್ಲ, ಶತ್ರುವೂ ಇಲ್ಲ, ಅವನು ಯಾರನ್ನೂ ಉಪೇಕ್ಷಿಸುವುದೂ ಇಲ್ಲ. ಕಲ್ಪವೃಕ್ಷವು ತನ್ನನ್ನು ಆಶ್ರಯಿಸಿ ಬೇಡಿದವರಿಗೆ ಬೇಕಾದ ವಸ್ತುಗಳನ್ನು ನೀಡುವಂತೆಯೇ ಭಗವಾನ್ ಶ್ರೀಕೃಷ್ಣನೂ ಯಾರು ಅವನನ್ನು ಹೇಗೆ ಭಜಿಸುತ್ತಾನೋ ಹಾಗೆಯೇ ಅವನನ್ನು ಪ್ರೀತಿಸುತ್ತಾನೆ. ॥ ೨೨ ॥ ನಾನು ಅವರ ಮುಂದೆ ವಿನೀತಭಾವದಿಂದ ಕೈಜೋಡಿಸಿಕೊಂಡು ನಿಂತುಕೊಂಡಾಗ ಬಲರಾಮನು ನಸುನಗುತ್ತಾ ನನ್ನನ್ನು ಅಪ್ಪಿಕೊಳ್ಳುವನು ಹಾಗೂ ನನ್ನ ಎರಡೂ ಕೈಗಳನ್ನೂ ಹಿಡಿದುಕೊಂಡು ಮನೆಯೊಳಗೆ ಕರಕೊಂಡು ಹೋಗುವನು. ಅಲ್ಲಿ ಎಲ್ಲ ರೀತಿಯಿಂದ ನನ್ನ ಸತ್ಕಾರವಾಗುವುದು. ಅದಾದ ಬಳಿಕ 'ಅಕ್ರೂರ! ಕಂಸನು ನಮ್ಮ ಬಂಧುಗಳೊಡನೆ ಹೇಗೆ ವ್ಯವಹರಿಸುವನು?' ಎಂದು ಪ್ರಶ್ನಿಸುವನು. ॥ ೨೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಶ್ವಫಲ್ಕನಂದನ ಅಕ್ರೂರನು ದಾರಿಯಲ್ಲಿ ಹೀಗೆ ಯೋಚಿಸುತ್ತಾ ಇರುವಾಗಲೇ ಅವನ ರಥವು ನಂದಗೋಕುಲಕ್ಕೆ ತಲುಪಿತು. ಆಗ ಸೂರ್ಯನು ಅಸ್ತಾಚಲವನ್ನು ಸೇರಿದ್ದನು. ॥ ೨೪ ॥ ಯಾವ ಚರಣಕಮಲಗಳ ಧೂಳಿಯನ್ನು ಲೋಕಪಾಲರೆಲ್ಲರೂ ತಮ್ಮ ಕಿರೀಟಗಳಲ್ಲಿ ಧರಿಸಿಕೊಳ್ಳುವರೋ (ತಲೆಯಲ್ಲಿ ಧರಿಸುವರೋ) ಅಂತಹ ಭಗವಂತನ ಚರಣ ಚಿಹ್ನೆಗಳನ್ನು ಅಕ್ರೂರನು ಆ ವ್ರಜದಲ್ಲಿ ದರ್ಶಿಸಿದನು. ಕಮಲ, ಯವ, ಅಂಕುಶ ಮೊದಲಾದ ಅಸಾಧಾರಣ ಚಿಹ್ನೆಗಳಿಂದ ಭೂದೇವಿಯ ಶೋಭೆಯನ್ನು ಹೆಚ್ಚಿಸುತ್ತಿದ್ದ ಭಗವಂತನ ಪಾದ ಚಿಹ್ನೆಗಳೆಂದೇ ಅರಿವಾಗುತ್ತಿತ್ತು. ॥ ೨೫ ॥ ಆ ಚರಣಚಿಹ್ನೆಗಳನ್ನು ಕಂಡೊಡನೆಯೇ ಅಕ್ರೂರನ ಹೃದಯ ಆನಂದದಿಂದ ತುಂಬಿಹೋಯಿತು. ಶ್ರೀಕೃಷ್ಣನನ್ನು ನೋಡಿದಷ್ಟೇ ಸಂಭ್ರಮಗೊಂಡಿತು. ಪ್ರೇಮಾಧಿಕ್ಯದಿಂದ ರೋಮರಾಜಿಗಳು ನಿಮಿರಿ ನಿಂತವು, ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿ ಬಂದುವು. ಅವನು ರಥದಿಂದ ಧುಮ್ಮಿಕ್ಕಿ ಆ ಪ್ರಭುವಿನ ಪಾದಧೂಳಿನಲ್ಲಿ ಹೊರಳಾಡಿದನು. ನನ್ನ ಪ್ರಭುವಿನ ಪವಿತ್ರವಾದ ಚರಣಧೂಳಿಯು ಇದಾಗಿದೆ ಎಂದು ಉದ್ಗರಿಸಿದನು. ॥ ೨೬ ॥

ದೇಹಂಭೃತಾಮಿಯಾನರ್ಥೋ ಹಿತ್ವಾದಂಭಂ ಭಿಯಂ ಶುಚಮ್ ।
ಸಂದೇಶಾದ್ಯೋ ಹರೇರ್ಲಿಂಗದರ್ಶನಶ್ರವಣಾದಿಭಿಃ
॥ ೨೭ ॥

ದದರ್ಶ ಕೃಷ್ಣಂ ರಾಮಂ ಚ ವ್ರಜೇ ಗೋದೋಹನಂ ಗತೌ ।
ಪೀತನೀಲಾಂಬರಧರೌ ಶರದಂಬುರುಹೇಕ್ಷಣೌ
॥ ೨೮ ॥

ಕಿಶೋರೌ ಶ್ಯಾಮಲಶ್ವೇತೌ ಶ್ರೀನಿಕೇತೌ ಬೃಹದ್ಭುಜೌ ।
ಸುಮುಖೌ ಸುಂದರವರೌ ಬಾಲದ್ವಿರದವಿಕ್ರಮೌ
॥ ೨೯ ॥

ಧ್ವಜವಜ್ರಾಂಕುಶಾಂಭೋಜೈಶ್ಚಿಹ್ನಿತೈರಂಘ್ರಿಭಿರ್ವ್ರಜಮ್ ।
ಶೋಭಯಂತೌ ಮಹಾತ್ಮಾನಾವನುಕ್ರೋಶಸ್ಮಿತೇಕ್ಷಣೌ
॥ ೩೦ ॥

ಉದಾರರುಚಿರಕ್ರೀಡೌ ಸ್ರಗ್ವಿಣೌ ವನಮಾಲಿನೌ ।
ಪುಣ್ಯಗಂಧಾನುಲಿಪ್ತಾಂಗೌ ಸ್ನಾತೌ ವಿರಜವಾಸಸೌ
॥ ೩೧ ॥

ಪ್ರಧಾನಪುರುಷಾವಾದ್ಯೌ ಜಗದ್ಧೇತೂ ಜಗತ್ಪತೀ ।
ಅವತೀರ್ಣೌ ಜಗತ್ಯರ್ಥೇ ಸ್ವಾಂಶೇನ ಬಲಕೇಶವೌ
॥ ೩೨ ॥

ದಿಶೋ ವಿತಿಮಿರಾ ರಾಜನ್ ಕುರ್ವಾಣೌ ಪ್ರಭಯಾ ಸ್ವಯಾ ।
ಯಥಾ ಮಾರಕತಃ ಶೈಲೋ ರೌಪ್ಯಶ್ಚ ಕನಕಾಚಿತೌ
॥ ೩೩ ॥

ರಥಾತ್ತೂರ್ಣಮವಪ್ಲುತ್ಯ ಸೋಽಕ್ರೂರಃ ಸ್ನೇಹವಿಹ್ವಲಃ ।
ಪಪಾತ ಚರಣೋಪಾಂತೇ ದಂಡವದ್ರಾಮಕೃಷ್ಣಯೋಃ
॥ ೩೪ ॥

ಭಗವದ್ದರ್ಶನಾಹ್ಲಾದಬಾಷ್ಪಪರ್ಯಾಕುಲೇಕ್ಷಣಃ ।
ಪುಲಕಾಚಿತಾಂಗ ಔತ್ಕಂಠ್ಯಾತ್ ಸ್ವಾಖ್ಯಾನೇ ನಾಶಕನ್ನೃಪ
॥ ೩೫ ॥

ಪರೀಕ್ಷಿತನೇ! ಕಂಸನ ಸಂದೇಶವನ್ನು ಹೊತ್ತು ತಂದ ಅಕ್ರೂರನ ಇಷ್ಟರವರೆಗಿನ ಭಾವ-ಸ್ಥಿತಿಯೇ ಜೀವಿಗಳು ದೇವಹವನ್ನು ಧರಿಸಿದುದಕ್ಕೆ ಪರಮ ಲಾಭವು. ಅದಕ್ಕಾಗಿ ದಂಭ, ಭಯ, ಶೋಕ ಇವುಗಳನ್ನು ತ್ಯಜಿಸಿ ಭಗವಂತನ ಮೂರ್ತಿ ಚಿಹ್ನೆ, ಲೀಲೆ, ಸ್ಥಾನ ಮತ್ತು ಗುಣಗಳನ್ನು ದರ್ಶನ-ಶ್ರವಣದ ಮೂಲಕ ಇಂತಹ ಭಾವವನ್ನು ಸಂಪಾದಿಸುವುದೇ ಜೀವಮಾತ್ರರ ಪರಮ ಕರ್ತವ್ಯವಾಗಿದೆ. ॥ ೨೭ ॥

ವ್ರಜದಲ್ಲಿ ತಲುಪುತ್ತಲೇ ಅಕ್ರೂರನು ಬಲರಾಮ-ಶ್ರೀಕೃಷ್ಣರಿಬ್ಬರೂ ಹಸುಗಳ ಹಾಲುಕರೆಯುವಲ್ಲಿ ವಿರಾಜಿಸುತ್ತಿರುವುದನ್ನು ನೋಡಿದನು. ಶ್ಯಾಮಸುಂದರ ಶ್ರೀಕೃಷ್ಣನು ಪೀತಾಂಬರವನ್ನು ಮತ್ತು ಗೌರಾಂಗನಾದ ಬಲರಾಮನು ನೀಲಾಂಬರವನ್ನು ಉಟ್ಟಿದ್ದರು. ಶರತ್ಕಾಲದ ಕಮಲದಂತೆ ಅವರ ಕಣ್ಣುಗಳು ಅರಳಿದ್ದವು. ॥ ೨೮ ॥ ಈಗ ತಾನೇ ಅವರು ಕಿಶೋರಾವಸ್ಥೆಯನ್ನು ಪ್ರವೇಶಿಸಿದ್ದರು. ಗೌರ ಶ್ಯಾಮಲ ವರ್ಣದಿಂದ ಶೋಭಿಸುತ್ತಿದ್ದ ಅವರಿಬ್ಬರೂ ಸೌಂದರ್ಯ ಗಣಿಗಳಂತಿದ್ದರು. ಅಜಾನು ಬಾಹುಗಳಾಗಿದ್ದರು. ಸುಂದರವಾದ ಮುಖಾರವಿಂದದಿಂದ ಕೂಡಿದ್ದು ಅತ್ಯಂತ ಮನೋಹರರಾಗಿ ಇದ್ದರು. ಮರಿಯಾನೆಯಂತೆ ಅವರ ನಡಿಗೆ ಗಂಭೀರವಾಗಿ ಇತ್ತು. ॥ ೨೯ ॥ ಅವರ ಚರಣಗಳಲ್ಲಿ ಧ್ವಜ, ವಜ್ರ, ಅಂಕುಶ, ಕಮಲ ಇವುಗಳ ಚಿಹ್ನೆಯಿದ್ದಿತು. ಅವರು ನಡೆವಾಗ ಪೃಥಿವಿಯು ಈ ಚಿಹ್ನೆಗಳಿಂದ ಅಂಕಿತವಾಗಿ ಶೋಭಾಯಮಾನವಾಗುತ್ತಿತ್ತು, ದಯಾರಸವೇ ಒಸರುತ್ತಿದೆಯೋ ಎಂಬಂತೆ ಅವರ ಮುಗುಳ್ನಗು ಇತ್ತು. ಅವರು ಉದಾರತೆಯ ಮೂರ್ತಿಮಂತ ಸ್ವರೂಪರೇ ಆಗಿದ್ದರು. ॥ ೩೦ ॥ ಅವರ ಒಂದೊಂದು ಲೀಲೆಯೂ ಉದಾರತೆಯಿಂದಲೂ, ಸುಂದರ ಕಲೆಯಿಂದಲೂ ಕೂಡಿತ್ತು. ಕೊರಳಿನಲ್ಲಿ ವನಮಾಲೆಯನ್ನು, ಮಣಿಮಾಲೆಗಳನ್ನು ಧರಿಸಿದ್ದರು. ಅವರು ಆಗತಾನೇ ಸ್ನಾನಮಾಡಿ ನಿರ್ಮಲವಾದ ವಸ್ತ್ರಗಳನ್ನುಟ್ಟಿದ್ದರು. ಶರೀರಕ್ಕೆ ಪವಿತ್ರವಾದ ಸುಗಂಧಿತ ಅಂಗರಾಗವನ್ನು, ಚಂದನವನ್ನು ಹಚ್ಚಿಕೊಂಡಿದ್ದರು. ॥ ೩೧ ॥ ಪರೀಕ್ಷಿತನೇ! ಜಗತ್ತಿನ ಆದಿ ಕಾರಣನೂ, ಜಗತ್ಪತಿಯೂ ಆದ ಪುರುಷೋತ್ತಮನೇ ಪ್ರಪಂಚದ ರಕ್ಷಣೆಗಾಗಿ ತನ್ನ ಪೂರ್ಣಾಂಶದಿಂದ ಬಲರಾಮ-ಶ್ರೀಕೃಷ್ಣರಾಗಿ ಅವತರಿಸಿ, ತಮ್ಮ ಅಂಗಕಾಂತಿಯಿಂದ ಹತ್ತು ದಿಕ್ಕುಗಳ ಅಂಧಕಾರವನ್ನೂ ತೊಡೆದು ಹಾಕುತ್ತಿರುವುದನ್ನು ಅಕ್ರೂರನು ನೋಡಿದನು. ಬಂಗಾರದ ಮೆರಗು ಕೊಟ್ಟ ಬೆಳ್ಳಿಯ ಮತ್ತು ಮರಕತ ಪರ್ವತಗಳಂತೆ ಕಂಗೊಳಿಸುತ್ತಿದ್ದರು. ॥ ೩೨-೩೩ ॥ ಅವರನ್ನು ನೋಡುತ್ತಲೇ ಅಕ್ರೂರನು ಪ್ರೇಮಾಧಿಕ್ಯದಿಂದ ವಿಹ್ವಲನಾಗಿ ರಥದಿಂದ ಕೆಳಗೆ ಧುಮುಕಿ ಭಗವಾನ್ ಶ್ರೀಕೃಷ್ಣ ಬಲರಾಮರ ಚರಣಗಳ ಬಳಿಸಾರಿ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೩೪ ॥ ಪರೀಕ್ಷಿತನೇ! ಭಗವಂತನ ದರ್ಶನದಿಂದ ಅವನ ಕಣ್ಣುಗಳಲ್ಲಿ ಆನಂದಬಾಷ್ಪಗಳು ತುಂಬಿಹೋದವು. ಶರೀರವೆಲ್ಲವೂ ಪುಳಕಗೊಂಡಿತು. ಉತ್ಕಂಠತೆಯಿಂದ ಕೊರಳು ಬಿಗಿದು ತನ್ನ ಹೆಸರನ್ನು ಉಚ್ಚರಿಸಲಾರದಷ್ಟು ಆಹ್ಲಾದಿತನಾದನು. ॥ ೩೫ ॥

ಭಗವಾಂಸ್ತಮಭಿಪ್ರೇತ್ಯ ರಥಾಂಗಾಂಕಿತಪಾಣಿನಾ ।
ಪರಿರೇಭೇಽಭ್ಯುಪಾಕೃಷ್ಯ ಪ್ರೀತಃ ಪ್ರಣತವತ್ಸಲಃ
॥ ೩೬ ॥

ಶರಣಾಗತವತ್ಸಲ ಶ್ರೀಕೃಷ್ಣನು ಅವನ ಮನಸ್ಸಿನ ಭಾವವನ್ನರಿತು ಅತ್ಯಂತ ಪ್ರಸನ್ನತೆಯಿಂದ ತನ್ನ ಚಕ್ರಾಂಕಿತ ಕೈಗಳಿಂದ ಅವನನ್ನು ಬರಸೆಳೆದು ಆಲಿಂಗಿಸಿಕೊಂಡನು. ॥ ೩೬ ॥ ಅನಂತರ ಕೈ ಜೋಡಿಸಿಕೊಂಡು ವಿನೀತನಾಗಿ ಮಹಾತ್ಮನಾದ ಬಲರಾಮನ ಮುಂದೆ ನಿಂತುಕೊಂಡಾಗ ಅವನೂ ಅಕ್ರೂರನನ್ನು ಅಪ್ಪಿಕೊಂಡನು. ಅವನ ಒಂದು ಕೈಯನ್ನು ಶ್ರೀಕೃಷ್ಣನೂ, ಮತ್ತೊಂದನ್ನು ಬಲರಾಮನು ಹಿಡಿದುಕೊಂಡು ಮನೆಯೊಳಗೆ ಕರೆದೊಯ್ದರು. ॥ ೩೭ ॥

ಸಂಕರ್ಷಣಶ್ಚ ಪ್ರಣತಮುಪಗುಹ್ಯ ಮಹಾಮನಾಃ ।
ಗೃಹೀತ್ವಾಪಾಣಿನಾ ಪಾಣೀ ಅನಯತ್ಸಾನುಜೋ ಗೃಹಮ್
॥ ೩೭ ॥

ಪೃಷ್ಟ್ವಾಥ ಸ್ವಾಗತಂ ತಸ್ಮೈ ನಿವೇದ್ಯ ಚ ವರಾಸನಮ್ ।
ಪ್ರಕ್ಷಾಲ್ಯ ವಿಧಿವತ್ಪಾದೌ ಮಧುಪರ್ಕಾರ್ಹಣಮಾಹರತ್
॥ ೩೮ ॥

ಮನೆಯೊಳಗೆ ಕರೆತಂದು ಭಗವಂತನು ಅಕ್ರೂರನ ಸ್ವಾಗತ ಸತ್ಕಾರವನ್ನು ಮಾಡಿ, ಕುಶಲ ಪ್ರಶ್ನೆಗಳಾದ ಬಳಿಕ, ಆಸನದಲ್ಲಿ ಕುಳ್ಳಿರಿಸಿ ವಿಧಿವತ್ತಾಗಿ ಅವನ ಕಾಲುಗಳನ್ನು ತೊಳೆದು ಮಧುಪರ್ಕಾದಿ ಉಪಚಾರಗಳನ್ನು ಅರ್ಪಿಸಿದನು. ॥ ೩೮ ॥ ಅನಂತರ ಶ್ರೀಕೃಷ್ಣನು ಅತಿಥಿಯಾದ ಅಕ್ರೂರನಿಗೆ ಹಸುವೊಂದನ್ನು ಕೊಟ್ಟು ಅವನ ಕಾಲನ್ನೊತ್ತಿ ಮಾರ್ಗಾಯಾಸವನ್ನು ಪರಿಹರಿಸಿದನು. ಬಳಿಕ ಶ್ರದ್ಧಾದರಗಳಿಂದ ಅವನಿಗೆ ಪವಿತ್ರವೂ, ಅನೇಕಗುಣಗಳಿಂದ ಕೂಡಿದ ಮೃಷ್ಟಾನ್ನವನ್ನು ಭೋಜನ ಮಾಡಿಸಿದನು. ॥ ೩೯ ॥

ನಿವೇದ್ಯ ಗಾಂ ಚಾತಿಥಯೇ ಸಂವಾಹ್ಯ ಶ್ರಾಂತಮಾದೃತಃ ।
ಅನ್ನಂ ಬಹುಗುಣಂ ಮೇಧ್ಯಂ ಶ್ರದ್ಧಯೋಪಾಹರದ್ವಿಭುಃ
॥ ೩೯ ॥

ತಸ್ಮೈ ಭುಕ್ತವತೇ ಪ್ರೀತ್ಯಾ ರಾಮಃ ಪರಮಧರ್ಮವಿತ್ ।
ಮುಖವಾಸೈರ್ಗಂಧಮಾಲ್ಯೈಃ ಪರಾಂ ಪ್ರೀತಿಂ ವ್ಯಧಾತ್ಪುನಃ
॥ ೪೦ ॥

ಅಕ್ರೂರನು ಭೋಜನವನ್ನು ಪೂರೈಸಿದ ಬಳಿಕ ಧರ್ಮದ ಮರ್ಮಜ್ಞನಾದ ಭಗವಾನ್ ಬಲರಾಮನೂ ಅತ್ಯಂತ ಪ್ರೇಮದಿಂದ ಸುವಾಸನೆಯನ್ನುಂಟುಮಾಡುವ ತಾಂಬೂಲವನ್ನೂ ಸುಗಂಧಿತ ಪುಷ್ಪಹಾರವನ್ನೂ ಕೊಟ್ಟು ಅಕ್ರೂರನನ್ನು ಆನಂದಗೊಳಿಸಿದನು. ॥ ೪೦ ॥ ಹೀಗೆ ಆತಿಥ್ಯ-ಸತ್ಕಾರಗಳಾದ ಬಳಿಕ ನಂದಗೋಪನು ಅಕ್ರೂರನ ಬಳಿಗೆ ಬಂದು ಕೇಳಿದನು – ಅಕ್ರೂರ ಮಹಾಶಯನೇ ! ನಿರ್ದಯಿಯಾದ ಕಂಸನು ಬದುಕಿರುವಾಗ ಕಟುಕನ ಬಳಿಯಲ್ಲಿರುವ ಕುರಿಗಳಂತೆ ನೀವೆಲ್ಲರೂ ಹೇಗೆ ತಾನೇ ಜೀವಿಸಿರುವಿರಿ ? ॥ ೪೧ ॥ ಪ್ರಾಣಘಾತಕನಾದ, ನೀಚನಾದ ಕಂಸನು ಗೋಳಾಡುತ್ತಿದ್ದ ತನ್ನ ತಂಗಿಯ ಹಸುಕೂಸುಗಳನ್ನು ಕೊಂದು ಬಿಟ್ಟಿರುವನು. ಅಂತಹವನ ಆಡಳಿತಕ್ಕೆ ಒಳಪಟ್ಟಿರುವ ಪ್ರಜೆಗಳ ಕುಶಲವನ್ನು ವಿಚಾರಿಸುವುದರಲ್ಲಿ ಪ್ರಯೋಜನ ವೇನಿದೆ ? ॥ ೪೨ ॥ ಅಕ್ರೂರನೂ ನಂದಗೋಪನಲ್ಲಿ ಮೊದಲೇ ಕುಶಲವನ್ನು ಕೇಳಿದ್ದನು. ಈಗ ಹೀಗೆ ನಂದರಾಜನು ಮಧುರವಾಗಿ ಅಕ್ರೂರನಲ್ಲಿ ಕುಶಲವನ್ನು ಕೇಳಿ ಅವನನ್ನು ಸಮ್ಮಾನಿಸಿದಾಗ ಅವನ ಮಾರ್ಗಾಯಾಸವೆಲ್ಲ ದೂರವಾಯಿತು. ॥ ೪೩ ॥

ಪಪ್ರಚ್ಛ ಸತ್ಕೃತಂ ನಂದಃ ಕಥಂ ಸ್ಥ ನಿರನುಗ್ರಹೇ ।
ಕಂಸೇ ಜೀವತಿ ದಾಶಾರ್ಹ ಸೌನಪಾಲಾ ಇವಾವಯಃ
॥ ೪೧ ॥

ಯೋಽವಧೀತ್ಸ್ವಸ್ವಸುಸ್ತೋಕಾನ್ ಕ್ರೋಶಂತ್ಯಾ ಅಸುತೃಪ್ಖಲಃ ।
ಕಿಂ ನು ಸ್ವಿತ್ತತ್ಪ್ರಜಾನಾಂ ವಃ ಕುಶಲಂ ವಿಮೃಶಾಮಹೇ
॥ ೪೨ ॥

ಇತ್ಥಂ ಸೂನೃತಯಾ ವಾಚಾ ನಂದೇನ ಸುಸಭಾಜಿತಃ ।
ಅಕ್ರೂರಃ ಪರಿಪೃಷ್ಟೇನ ಜಹಾವಧ್ವಪರಿಶ್ರಮಮ್
॥ ೪೩ ॥

ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೩೮ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಅಕ್ರೂರಾಗಮನಂ ನಾಮ ಅಷ್ಟತ್ರಿಂಶೋಽಧ್ಯಾಯಃ ॥ ೩೮ ॥

# ಮೂವತ್ತೊಂಭತ್ತನೆಯ ಅಧ್ಯಾಯ

## ಶ್ರೀಕೃಷ್ಣ-ಬಲರಾಮರು ಮಥುರಾಗಮನ

*ಶ್ರೀಶುಕ ಉವಾಚ*

**ಸುಖೋಪವಿಷ್ಟಃ ಪರ್ಯಂಕೇ ರಾಮಕೃಷ್ಣೋರುಮಾನಿತಃ ।**
**ಲೇಭೇ ಮನೋರಥಾನ್ಸರ್ವಾನ್ ಪಥಿ ಯಾನ್ಸ ಚಕಾರ ಹ ॥ ೧ ॥**

**ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ।**
**ತಥಾಪಿ ತತ್ಪರಾ ರಾಜನ್ ನಹಿ ವಾಂಛಂತಿ ಕಿಂಚನ ॥ ೨ ॥**

**ಸಾಯಂತನಾಶನಂ ಕೃತ್ವಾ ಭಗವಾನ್ ದೇವಕೀಸುತಃ ।**
**ಸುಹೃತ್ಸು ವೃತ್ತಂ ಕಂಸಸ್ಯ ಪಪ್ರಚ್ಛಾನ್ಯಚ್ಚಿಕೀರ್ಷಿತಮ್ ॥ ೩ ॥**

*ಶ್ರೀಭಗವಾನುವಾಚ*

**ತಾತ ಸೌಮ್ಯಾಗತಃ ಕಚ್ಚಿತ್ ಸ್ವಾಗತಂ ಭದ್ರಮಸ್ತು ವಃ ।**
**ಅಪಿ ಸ್ವಜ್ಞಾತಿಬಂಧೂನಾಮನಮೀವಮನಾಮಯಮ್ ॥ ೪ ॥**

**ಕಿಂ ನು ನಃ ಕುಶಲಂ ಪೃಚ್ಛೇ ಏಧಮಾನೇ ಕುಲಾಮಯೇ ।**
**ಕಂಸೇ ಮಾತುಲನಾಮ್ನ್ಯಂಗ ಸ್ವಾನಾಂ ನಸ್ತತ್ಪ್ರಜಾಸು ಚ ॥ ೫ ॥**

**ಅಹೋ ಅಸ್ಮದಭೂದ್ಭೂರಿ ಪಿತ್ರೋರ್ವೃಜಿನಮಾರ್ಯಯೋಃ ।**
**ಯದ್ಧೇತೋಃ ಪುತ್ರಮರಣಂ ಯದ್ಧೇತೋರ್ಬಂಧನಂ ತಯೋಃ ॥ ೬ ॥**

**ದಿಷ್ಟ್ಯಾದ್ಯ ದರ್ಶನಂ ಸ್ವಾನಾಂ ಮಹ್ಯಂ ವಃ ಸೌಮ್ಯ ಕಾಂಕ್ಷಿತಮ್ ।**
**ಸಂಜಾತಂ ವರ್ಣ್ಯತಾಂ ತಾತ ತವಾಗಮನಕಾರಣಮ್ ॥ ೭ ॥**

*ಶ್ರೀಶುಕ ಉವಾಚ*

**ಪೃಷ್ಟೋ ಭಗವತಾ ಸರ್ವಂ ವರ್ಣಯಾಮಾಸ ಮಾಧವಃ ।**
**ವೈರಾನುಬಂಧಂ ಯದುಷು ವಸುದೇವವಧೋದ್ಯಮಮ್ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಬಲರಾಮ-ಶ್ರೀಕೃಷ್ಣರಿಂದ ಚೆನ್ನಾಗಿ ಆದರಿಸಲ್ಪಟ್ಟ ಅಕ್ರೂರನು ಮಂಚದ ಮೇಲೆ ಸುಖವಾಗಿ ಕುಳಿತಿದ್ದನು. ಅವನು ಬರುವಾಗ ದಾರಿಯಲ್ಲಿ ಏನೇನನ್ನು ಬಯಸಿದ್ದನೋ ಅದೆಲ್ಲವನ್ನೂ ಪಡೆದು ಕೊಂಡನು. ಮನೋರಥಗಳೆಲ್ಲವೂ ಈಡೇರಿದವು. ॥ ೧ ॥ ರಾಜನೇ! ಮಹಾಲಕ್ಷ್ಮಿಗೆ ನಿವಾಸಸ್ಥಾನವಾದ ಭಗವಾನ್ ಶ್ರೀಕೃಷ್ಣನೇ ಪ್ರಸನ್ನನಾದನೆಂದರೆ ಲಭಿಸದ ವಸ್ತುವು ಯಾವುದು ತಾನೇ ಇದ್ದೀತು? ಹೀಗಿದ್ದರೂ ಭಗವಂತನಲ್ಲಿಯೇ ಪರಮಭಕ್ತಿಯುಳ್ಳ ಭಕ್ತೋತ್ತಮರು ಯಾವುದೇ ವಸ್ತುವನ್ನು ಬಯಸುವುದಿಲ್ಲ. ॥ ೨ ॥ ದೇವಕೀನಂದನ ಶ್ರೀಕೃಷ್ಣನು ಸಾಯಂಕಾಲದ ಭೋಜನಾನಂತರ ಅಕ್ರೂರನ ಬಳಿಗೆ ಬಂದು – ತನ್ನ ಸ್ವಜನ – ಸಂಬಂಧಿಗಳ ಜೊತೆಗೆ ಕಂಸನು ಹೇಗೆ ವ್ಯವಹರಿಸುವನು ಹಾಗೂ ಮುಂದಿನ ಕಾರ್ಯಕ್ರಮದ ಕುರಿತು ಕೇಳಿದನು. ॥ ೩ ॥

**ಭಗವಾನ್ ಶ್ರೀಕೃಷ್ಣನು ಕೇಳಿದನು** – ಸೌಮ್ಯನಾದ ಅಕ್ರೂರನೇ! ಪ್ರಯಾಣದಲ್ಲಿ ಯಾವ ತೊಂದರೆಯೂ ಆಗಲಿಲ್ಲವಲ್ಲ? ನಿನಗೆ ಸ್ವಾಗತ ಬಯಸುತ್ತೇನೆ. ನಿನಗೆ ಮಂಗಳವಾಗಲಿ. ಮಥುರೆಯಲ್ಲಿ ನಮ್ಮ ಆತ್ಮೀಯ ಬಂಧುಗಳೂ, ಸುಹೃದರೂ ಹಾಗೂ ಇತರ ಬಾಂಧವರೆಲ್ಲರೂ ಕುಶಲರಾಗಿದ್ದು ಸ್ವಸ್ಥರಾಗಿರುವರೇ? ॥ ೪ ॥ ಹೆಸರಿಗೆ ಮಾತ್ರ ಮಾವನಾದ ಕಂಸನಾದರೋ ನಮ್ಮ ಕುಲಕ್ಕೆ ಒಂದು ಭಯಂಕರ ವ್ಯಾಧಿರೂಪನೇ ಆಗಿರುವನು. ಅವನು ವೃದ್ಧಿ ಹೊಂದುತ್ತಿರುವವರೆಗೆ ನಾವು ನಮ್ಮ ವಂಶಿಯರ, ಸಂತಾನದ ಮತ್ತು ಪ್ರಜೆಗಳ ಕುಶಲವನ್ನು ಕೇಳುವುದೇನಿದೆ? ॥ ೫ ॥ ಸೌಮ್ಯನೇ! ಇದೊಂದು ನಮಗೆ ಅತ್ಯಂತ ದುಃಖದ ಸಂಗತಿಯಾಗಿದೆ. ನನ್ನ ಸಲುವಾಗಿಯೇ ನಿರಪರಾಧಿಗಳಾದ, ಸದಾಚಾರ ಸಂಪನ್ನರಾದ ನನ್ನ ತಂದೆ-ತಾಯಿಗಳು ಪಡಬಾರದ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ನನ್ನ ಕಾರಣದಿಂದಲೇ ಅವರ ಕಾಲುಗಳಿಗೆ ಸಂಕೋಲೆಗಳನ್ನು ತೊಡಿಸಿ ಸೆರೆಮನೆಯಲ್ಲಿಡಲಾಗಿದೆ. ನನ್ನ ಕಾರಣದಿಂದಲೇ ಅವರ ಮಕ್ಕಳೂ ಕೊಲ್ಲಲ್ಪಟ್ಟರು. ॥ ೬ ॥ ನಿಮ್ಮನ್ನೆಲ್ಲ ನೋಡಬೇಕೆಂದು ನಾನು ಬಹಳ ದಿನಗಳಿಂದ ಬಯಸುತ್ತಿದ್ದೆ. ನನ್ನ ಸೌಭಾಗ್ಯದಿಂದ ಆ ಅಭಿಲಾಷೆಯು ಇಂದು ಪೂರ್ಣವಾಯಿತು. ಸೌಮ್ಯಸ್ವಭಾವದ ಚಿಕ್ಕಪ್ಪನವರೇ! ತಮ್ಮ ಶುಭಾಗಮನವು ಯಾವ ನಿಮಿತ್ತದಿಂದ ಆಯಿತು ಎಂಬುದನ್ನು ದಯವಿಟ್ಟು ತಿಳಿಸಿರಿ. ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಪ್ರಶ್ನಿಸಿದಾಗ ಅಕ್ರೂರನು ಹೇಳಿದನು ಕಂಸನಾದರೋ ಯದುವಂಶೀಯರೊಡನೆ ದ್ವೇಷವನ್ನು ಕಟ್ಟಿಕೊಂಡಿರುವನು. ಅವನು ವಸುದೇವನನ್ನು ಕೂಡ ವಧಿಸಲು ಪ್ರಯತ್ನಶೀಲನಾಗಿರುವನು. ॥ ೮ ॥

ಯತ್ಸಂದೇಶೋ ಯದರ್ಥಂ ವಾ ದೂತಃ ಸಂಪ್ರೇಷಿತಃ ಸ್ವಯಮ್ ।
ಯದುಕ್ತಂ ನಾರದೇನಾಸ್ಯ ಸ್ವಜನ್ಮಾನಕದುಂದುಭೇಃ
॥ ೯ ॥

ಶ್ರುತ್ವಾಕ್ರೂರವಚಃ ಕೃಷ್ಣೋ ಬಲಶ್ಚ ಪರವೀರಹಾ ।
ಪ್ರಹಸ್ಯ ನಂದಂ ಪಿತರಂ ರಾಜ್ಞಾಽಽದಿಷ್ಟಂ ವಿಜಜ್ಞತುಃ
॥ ೧೦ ॥

ಗೋಪಾನ್ ಸಮಾದಿಶತ್ಸೋಽಪಿ ಗೃಹ್ಯತಾಂ ಸರ್ವಗೋರಸಃ ।
ಉಪಾಯನಾನಿ ಗೃಹ್ಣೀಧ್ವಂ ಯುಜ್ಯಂತಾಂ ಶಕಟಾನಿ ಚ
॥ ೧೧ ॥

ಯಾಸ್ಯಾಮಃ ಶ್ವೋ ಮಧುಪುರೀಂ ದಾಸ್ಯಾಮೋ ನೃಪತೇ ರಸಾನ್ ।
ದ್ರಕ್ಷ್ಯಾಮಃ ಸುಮಹತ್ಪರ್ವ ಯಾಂತಿ ಜಾನಪದಾಃ ಕಿಲ ।
ಏವಮಾಘೋಷಯತ್ ಕ್ಷತ್ತಾ ನಂದಗೋಪಃ ಸ್ವಗೋಕುಲೇ
॥ ೧೨ ॥

ಗೋಪ್ಯಸ್ತಾಸ್ತದುಪಶ್ರುತ್ಯ ಬಭೂವುರ್ವ್ಯಥಿತಾ ಭೃಶಮ್ ।
ರಾಮಕೃಷ್ಣೌ ಪುರೀಂ ನೇತುಮಕ್ರೂರಂ ವ್ರಜಮಾಗತಮ್
॥ ೧೩ ॥

ಕಾಶ್ಚಿತ್ತತ್ಕೃತಹೃತ್ತಾಪಶ್ವಾಸಮ್ಲಾನಮುಖಶ್ರಿಯಃ ।
ಸ್ರಂಸದ್ದುಕೂಲವಲಯಕೇಶಗ್ರಂಥ್ಯಶ್ಚ ಕಾಶ್ಚನ
॥ ೧೪ ॥

ಅನ್ಯಾಶ್ಚ ತದನುಧ್ಯಾನನಿವೃತ್ತಾಶೇಷವೃತ್ತಯಃ ।
ನಾಭ್ಯಜಾನನ್ನಿಮಂ ಲೋಕಮಾತ್ಮಲೋಕಂ ಗತಾ ಇವ
॥ ೧೫ ॥

ಸ್ಮರಂತ್ಯಶ್ಚಾಪರಾಃ ಶೌರೇರನುರಾಗಸ್ಮಿತೇರಿತಾಃ ।
ಹೃದಿಸ್ಪೃಶಶ್ಚಿತ್ರಪದಾ ಗಿರಃ ಸಂಮುಮುಹುಃ ಸ್ತ್ರಿಯಃ
॥ ೧೬ ॥

ಗತಿಂ ಸುಲಲಿತಾಂ ಚೇಷ್ಟಾಂ ಸ್ನಿಗ್ಧಹಾಸಾವಲೋಕನಮ್ ।
ಶೋಕಾಪಹಾನಿ ನರ್ಮಾಣಿ ಪ್ರೋದ್ದಾಮಚರಿತಾನಿ ಚ
॥ ೧೭ ॥

ಚಿಂತಯಂತ್ಯೋ ಮುಕುಂದಸ್ಯ ಭೀತಾ ವಿರಹಕಾತರಾಃ ।
ಸಮೇತಾಃ ಸಂಘಶಃ ಪ್ರೋಚುರಶ್ರುಮುಖ್ಯೋಽಚ್ಯುತಾಶಯಾಃ
॥ ೧೮ ॥

ಅಕ್ರೂರನು ಕಂಸನ ಸಂದೇಶವನ್ನೂ, ಯಾವ ಉದ್ದೇಶದಿಂದ ತನ್ನನ್ನು ದೂತನಾಗಿ ಕಳಿಸಿರುವ ನೆಂಬುದನ್ನು ತಿಳಿಸಿದನು. ವಸುದೇವನ ಮನೆಯಲ್ಲಿ ಶ್ರೀಕೃಷ್ಣನು ಹುಟ್ಟಿರುವ ವೃತ್ತಾಂತವನ್ನು ನಾರದರು ಕಂಸನಿಗೆ ತಿಳಿಸಿದುದೆಲ್ಲವನ್ನು ಹೇಳಿದನು. ॥ ೯ ॥ ಅಕ್ರೂರನು ಹೇಳಿದುದೆಲ್ಲವನ್ನೂ ಕೇಳಿ ಶತ್ರುವಿನಾಶಕರಾದ ಶ್ರೀಕೃಷ್ಣ ಬಲರಾಮರು ನಗತೊಡಗಿದರು ಮತ್ತು ಶ್ರೀಕೃಷ್ಣನು ತಂದೆಯಾದ ನಂದಗೋಪನಿಗೆ ಕಂಸನ ಆದೇಶವನ್ನು ತಿಳಿಸಿದನು. ॥ ೧೦ ॥ ಕಂಸನ ಆಜ್ಞೆಯನ್ನು ಕೇಳುತ್ತಲೇ ನಂದಗೋಪನು ಗೋಪಾಲರಿಗೆ ಅಪ್ಪಣೆ ಮಾಡಿದನು - ಗೋಪಾಲರೇ! ಹಾಲು-ಮೊಸಲು ಮುಂತಾದ ಗೋರಸವನ್ನು ಸಂಗ್ರಹಿಸಿ ಸಿದ್ಧಪಡಿಸಿರಿ. ರಾಜನಿಗೆ ಕೊಡಬೇಕಾದ ಕಪ್ಪ-ಕಾಣಿಕೆಗಳನ್ನು ಎತ್ತಿಕೊಂಡು ಪ್ರಯಾಣಕ್ಕೆ ಎತ್ತಿನ ಗಾಡಿಗಳು ಸಿದ್ಧವಾಗಲಿ. ॥ ೧೧ ॥ ನಾಳೆ ಪ್ರಾತಃಕಾಲವೇ ನಾವು ಮಥುರಾಪಟ್ಟಣಕ್ಕೆ ಪ್ರಯಾಣ ಮಾಡಬೇಕಾಗಿದೆ. ಅಲ್ಲಿಗೆ ಹೋಗಿ ಕಂಸರಾಜನಿಗೆ ಗೋರಸವನ್ನು ಕೊಡುವೆವು. ಅಲ್ಲಿ ಒಂದು ಅದ್ಭುತವಾದ ಉತ್ಸವ ನಡೆಯುವುದು. ಅದನ್ನು ನೋಡಲು ದೇಶದ ಎಲ್ಲ ಪ್ರಜೆಗಳು ಆಗಮಿಸುವರು. ನಾವೂ ಅದನ್ನು ನೋಡುವಾ, ಹೀಗೆ ನಂದಗೋಪನು ತಳವಾರನ ಮೂಲಕವಾಗಿ ನಂದಗೋಕುಲದಲ್ಲೆಲ್ಲಾ ಡಂಗುರ ಸಾರಿದನು. ॥ ೧೨ ॥

ಪರೀಕ್ಷಿತನೇ! ರಾಮ-ಕೃಷ್ಣರನ್ನು ಮಥುರಾ ಪಟ್ಟಣಕ್ಕೆ ಕರೆದೊಯ್ಯಲು ಅಕ್ರೂರನು ವ್ರಜಕ್ಕೆ ಬಂದಿರುವನೆಂದು ಗೋಪಿಯರು ಕೇಳಿದಾಗ ಅವರು ಬಹಳ ದುಃಖಿತರಾಗಿ ವ್ಯಾಕುಲರಾದರು. ॥ ೧೩ ॥ ಭಗವಾನ್ ಶ್ರೀಕೃಷ್ಣನು ಮಥುರೆಗೆ ಹೋಗುವನೆಂಬ ಮಾತನ್ನು ಕೇಳುತ್ತಲೇ ಗೋಪಿಯರು ಪರಿತಾಪದಿಂದ ನಿಟ್ಟುಸಿರು ಬಿಟ್ಟರು. ಎಲ್ಲ ಗೋಪಿಯರ ಮುಖಕಮಲಗಳು ಬಾಡಿದವು. ಉಟ್ಟ ಸೀರೆಗಳು ಜಾರಿಹೋಗುತ್ತಿದ್ದರೂ, ಕೈಕಡಗಗಳು ಕಳಚಿ ಬೀಳುತ್ತಿದ್ದರೂ, ತುರುಬುಗಳು ಬಿಚ್ಚಿಹೋಗುತ್ತಿದ್ದರೂ ತಿಳಿಯದಷ್ಟು ಪರವಶರಾದರು. ॥ ೧೪ ॥ ಭಗವಂತನಲ್ಲೇ ನೆಟ್ಟ ಮನಸ್ಸುಳ್ಳವರಾಗಿ ಅವನ ಶ್ರೀವಿಗ್ರಹವನ್ನು ಧ್ಯಾನಿಸುತ್ತಾ ಕೆಲವು ಗೋಪಿಯರಿಗೆ ಚಿತ್ತವೃತ್ತಿಯೇ ನಿಂತು ಹೋಗಿ ಸಮಾಧಿಸ್ಥರಾದರು. ಆತ್ಮನಲ್ಲೇ ಸ್ಥಿರರಾದ ಅವರಿಗೆ ತಮ್ಮ ಶರೀರದ ಕುರಿತಾಗಲೀ, ಸಂಸಾರದ ಕುರಿತಾಗಲೀ ಎಚ್ಚರವೇ ಇರಲಿಲ್ಲ. ॥ ೧೫ ॥ ಮತ್ತೆ ಕೆಲವು ಗೋಪಿಯರು ಶೌರಿಯ ಮಂದಹಾಸದಿಂದ ಕೂಡಿದ ಅನುರಾಗವನ್ನು ಸ್ಮರಿಸಿಕೊಂಡರು. ಕೆಲವರು ವಿಚಿತ್ರ ಪದಸಮೂಹದಿಂದ ಮನಮುಟ್ಟುವ ಶ್ರೀಕೃಷ್ಣನ ಸುಮಧುರವಾದ ಮಾತುಗಳನ್ನು ಸ್ಮರಿಸಿ ವಿಮೋಹಿತರಾದರು. ॥ ೧೬ ॥ ಗೋಪಿಯರು ಮನಸ್ಸಿನಲ್ಲೇ ಭಗವಂತನ ಮನಮೋಹಕವಾದ ನಡಿಗೆಯನ್ನು, ಭಾವ-ಭಂಗಿಗಳನ್ನು, ಪ್ರೇಮಪೂರ್ಣವಾದ ಕಿರುನಗೆಯನ್ನು, ಕುಡಿನೋಟವನ್ನು, ಸಕಲ ಶೋಕಗಳನ್ನು ಇಲ್ಲವಾಗಿಸುವ ವಿನೋದ ಮಾತುಗಳನ್ನು ಲೀಲೆಗಳನ್ನು ಚಿಂತಿಸುತ್ತಾ ವಿರಹದ ಭಯದಿಂದ ಕಾತರರಾದರು. ಅವರ ಹೃದಯ-ಜೀವನ ಎಲ್ಲವೂ ಭಗವಂತನಲ್ಲಿ ಸಮರ್ಪಿತವಾಗಿತ್ತು. ಅವರ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯತೊಡಗಿತು. ಅವರೆಲ್ಲರೂ ಗುಂಪು-ಗುಂಪಾಗಿ ಒಟ್ಟಿಗೆ ಸೇರಿ ಹೀಗೆ ಮಾತನಾಡಿಕೊಂಡರು. ॥ ೧೭-೧೮ ॥

*ಗೋಪ್ಯ ಊಚುಃ*

**ಅಹೋ ವಿಧಾತಸ್ತವ ನ ಕ್ವಚಿದ್ದಯಾ**
**ಸಂಯೋಜ್ಯ ಮೈತ್ರ್ಯಾ ಪ್ರಣಯೇನ ದೇಹಿನಃ ।**
**ತಾಂಶ್ಚಾಕೃತಾರ್ಥಾನ್ ವಿಯುನಂಕ್ಷ್ಯಪಾರ್ಥಕಂ**
**ವಿಕ್ರೀಡಿತಂ ತೇಽರ್ಭಕಚೇಷ್ಟಿತಂ ಯಥಾ ॥ ೧೯ ॥**

**ಗೋಪಿಯರು ಹೇಳುತ್ತಾರೆ** – ಓ ಬ್ರಹ್ಮದೇವನೇ! ನಿನ್ನ ಹೃದಯದಲ್ಲಿ ದಯೆಯೆಂಬುದು ಲೇಶಮಾತ್ರವೂ ಇಲ್ಲವಲ್ಲ! ಮೊದಲು ನೀನು ಸೌಹಾರ್ದದಿಂದಲೂ, ಪ್ರೇಮದಿಂದಲೂ ಪ್ರಪಂಚದಲ್ಲಿರುವ ಪ್ರಾಣಿಗಳನ್ನು ಪರಸ್ಪರವಾಗಿ ಸೇರಿಸುವೆ, ಆದರೆ ಅವರ ಆಶಯವು ಪೂರ್ಣವಾಗುವುದರೊಳಗಾಗಿಯೇ ಅವರು ಪೂರ್ಣತೃಪ್ತಿಯನ್ನು ಹೊಂದುವ ಮೊದಲೇ, ಅವರನ್ನು ಬೇರ್ಪಡಿಸುವೆ. ನಿಶ್ಚಯವಾಗಿಯೂ ಈ ನಿನ್ನ ಕಾರ್ಯವು ಮಕ್ಕಳ ಆಟಿಕೆಯಂತೆ ವ್ಯರ್ಥವಾದುದೇ ಸರಿ. ॥ ೧೯ ॥ ಓ ವಿಧಾತನೇ! ಇದೆಂತಹ ದುಃಖದ ವಿಷಯವಾಗಿದೆ ನೋಡು ! ಮೊದಲು ನೀನು ಪ್ರೇಮವನ್ನು ಉಮ್ಮಡಿಸುವ ಶ್ಯಾಮಸುಂದರನ ದಿವ್ಯವಾದ ಮುಖಕಮಲವನ್ನು ನಮಗೆ ತೋರಿಸಿಕೊಟ್ಟೆ. ಅದೆಷ್ಟು ಚೆಲುವಿನ ಮುಖಕಮಲ ! ಕಪ್ಪಾದ ಮುಂಗುರುಳಿನಿಂದ ಅಲಂಕೃತವಾಗಿದೆ. ಸುಂದರವಾದ ಕಪೋಲಗಳಿಂದಲೂ, ನೀಳವಾದ ಮೂಗಿನಿಂದಲೂ ಕೂಡಿ ಬೆಳಗುತ್ತಿರುವುದು. ದುಃಖವನ್ನು ಕಳೆದು ಆನಂದವನ್ನುಂಟು ಮಾಡುವ ಚೇತೋಹಾರಿಯಾದ ಕಿರುನಗೆಯಿಂದ ಶೋಭಿಸುತ್ತಿರುವುದು. ಅಂತಹ ಕಡುಚೆಲುವಿನ ಮುಖಕಮಲವನ್ನು ನಮಗೆ ತೋರಿಸಿ ಈಗ ಅದನ್ನು ನಮ್ಮಿಂದ ಮರೆಮಾಡಲು ಹವಣಿಸುತ್ತಿರುವೆ. ಹೀಗೆ ಮಾಡುವುದು ಖಂಡಿತವಾಗಿಯೂ ನಿನಗೆ ಯೋಗ್ಯವೆನಿಸುವುದಿಲ್ಲ. ॥ ೨೦ ॥ ವಿಧಾತನೇ! ಅತ್ಯಂತ ಕ್ರೂರಿಯಾದ ನೀನು 'ಅಕ್ರೂರ'ನೆಂಬ ಹೆಸರಿನಿಂದ ಕರೆಯಲ್ಪಡುತ್ತಾ ನಮ್ಮ ಕಣ್ಣಾಲಿಯನ್ನು ಮೂಢನಂತೆ ಅಪಹರಿಸುತ್ತಿರುವೆಯಲ್ಲ! ಮಧುಹಂತಕನಾದ ಶ್ರೀಕೃಷ್ಣನ ಒಂದೊಂದು ಅವಯವಗಳಲ್ಲಿಯೂ ನಿನ್ನ ಸೃಷ್ಟಿಯ ಚಾತುರ್ಯವನ್ನು ಯಾವ ಕಣ್ಣುಗಳಿಂದ ಕಂಡು ನಾವು ಬೆರಗಾಗಿ ನಿನ್ನನ್ನು ಕೊಂಡಾಡುತ್ತಿದ್ದೆವೋ ಅಂತಹ ನಮ್ಮ ಕಣ್ಣುಗಳನ್ನೇ ನೀನು ಅಪಹರಿಸುತ್ತಿರುವೆ. ನಮ್ಮ ಕಣ್ಮಣಿಯನ್ನು ಕಾಣದ ನಾವು ಕಣ್ಣಿಲ್ಲದ ಕುರುಡರಂತೆಯೇ ಸರಿ ॥ ೨೧ ॥

**ಯಸ್ತ್ವಂ ಪ್ರದರ್ಶ್ಯಾಸಿತಕುಂತಲಾವೃತಂ**
**ಮುಕುಂದವಕ್ತ್ರಂ ಸುಕಪೋಲಮುನ್ನಸಮ್ ।**
**ಶೋಕಾಪನೋದಸ್ಮಿತಲೇಶಸುಂದರಂ**
**ಕರೋಷಿ ಪಾರೋಕ್ಷ್ಯಮಸಾಧು ತೇ ಕೃತಮ್ ॥ ೨೦ ॥**

**ಕ್ರೂರಸ್ತ್ವಮಕ್ರೂರಸಮಾಖ್ಯಯಾ ಸ್ಮ ನ-**
**ಶ್ಚಕ್ಷುರ್ಹಿ ದತ್ತಂ ಹರಸೇ ಬತಾಜ್ಞವತ್ ।**
**ಯೇನೈಕದೇಶೇಽಖಿಲಸರ್ಗಸೌಷ್ಠವಂ**
**ತ್ವದೀಯಮದ್ರಾಕ್ಷ್ಮ ವಯಂ ಮಧುದ್ವಿಷಃ ॥ ೨೧ ॥**

ಅಯ್ಯೋ! ನಂದನಂದನ ಶ್ಯಾಮಸುಂದರನು ಹೊಸ-ಹೊಸ ಜನರಲ್ಲಿ ಸ್ನೇಹ ಮಾಡಲು ಆಶಿಸಿದ್ದಾನೆ. ಇವನ ಸ್ನೇಹವೆಂಬುದು ಕ್ಷಣಭಂಗುರವಾದುದು. ಅವನ ಕಿರುನಗೆ, ಸವಿಮಾತು, ಕುಡಿನೋಟ ಇವುಗಳಿಂದ ಆಕರ್ಷಿತರಾದ ನಾವು ಮನೆ-ಮಠಗಳನ್ನು, ಮಾತಾ-ಪಿತೃಗಳನ್ನು, ಪತಿ-ಸುತರನ್ನು, ಅಣ್ಣ-ತಮ್ಮಂದಿರನ್ನು ತೊರೆದು ಇವನಿಗೆ ದಾಸಿಯರಾದೆವು. ಇವನಿಗಾಗಿಯೇ ಇಂದು ನಮ್ಮ ಹೃದಯ ಶೋಕಾತುರವಾಗುತ್ತಿದೆ. ಆದರೆ ಇವನು ನಮ್ಮ ಕಡೆಗೆ ನೋಡುವುದೇ ಇಲ್ಲವಲ್ಲ! ॥ ೨೨ ॥ ಇಂದಿನ ರಾತ್ರಿಯು ಕಳೆದು ಆಗುವ ಸುಪ್ರಭಾತವು ಮಥುರೆಯ ಸ್ತ್ರೀಯರಿಗೆ ಮಂಗಳದಾಯಕವಾಗುತ್ತದೆ. ಅವರ ಅನೇಕ ದಿನಗಳ ಅಭಿಲಾಷೆಯು ನಿಶ್ಚಯವಾಗಿ ಪೂರ್ಣಗೊಳ್ಳುವುದು. ನಮ್ಮ ವ್ರಜರಾಜನಾದ ಶ್ಯಾಮಸುಂದರ ಓರೆನೋಟವನ್ನು ಬೀರುತ್ತಾ, ಮಂದ-ಮಂದವಾದ ಮುಗುಳ್ನಗೆಯಿಂದ ಕೂಡಿದ ಮುಖಾರವಿಂದದ ಮಾದಕತೆಯನ್ನು ಚೆಲ್ಲುತ್ತಾ ಮಥುರೆಯನ್ನು ಪ್ರವೇಶಿಸಿದಾಗ ಅವರು ಅದನ್ನು ಸವಿಯುತ್ತಾ ಧನ್ಯರಾಗಿ ಹೋಗುವರು. ॥ ೨೩ ॥

**ನ ನಂದಸೂನುಃ ಕ್ಷಣಭಂಗಸೌಹೃದಃ**
**ಸಮೀಕ್ಷತೇ ನಃ ಸ್ವಕೃತಾತುರಾ ಬತ ।**
**ವಿಹಾಯ ಗೇಹಾನ್ ಸ್ವಜನಾನ್ ಸುತಾನ್ ಪತೀಂ-**
**ಸ್ತದ್ದಾಸ್ಯಮದ್ಧೋಪಗತಾ ನವಪ್ರಿಯಃ ॥ ೨೨ ॥**

**ಸುಖಂ ಪ್ರಭಾತಾ ರಜನೀಯಮಾಶಿಷಃ**
**ಸತ್ಯಾ ಬಭೂವುಃ ಪುರಯೋಷಿತಾಂ ಧ್ರುವಮ್ ।**
**ಯಾಃ ಸಂಪ್ರವಿಷ್ಟಸ್ಯ ಮುಖಂ ವ್ರಜಸ್ಪತೇಃ**
**ಪಾಸ್ಯಂತ್ಯಪಾಂಗೋತ್ಕಲಿತಸ್ಮಿತಾಸವಮ್ ॥ ೨೩ ॥**

ತಾಸಾಂ ಮುಕುಂದೋ ಮಧುಮಂಜುಭಾಷಿತೈ-
ರ್ಗೃಹೀತಚಿತ್ತಃ ಪರವಾನ್ ಮನಸ್ವ್ಯಪಿ ।
ಕಥಂ ಪುನರ್ನಃ ಪ್ರತಿಯಾಸ್ಯತೇಽಬಲಾ
ಗ್ರಾಮ್ಯಾಃ ಸಲಜ್ಜಸ್ಮಿತವಿಭ್ರಮೈರ್ಭ್ರಮನ್ ॥ ೨೪ ॥

ನಮ್ಮ ಶ್ಯಾಮಸುಂದರನು ಧೈರ್ಯಶಾಲಿಯಾಗಿದ್ದರೂ ಜೊತೆಗೆ ನಂದಗೋಪನೇ ಮೊದಲಾದ ಹಿರಿಯರ ಆಜ್ಞಾನುಸಾರವೇ ಇರುತ್ತಾನೆ. ಆದರೂ ಮಥುರೆಯ ಯುವತಿಯರು ತಮ್ಮ ಮಧುವಿನಂತಿರುವ ಮಾತುಗಳಿಂದ ಇವನ ಚಿತ್ತವನ್ನು ತಮ್ಮತ್ತ ಸೆಳೆದುಕೊಳ್ಳುವರು. ಇವನು ಅವರ ನಾಚಿಕೆಯಿಂದ ಕೂಡಿ ಕಿರುನಗೆ ಹಾಗೂ ವಿಲಾಸಪೂರ್ಣವಾದ ಭಾವಭಂಗಿಗೆ ಮನಸೋತು ಅಲ್ಲೇ ಇರುವನು. ಮತ್ತೆ ಹಳ್ಳಿಗಾಡಿನ ಗೊಲ್ಲತಿಯರ ಬಳಿಗೆ ಇವನು ಮರಳಿ ಹೇಗೆ ತಾನೆ ಬರುವನು ? ॥ ೨೪ ॥ ನಿಶ್ಚಯವಾಗಿಯೂ ಇಂದು ಮಥುರಾಪಟ್ಟಣದಲ್ಲಿ ಶ್ಯಾಮಸುಂದರನನ್ನು ಸಂದರ್ಶಿಸಲಿರುವ ದಾಶಾರ್ಹ, ಭೋಜ, ಅಂಧಕ, ವೃಷ್ಣಿ, ಸಾತ್ವತ ವಂಶೀಯರಿಗೆ ನೇತ್ರಾನಂದೋತ್ಸವವೇ ಆಗುತ್ತದೆ. ಜೊತೆಗೆ ಮಾರ್ಗದಲ್ಲಿ ರಮಾರಮಣನಾದ, ಗುಣಸಾಗರನಾದ, ದೇವಕಿಯ ಮಗನಾದ ನಮ್ಮ ಪ್ರಿಯತಮನನ್ನು ನೋಡುವ ದಾರಿಹೋಕರ ಕಣ್ಣುಗಳಿಗೂ ದೊಡ್ಡ ಹಬ್ಬವೇ ಆಗುತ್ತದೆ. ॥ ೨೫ ॥

ಅದ್ಯ ಧ್ರುವಂ ತತ್ರ ದೃಶೋ ಭವಿಷ್ಯತೇ
ದಾಶಾರ್ಹಭೋಜಾಂಧಕವೃಷ್ಣಿಸಾತ್ವತಾಮ್ ।
ಮಹೋತ್ಸವಃ ಶ್ರೀರಮಣಂ ಗುಣಾಸ್ಪದಂ
ದ್ರಕ್ಷ್ಯಂತಿ ಯೇ ಚಾಧ್ವನಿ ದೇವಕೀಸುತಮ್ ॥ ೨೫ ॥

ನೋಡಿ ಸಖಿಯರೇ ! ಈ ಅಕ್ರೂರನಾದರೋ ತನ್ನ ಹೆಸರಿಗೆ ವಿರುದ್ಧವಾಗಿ ಅತಿಕ್ರೂರನಾಗಿದ್ದಾನೆ. ಶ್ರೀಕೃಷ್ಣನ ವಿರಹದಿಂದ ಅತಿಯಾಗಿ ದುಃಖಿಸುತ್ತಿರುವ ನಮ್ಮನ್ನು ಸಿಹಿಮಾತುಗಳಿಂದ ಸಂತೈಸುತ್ತಲೂ ಇಲ್ಲ. ನಮಗೆ ಅತ್ಯಂತ ಪ್ರಿಯವಾದ ಏಕಮಾತ್ರ ಸ್ವಾಮಿಯಾದ ಶ್ರೀಕೃಷ್ಣನನ್ನು ದೂರ ಕರೆದುಕೊಂಡು ಹೋಗುತ್ತಿದ್ದಾನೆ. ಛೀ ! ಇಂತಹ ಕ್ರೂರಿಗೆ ಅಕ್ರೂರನೆಂಬ ಹೆಸರು ಖಂಡಿತವಾಗಿಯೂ ಇರಬಾರದು. ॥ ೨೬ ॥ ಸಖೀ ! ನಮ್ಮ ಈ ಶ್ಯಾಮಸುಂದರನೂ ಕಡಿಮೆ ನಿಷ್ಠುರನಲ್ಲ, ನೋಡು, ನೋಡು ! ಅವನು ರಥದಲ್ಲಿ ಕುಳಿತುಕೊಂಡನು. ಉತ್ಸಾಹಿಗಳಾದ ಗೋಪಾಲಕರೂ ಎತ್ತಿನ ಬಂಡಿಗಳಲ್ಲಿ ಅವನೊಂದಿಗೆ ಹೋಗಲು ಎಷ್ಟು ಅವಸರಪಡಿಸುತ್ತಿದ್ದಾರೆ. ನಿಜವಾಗಿ ಇವರು ಮೂರ್ಖರೇ ಆಗಿದ್ದಾರೆ. ಇನ್ನು ನಮ್ಮ ಹಿರಿಯ-ವೃದ್ಧರೂ ಇವರ ಅವಸರವನ್ನು ನೋಡಿ - 'ಹೋಗಿ ಮನಸ್ಸಿಗೆ ಬಂದ ಹಾಗೆ ಮಾಡಿರಿ' ಎಂದು ಉಪೇಕ್ಷಿಸಿ ಬಿಟ್ಟಿದ್ದಾರೆ. ಈಗ ನಾವೇನು ಮಾಡಬಹುದು ? ಇಂದು ವಿಧಿಯು ಪೂರ್ಣವಾಗಿ ನಮಗೆ ಪ್ರತಿಕೂಲವಾಗಿದೆ. ॥ ೨೭ ॥ ಸಖಿಯರೇ ! ನಾವೆಲ್ಲರೂ ಮುಂದೆ ಹೋಗಿ ನಮ್ಮ ಪ್ರಾಣಪ್ರಿಯನಾದ ಶ್ಯಾಮಸುಂದರನನ್ನು ತಡೆದು ಬಿಡುವಾ. ಕುಲದ ವೃದ್ಧರಾಗಲೀ, ನೆಂಟರಿಷ್ಟರಾಗಲೀ ನಮಗೇನು ಮಾಡಬಲ್ಲರು ? ನಮಗಂತೂ ಅರ್ಧನಿಮಿಷವಾದರೂ ಮುಕುಂದನನ್ನು ಬಿಟ್ಟಿರಲು ಸಾಧ್ಯವೇ ಇಲ್ಲ. ದೈವವಾದರೋ ನಮ್ಮ ಪ್ರಿಯತಮನೊಡನೆ ವಿರಹವನ್ನು ಕಲ್ಪಿಸಿ ಬಡಪಾಯಿಗಳಾದ ನಮ್ಮ ಬುದ್ಧಿಯನ್ನು ಹಾಳು ಮಾಡಿಬಿಟ್ಟಿದೆ. ॥ ೨೮ ॥ ಗೆಳತಿಯರೇ ! ನಾವು ನಮ್ಮ ಪ್ರಾಣ ಪ್ರಿಯನಾದ ಶ್ರೀಕೃಷ್ಣನ ಪ್ರೇಮಪೂರ್ಣವಾದ ಮತ್ತು ಚೇತೋಹಾರಿಯಾದ ಕಿರುನಗೆ, ರಹಸ್ಯದಲ್ಲಿ ಅವನಾಡುತ್ತಿದ್ದ ಪ್ರೇಮಾಲಾಪಗಳು, ವಿಲಾಸಪೂರ್ಣ ಕಡೆಗಣ್ಣು ನೋಟ, ಪ್ರೇಮಾಲಿಂಗನ ಇತ್ಯಾದಿಗಳಿಂದ ರಾಸಕ್ರೀಡೆಯಲ್ಲಿ ಸುದೀರ್ಘವಾದ ರಾತ್ರಿಯನ್ನು ಕ್ಷಣದಂತೆ ಕಳೆಯುತ್ತಿದ್ದೆವು. ಆದರೆ ಈಗ ಅವನಿಲ್ಲದ ದುರಂತರೂಪವಾದ ವಿರಹವೆಂಬ ಅಂಧಕಾರವನ್ನು ಹೇಗೆ ತಾನೇ ದಾಟಿಹೋಗುವುದು ? ॥ ೨೯ ॥

ಮೈತದ್ವಿಧಸ್ಯಾಕರುಣಸ್ಯ ನಾಮ ಭೂ-
ದಕ್ರೂರ ಇತ್ಯೇತದತೀವ ದಾರುಣಃ ।
ಯೋಽಸಾವನಾಶ್ವಾಸ್ಯ ಸುದುಃಖಿತಂ ಜನಂ
ಪ್ರಿಯಾತ್ಪ್ರಿಯಂ ನೇಷ್ಯತಿ ಪಾರಮಧ್ವನಃ ॥ ೨೬ ॥

ಅನಾರ್ದ್ರಧೀರೇಷ ಸಮಾಸ್ಥಿತೋ ರಥಂ
ತಮನ್ವಮೀ ಚ ತ್ವರಯಂತಿ ದುರ್ಮದಾಃ ।
ಗೋಪಾ ಅನೋಭಿಃ ಸ್ಥವಿರೈರುಪೇಕ್ಷಿತಂ
ದೈವಂ ಚ ನೋಽದ್ಯ ಪ್ರತಿಕೂಲಮೀಹತೇ ॥ ೨೭ ॥

ನಿವಾರಯಾಮಃ ಸಮುಪೇತ್ಯ ಮಾಧವಂ
ಕಿಂ ನೋಽಕರಿಷ್ಯನ್ ಕುಲವೃದ್ಧಬಾಂಧವಾಃ ।
ಮುಕುಂದಸಂಗಾನ್ನಿಮಿಷಾರ್ಧದುಸ್ತ್ಯಜಾದ್
ದೈವೇನ ವಿಧ್ವಂಸಿತದೀನಚೇತಸಾಮ್ ॥ ೨೮ ॥

ಯಸ್ಯಾನುರಾಗಲಲಿತಸ್ಮಿತವಲ್ಗುಮಂತ್ರ-
ಲೀಲಾವಲೋಕಪರಿರಂಭಣರಾಸಗೋಷ್ಠ್ಯಾಮ್ ।
ನೀತಾಃ ಸ್ಮ ನಃ ಕ್ಷಣಮಿವ ಕ್ಷಣದಾ ವಿನಾ ತಂ
ಗೋಪ್ಯಃ ಕಥಂ ನ್ವತಿತರೇಮ ತಮೋ ದುರಂತಮ್ ॥ ೨೯ ॥

ಯೋಽಹ್ನಃ ಕ್ಷಯೇ ವ್ರಜಮನಂತಸಖಃ ಪರೀತೋ
ಗೋಪೈರ್ವಿಶನ್ ಖುರರಜಶ್ಛುರಿತಾಲಕಸ್ರಕ್ ।
ವೇಣುಂ ಕ್ವಣನ್ ಸ್ಮಿತಕಟಾಕ್ಷನಿರೀಕ್ಷಣೇನ
ಚಿತ್ತಂ ಕ್ಷಿಣೋತ್ಯಮುಮೃತೇ ನು ಕಥಂ ಭವೇಮ ॥ ೩೦ ॥

ನಮ್ಮ ಪ್ರಿಯತಮನು ಅನುದಿನವೂ ಸಾಯಂಕಾಲವಾಗುತ್ತಲೇ ಬಲರಾಮನೊಡನೆ ಗೋಪಾಲಕರಿಂದ ಪರಿವೃತನಾಗಿ ಬರುತ್ತಿರುವಾಗ ಅವನ ಕಪ್ಪಾದ ಗುಂಗುರು ಕೂದಲು, ವನಮಾಲೆಯು ಹಸುಗಳ ಗೊರಸುಗಳಿಂದ ಎದ್ದ ಧೂಳಿನಿಂದ ಮುಚ್ಚಿಹೋಗುತ್ತಿತ್ತು. ಅವನು ಕೊಳಲನ್ನೂದುತ್ತಾ, ಮುಗುಳ್ನಗೆಯಿಂದಲೂ, ಕಡೆಗಣ್ಣ ನೋಟದಿಂದಲೂ ನಮ್ಮ ಮನಸ್ಸನ್ನೂ ಸೂರೆ ಮಾಡುತ್ತಿದ್ದನು. ಅಂತಹವನನ್ನು ಬಿಟ್ಟು ನಾವು ಬದುಕಿರುವುದಾದರೂ ಹೇಗೆ ? ॥ ೩೦ ॥

ಶ್ರೀಶುಕ ಉವಾಚ

ಏವಂ ಬ್ರುವಾಣಾ ವಿರಹಾತುರಾ ಭೃಶಂ
ವ್ರಜಸ್ತ್ರಿಯಃ ಕೃಷ್ಣವಿಷಕ್ತಮಾನಸಾಃ ।
ವಿಸೃಜ್ಯ ಲಜ್ಜಾಂ ರುರುದುಃ ಸ್ಮ ಸುಸ್ವರಂ
ಗೋವಿಂದ ದಾಮೋದರ ಮಾಧವೇತಿ ॥ ೩೧ ॥

ಸ್ತ್ರೀಣಾಮೇವಂ ರುದಂತೀನಾಮುದಿತೇ ಸವಿತರ್ಯಥ ।
ಅಕ್ರೂರಶ್ಚೋದಯಾಮಾಸ ಕೃತಮೈತ್ರಾದಿಕೋ ರಥಮ್ ॥ ೩೨ ॥

ಗೋಪಾಸ್ತಮನ್ವಸಜ್ಜಂತ ನಂದಾದ್ಯಾಃ ಶಕಟೈಸ್ತತಃ ।
ಆದಾಯೋಪಾಯನಂ ಭೂರಿ ಕುಂಭಾನ್ ಗೋರಸಸಂಭೃತಾನ್ ॥ ೩೩ ॥

ಗೋಪ್ಯಶ್ಚ ದಯಿತಂ ಕೃಷ್ಣಮನುವ್ರಜ್ಯಾನುರಂಜಿತಾಃ ।
ಪ್ರತ್ಯಾದೇಶಂ ಭಗವತಃ ಕಾಂಕ್ಷಂತ್ಯಶ್ಚಾವತಸ್ಥಿರೇ ॥ ೩೪ ॥

ತಾಸ್ತಥಾ ತಪ್ಯತೀರ್ವೀಕ್ಷ್ಯ ಸ್ವಪ್ರಸ್ಥಾನೇ ಯದೂತ್ತಮಃ ।
ಸಾಂತ್ವಯಾಮಾಸ ಸಪ್ರೇಮೈರಾಯಾಸ್ಯ ಇತಿ ದೌತ್ಯಕೈಃ ॥ ೩೫ ॥

ಯಾವದಾಲಕ್ಷ್ಯತೇ ಕೇತುರ್ಯಾವದ್ರೇಣೂ ರಥಸ್ಯ ಚ ।
ಅನುಪ್ರಸ್ಥಾಪಿತಾತ್ಮಾನೋ ಲೇಖ್ಯಾನೀವೋಪಲಕ್ಷಿತಾಃ ॥ ೩೬ ॥

ತಾ ನಿರಾಶಾ ನಿವವೃತುರ್ಗೋವಿಂದವಿನಿವರ್ತನೇ ।
ವಿಶೋಕಾ ಅಹನೀ ನಿನ್ಯುರ್ಗಾಯಂತ್ಯಃ ಪ್ರಿಯಚೇಷ್ಟಿತಮ್ ॥ ೩೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ವಿರಹಪೀಡಿತರಾಗಿ ಗೋಪಿಕೆಯರು ಬಾಯಿಂದ ಹೀಗೆ ಹೇಳುತ್ತಿದ್ದರೂ ಅವರ ಮನಸ್ಸುಗಳೆಲ್ಲವೂ ಪ್ರಿಯತಮನಾದ ಶ್ರೀಕೃಷ್ಣನ ಅಂಗಸ್ಪರ್ಶ, ಆಲಿಂಗನದಲ್ಲಿಯೇ ಲೀನವಾಗಿ ಬಿಟ್ಟಿತ್ತು. ಅವರೆಲ್ಲರೂ ಲಜ್ಜೆಯನ್ನು ಪರಿತ್ಯಜಿಸಿ 'ಗೋವಿಂದ! ದಾಮೋದರ! ಮಾಧವ! ನಮ್ಮನ್ನು ಬಿಟ್ಟು ಹೋಗಬೇಡ. ನೀನಿಲ್ಲದೆ ನಾವು ಬದುಕಿರಲಾರೆವು ಎಂದು ಹೇಳುತ್ತಾ ಗಟ್ಟಿಯಾಗಿ ಸುಸ್ವರವಾಗಿ ಅಳತೊಡಗಿದರು. ॥ ೩೧ ॥ ಗೋಪಿಯರು ಹೀಗೆ ಅಳುತ್ತಾ ಇದ್ದರು. ಅಳುತ್ತಾ-ಅಳುತ್ತಾ ಬೆಳಕು ಹರಿಯಿತು. ಅಕ್ರೂರನು ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ಪೂರೈಸಿ ಬಲರಾಮ-ಶ್ರೀಕೃಷ್ಣರೊಂದಿಗೆ ರಥವನ್ನು ಹತ್ತಿದನು ಹಾಗೂ ಅದನ್ನು ಮುನ್ನಡೆಸಿದನು. ॥ ೩೨ ॥ ನಂದಗೋಪನೇ ಮೊದಲಾದ ಗೋಪರು ಹಾಲು, ಮೊಸರು, ತುಪ್ಪ ಬೆಣ್ಣೆ ಮುಂತಾದವುಗಳು ತುಂಬಿದ ಗಡಿಗೆಗಳನ್ನು ಹಾಗೂ ಕಾಣಿಕೆಯಾಗಿ ಕೊಡಲು ಇತರ ವಸ್ತುಗಳನ್ನು ಎತ್ತಿಕೊಂಡು ಎತ್ತಿನ ಗಾಡಿಗಳಲ್ಲಿ ಕುಳಿತುಕೊಂಡು ಅವರ ಹಿಂದೆ-ಹಿಂದೆಯೇ ಹೊರಟರು. ॥ ೩೩ ॥ ಪ್ರಿಯತಮನಾದ ಶ್ರೀಕೃಷ್ಣನ ರಥವನ್ನೇ ಅನುಸರಿಸಿ ಹೋಗುತ್ತಿದ್ದ ಗೋಪಿಯರು ಶ್ರೀಕೃಷ್ಣನ ಮುಗುಳ್ನಗೆ, ಕುಡಿನೋಟ, ಇವುಗಳಿಂದ, ಪ್ರೇಮಪೂರ್ಣವಾದ ಭಾವ-ಭಂಗಿಗಳಿಂದ ಸಂತೋಷಗೊಂಡಿದ್ದರೂ ಭಗವಂತನ ಆದೇಶವನ್ನು ಪಡೆಯುವ ಇಚ್ಛೆಯಿಂದ ಅಲ್ಲೆ ನಿಂತಿಬಿಟ್ಟರು. ॥ ೩೪ ॥ ನಾನು ಮಥುರೆಗೆ ಹೋಗುವುದರಿಂದ ಈ ಗೋಪಿಯರ ಹೃದಯದಲ್ಲಿ ವಿರಹವೇದನೆ ಉಂಟಾಗಿದೆ ಎಂದು ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನು ನೋಡಿದನು. ಆಗ ದೂತನ ಮೂಲಕ - 'ನಾನು ಪುನಃ ಬರುತ್ತೇನೆ. ನಿಮ್ಮನ್ನು ಬಿಟ್ಟುಹೋಗುವುದಿಲ್ಲ' ಎಂಬ ಪ್ರೇಮಸಂದೇಶವನ್ನು ಕಳಿಸಿ ಧೈರ್ಯತುಂಬಿದನು. ॥ ೩೫ ॥ ರಥದ ಧ್ವಜ ಮತ್ತು ಗಾಲಿಗಳಿಂದೆದ್ದ ಧೂಳು ಕಾಣಿಸುವವರೆಗೆ ಆ ಗೋಪಿಯರು ಚಿತ್ತಾರದಂತೆ ಸ್ತಬ್ಧರಾಗಿ ನಿಂತಿದ್ದರು. ಆದರೆ ಅವರ ಚಿತ್ತವು ಪ್ರಾಣವಲ್ಲಭನಾದ ಶ್ರೀಕೃಷ್ಣನೊಂದಿಗೇ ಹೊರಟುಹೋಗಿತ್ತು. ॥ ೩೬ ॥ ಬಹುಶಃ ಶ್ರೀಕೃಷ್ಣನು ಸ್ವಲ್ಪದೂರ ಹೋಗಿ ಮರಳಿಬರುವನೆಂಬ ಆಸೆ ಅವರ ಮನಸ್ಸಿನಲ್ಲಿತ್ತು. ಆದರೆ ಅವನು ಹಿಂದಿರುಗಿ ಬಾರದಿದ್ದಾಗ ಅವರು ನಿರಾಶರಾಗಿ ತಮ್ಮ-ತಮ್ಮ ಮನೆಗಳಿಗೆ ಹಿಂದಿರುಗಿದರು. ಪರೀಕ್ಷಿತನೇ! ಗೋಪಿಯರು ಹಗಲು-ರಾತ್ರಿಗಳೆನ್ನದೆ ತಮ್ಮ ಪ್ರಿಯಕರ ಶ್ಯಾಮಸುಂದರನ ಲೀಲೆಗಳನ್ನು ಹಾಡಿಕೊಳ್ಳುತ್ತಾ ತಮ್ಮ ವಿರಹತಾಪವನ್ನು ತಗ್ಗಿಸಿಕೊಳ್ಳುತ್ತಿದ್ದರು. ॥ ೩೭ ॥

ಭಗವಾನಪಿ ಸಂಪ್ರಾಪ್ತೋ ರಾಮಾಕ್ರೂರಯುತೋ ನೃಪ ।
ರಥೇನ ವಾಯುವೇಗೇನ ಕಾಲಿಂದೀಮಘನಾಶಿನೀಮ್
॥ ೩೮ ॥

ತತ್ರೋಪಸ್ಪೃಶ್ಯ ಪಾನೀಯಂ ಪೀತ್ವಾಮೃಷ್ಟಂ ಮಣಿಪ್ರಭಮ್ ।
ವೃಕ್ಷಷಂಡಮುಪವ್ರಜ್ಯ ಸರಾಮೋ ರಥಮಾವಿಶತ್
॥ ೩೯ ॥

ಅಕ್ರೂರಸ್ತಾವುಪಾಮಂತ್ರ್ಯ ನಿವೇಶ್ಯ ಚ ರಥೋಪರಿ ।
ಕಾಲಿಂದ್ಯಾ ಹ್ರದಮಾಗತ್ಯ ಸ್ನಾನಂ ವಿಧಿವದಾಚರತ್
॥ ೪೦ ॥

ನಿಮಜ್ಜ್ಯ ತಸ್ಮಿನ್ ಸಲಿಲೇ ಜಪನ್ ಬ್ರಹ್ಮ ಸನಾತನಮ್ ।
ತಾವೇವ ದದೃಶೇಽಕ್ರೂರೋ ರಾಮಕೃಷ್ಣೌ ಸಮನ್ವಿತೌ
॥ ೪೧ ॥

ತೌ ರಥಸ್ಥೌ ಕಥಮಿಹ ಸುತಾವಾನಕದುಂದುಭೇಃ ।
ತರ್ಹಿ ಸ್ವಿತ್ ಸ್ಯಂದನೇ ನ ಸ್ತ ಇತ್ಯುನ್ಮಜ್ಜ್ಯ ವ್ಯಚಷ್ಟ ಸಃ
॥ ೪೨ ॥

ತತ್ರಾಪಿ ಚ ಯಥಾಪೂರ್ವಮಾಸೀನೌ ಪುನರೇವ ಸಃ ।
ನ್ಯಮಜ್ಜದ್ದರ್ಶನಂ ಯನ್ಮೇ ಮೃಷಾ ಕಿಂ ಸಲಿಲೇ ತಯೋಃ
॥ ೪೩ ॥

ಭೂಯಸ್ತತ್ರಾಪಿ ಸೋಽದ್ರಾಕ್ಷೀತ್ ಸ್ತೂಯಮಾನಮಹೀಶ್ವರಮ್ ।
ಸಿದ್ಧಚಾರಣಗಂಧರ್ವೈರಸುರೈರ್ನತಕಂಧರೈಃ
॥ ೪೪ ॥

ಸಹಸ್ರಶಿರಸಂ ದೇವಂ ಸಹಸ್ರಫಣಮೌಲಿನಮ್ ।
ನೀಲಾಂಬರಂ ಬಿಸಶ್ವೇತಂ ಶೃಂಗೈಃ ಶ್ವೇತಮಿವ ಸ್ಥಿತಮ್
॥ ೪೫ ॥

ತಸ್ಯೋತ್ಸಂಗೇ ಘನಶ್ಯಾಮಂ ಪೀತಕೌಶೇಯವಾಸಸಮ್ ।
ಪುರುಷಂ ಚತುರ್ಭುಜಂ ಶಾಂತಂ ಪದ್ಮಪತ್ರಾರುಣೇಕ್ಷಣಮ್
॥ ೪೬ ॥

ಚಾರುಪ್ರಸನ್ನವದನಂ ಚಾರುಹಾಸನಿರೀಕ್ಷಣಮ್ ।
ಸುಭ್ರೂನ್ನಸಂ ಚಾರುಕರ್ಣಂ ಸುಕಪೋಲಾರುಣಾಧರಮ್
॥ ೪೭ ॥

ಪರೀಕ್ಷಿತನೇ ! ಇತ್ತ ಭಗವಾನ್ ಶ್ರೀಕೃಷ್ಣನು ಬಲರಾಮ ಮತ್ತು ಅಕ್ರೂರನೊಂದಿಗೆ ವಾಯುವೇಗಕ್ಕೆ ಸಮಾನವಾದ ರಥದಲ್ಲಿ ಕುಳಿತು ಪಾಪನಾಶಿನಿಯಾದ ಯಮುನಾನದಿಯ ತೀರವನ್ನು ತಲುಪಿದನು. ॥ ೩೮ ॥ ಅಲ್ಲಿ ಅವರು ಕೈ-ಕಾಲು-ಮುಖ ತೊಳೆದು ಮರಕತ ಮಣಿಯಂತಿರುವ ಹಾಗೂ ಅಮೃತದಂತೆ ಸಿಹಿಯಾದ ಯಮುನೆಯ ನೀರನ್ನು ಕುಡಿದರು. ಅನಂತರ ಬಲರಾಮನೊಂದಿಗೆ ಶ್ರೀಕೃಷ್ಣನು ವೃಕ್ಷಗಳ ನೆರಳಲ್ಲಿ ನಿಲ್ಲಿಸಿದ್ದ ರಥವನ್ನು ಏರಿದನು. ॥ ೩೯ ॥ ಅಕ್ರೂರನು ಸಹೋದರರಿಬ್ಬರನ್ನೂ ರಥದಲ್ಲಿ ಕುಳ್ಳಿರಿಸಿ, ಅವರಿಂದ ಅಪ್ಪಣೆಯನ್ನು ಪಡೆದು, ಯಮುನೆಯ ಮಡುವಿಗೆ (ಅನಂತ ತೀರ್ಥ ಅಥವಾ ಬ್ರಹ್ಮಹ್ರದ) ಹೋಗಿ ವಿಧಿವತ್ತಾಗಿ ಸ್ನಾನಮಾಡತೊಡಗಿದನು. ॥ ೪೦ ॥ ಸನಾತನವಾದ ಬ್ರಹ್ಮಮಂತ್ರ (ಗಾಯತ್ರಿ)ವನ್ನು ಜಪಿಸುತ್ತಾ ಅಕ್ರೂರನು ನೀರಿನಲ್ಲಿ ಮುಳುಗಿದಾಗ ಅಲ್ಲಿಯೇ ಶ್ರೀಕೃಷ್ಣ-ಬಲರಾಮರು ಕುಳಿತಿರುವುದನ್ನು ನೋಡಿದನು. ॥ ೪೧ ॥ ವಸುದೇವನ ಪುತ್ರರಿಬ್ಬರನ್ನೂ ನಾನು ರಥದಲ್ಲಿ ಕುಳ್ಳಿರಿಸಿ ಬಂದಿದ್ದೇನೆ. ಈಗ ಅವರು ಇಲ್ಲಿಗೆ ಹೇಗೆ ಬಂದರು ? ಎಂಬ ಸಂದೇಹವು ಅಕ್ರೂರನ ಮನಸ್ಸಿಗೆ ಬಂತು. ಹಾಗಾದರೆ ಅವರು ರಥದಲ್ಲಿ ಇರಲಾರರು ಎಂದೆಣಿಸಿ ಅವನು ನೀರಿನಿಂದ ತಲೆಯನ್ನು ಮೇಲೆತ್ತಿ ನೋಡಿದನು. ॥ ೪೨ ॥ ಬಲರಾಮ-ಶ್ರೀಕೃಷ್ಣರಿಬ್ಬರೂ ಹಿಂದಿನಂತೆಯೇ ರಥದಲ್ಲಿ ಕುಳಿತಿರುವರು. ಹಾಗಾದರೆ ನಾನು ನೀರಿನಲ್ಲಿ ನೋಡಿದುದು ನನ್ನ ಭ್ರಮೆಯಾಗಿರಬಹುದು ಎಂದು ಯೋಚಿಸಿ ಪುನಃ ನೀರಿನಲ್ಲಿ ಮುಳುಗಿದನು. ॥ ೪೩ ॥ ಆದರೆ ಪುನಃ ಅಲ್ಲಿ ನೋಡುತ್ತಾನೆ - ಸಾಕ್ಷಾತ್ ಅನಂತನಾದ ಆದಿಶೇಷನು ವಿರಾಜಮಾನನಾಗಿದ್ದಾನೆ. ಸಿದ್ಧರು, ಚಾರಣರು, ಗಂಧರ್ವರು ಮತ್ತು ಅಸುರರು ತಮ್ಮ ತಲೆತಗ್ಗಿಸಿಕೊಂಡು ಅವನನ್ನು ಸ್ತುತಿಸುತ್ತಿದ್ದಾರೆ. ॥ ೪೪ ॥ ಆ ಆದಿಶೇಷನಿಗೆ ಸಾವಿರ ತಲೆ (ಹೆಡೆ)ಗಳಿದ್ದು ಪ್ರತಿಯೊಂದು ಹೆಡೆಯ ಮೇಲೆ ಕಿರೀಟಗಳು ಶೋಭಿಸುತ್ತವೆ. ಕಮಲ ನಾಳದಂತಿರುವ ಉಜ್ವಲವಾದ ಶರೀರದ ಮೇಲೆ ನೀಲಾಂಬರವನ್ನು ಧರಿಸಿರುವನು. ಸಾವಿರ ಶಿಖರಗಳಿಂದ ಕೂಡಿದ ಶ್ವೇತಪರ್ವತದಂತೆ ಶೋಭಾಯಮಾನನಾಗಿದ್ದಾನೆ. ॥ ೪೫ ॥ ಅಂತಹ ಆದಿಶೇಷನ ಮೇಲೆ ದಟ್ಟವಾದ ಮೇಘದಂತಿರುವ ಶ್ರೀಕೃಷ್ಣನು ವಿರಾಜಮಾನನಾಗಿದ್ದು ಅವನು ರೇಷ್ಮೆಯ ಪೀತಾಂಬರವನ್ನು ಧರಿಸಿದ್ದು, ಚತುರ್ಭುಜನಾಗಿದ್ದು, ಶಾಂತವಾದ ಮುಖಮುದ್ರೆಯನ್ನು ಹೊಂದಿದ್ದು, ಕಮಲದ ಎಸಳಿನಂತೆ ನಸುಗೆಂಪಾದ ಕಣ್ಣುಗಳಿಂದ ಕೂಡಿದ ದಿವ್ಯಮೂರ್ತಿಯನ್ನು ಅಕ್ರೂರನು ನೋಡಿದನು. ॥ ೪೬ ॥ ಅವನ ವದನವು ಅತ್ಯಂತ ಮನೋಹರವಾಗಿದ್ದು ಪ್ರಸನ್ನವಾಗಿತ್ತು. ಅವನ ಮಧುರ ಹಾಸ್ಯ ಮತ್ತು ಕಟಾಕ್ಷವೀಕ್ಷಣವು ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ಅಂದವಾದ ಹುಬ್ಬು ನೀಳವಾದ ಮೂಗು, ಸುಂದರವಾದ ಕಿವಿಗಳು, ಹೊಳೆಯುವ ಕಪೋಲಗಳಿಂದ ಕೂಡಿದ್ದು ತೊಂಡೆ ಹಣ್ಣಿನಂತೆ ತುಟಿಗಳು ಕೆಂಪಾಗಿದ್ದವು. ॥ ೪೭ ॥

ಪ್ರಲಂಬಪೀವರಭುಜಂ ತುಂಗಾಂಸೋರಃಸ್ಥಲಶ್ರಿಯಮ್ ।
ಕಂಬುಕಂಠಂ ನಿಮ್ನನಾಭಿಂ ವಲಿಮತ್ಪಲ್ಲವೋದರಮ್
॥ ೪೮ ॥

ಬೃಹತ್ಕಟಿತಟಶ್ರೋಣಿಕರಭೋರುದ್ವಯಾನ್ವಿತಮ್ ।
ಚಾರುಜಾನುಯುಗಂ ಚಾರುಜಂಘಾಯುಗಲಸಂಯುತಮ್
॥ ೪೯ ॥

ತುಂಗಗುಲ್ಫಾರುಣನಖವ್ರಾತದೀಧಿತಿಭಿರ್ವೃತಮ್ ।
ನವಾಂಗುಲ್ಯಂಗುಷ್ಠದಲೈರ್ವಿಲಸತ್ಪಾದಪಂಕಜಮ್
॥ ೫೦ ॥

ಸುಮಹಾರ್ಹಮಣಿವ್ರಾತಕಿರೀಟಕಟಕಾಂಗದೈಃ ।
ಕಟಿಸೂತ್ರಬ್ರಹ್ಮಸೂತ್ರಹಾರನೂಪುರಕುಂಡಲೈಃ
॥ ೫೧ ॥

ಭ್ರಾಜಮಾನಂ ಪದ್ಮಕರಂ ಶಂಖಚಕ್ರಗದಾಧರಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್
॥ ೫೨ ॥

ಸುನಂದನಂದಪ್ರಮುಖೈಃ ಪಾರ್ಷದೈಃ ಸನಕಾದಿಭಿಃ ।
ಸುರೇಶೈರ್ಬ್ರಹ್ಮರುದ್ರಾದ್ಯೈರ್ನವಭಿಶ್ಚ ದ್ವಿಜೋತ್ತಮೈಃ
॥ ೫೩ ॥

ಪ್ರಹ್ಲಾದನಾರದವಸುಪ್ರಮುಖೈರ್ಭಾಗವತೋತ್ತಮೈಃ ।
ಸ್ತೂಯಮಾನಂ ಪೃಥಗ್ಭಾವೈರ್ವಚೋಭಿರಮಲಾತ್ಮಭಿಃ
॥ ೫೪ ॥

ಶ್ರಿಯಾ ಪುಷ್ಟ್ಯಾ ಗಿರಾ ಕಾಂತ್ಯಾ ಕೀರ್ತ್ಯಾ ತುಷ್ಟ್ಯೇಲಯೋರ್ಜಯಾ ।
ವಿದ್ಯಯಾವಿದ್ಯಯಾ ಶಕ್ತ್ಯಾ ಮಾಯಯಾ ಚ ನಿಷೇವಿತಮ್
॥ ೫೫ ॥

ವಿಲೋಕ್ಯ ಸುಭೃಶಂ ಪ್ರೀತೋ ಭಕ್ತ್ಯಾ ಪರಮಯಾ ಯುತಃ ।
ಹೃಷ್ಯತ್ತನೂರುಹೋ ಭಾವಪರಿಕ್ಲಿನ್ನಾತ್ಮಲೋಚನಃ
॥ ೫೬ ॥

ಗಿರಾ ಗದ್ಗದಯಾಸ್ತೌಷೀತ್ ಸತ್ತ್ವಮಾಲಂಬ್ಯ ಸಾತ್ವತಃ ।
ಪ್ರಣಮ್ಯ ಮೂರ್ಧ್ನಾವಹಿತಃ ಕೃತಾಂಜಲಿಪುಟಃ ಶನೈಃ
॥ ೫೭ ॥

ತೋಳುಗಳು ನೀಳವಾಗಿದ್ದು ದಪ್ಪವಾಗಿದ್ದವು. ಉಬ್ಬಿದ ವಕ್ಷಃಸ್ಥಳವಿದ್ದು ಅದು ಲಕ್ಷ್ಮೀದೇವಿಗೆ ನಿವಾಸಸ್ಥಾನವಾಗಿತ್ತು. ಕುತ್ತಿಗೆಯು ಸುಳಿಶಂಖದಂತೆ ಕಂಗೊಳಿಸುತ್ತಿತ್ತು. ಆಳವಾದ ನಾಭಿಕಮಲವಿದ್ದು, ತ್ರಿವಳಿಗಳಿಂದ ಕೂಡಿದ ಉದರವು ಅರಳಿಯ ಎಲೆಯಂತೆ ಶೋಭಿಸುತ್ತಿತ್ತು. ॥ ೪೮ ॥ ತೆಳುವಾದ ಸೊಂಟವಿದ್ದು ನಿತಂಬಗಳು ಸ್ಥೂಲವಾಗಿದ್ದವು. ಆನೆಯ ಸೊಂಡಿಲಿನಂತಿರುವ ತೊಡೆಗಳು, ಸುಂದರವಾದ ಕಣಕಾಲು-ಮೊಣಕಾಲುಗಳಿದ್ದವು. ಪಾದಗಳ ಹರಡುಗಳು ಎತ್ತರವಾಗಿದ್ದವು. ಕೆಂಪಾದ ಕಾಲುಗುರುಗಳಿಂದ ಜ್ಯೋತಿರ್ಮಯ ಕಿರಣಗಳು ಚಿಮ್ಮುತ್ತಿದ್ದವು. ಚರಣಕಮಲಗಳ ಹೆಬ್ಬೆರಳು ಮತ್ತು ಬೆರಳುಗಳು ಕಮಲದ ಹೊಚ್ಚ ಹೊಸ ಎಸಳುಗಳಂತೆ ಶೋಭಿತವಾಗಿದ್ದವು. ॥ ೪೯-೫೦ ॥ ಬಹುಮೂಲ್ಯವಾದ ರತ್ನಖಚಿತವಾದ ಕಿರೀಟವಿದ್ದಿತು. ಕಡಗ, ಕಂಕಣ, ತೋಳ್ಬಳೆಗಳೂ, ಸುವರ್ಣಮಯವಾದ ಉಡಿದಾರವಿತ್ತು, ಹಾರ, ನೂಪುರ, ಕುಂಡಲ ಹಾಗೂ ಯಜ್ಞೋಪವೀತದಿಂದ ಆ ದಿವ್ಯ ಮೂರ್ತಿಯು ಅಲಂಕೃತವಾಗಿದೆ. ಒಂದು ಕೈಯಲ್ಲಿ ಪದ್ಮವಿದ್ದು ಉಳಿದ ಮೂರು ಕೈಗಳಲ್ಲಿ ಶಂಖ, ಚಕ್ರ, ಗದೆ ಶೋಭಿಸುತ್ತಿದ್ದವು. ವಕ್ಷಸ್ಥಳದಲ್ಲಿ ಶ್ರೀವತ್ಸದ ಚಿಹ್ನೆ, ಕೊರಳಲ್ಲಿ ಕೌಸ್ತುಭ ಮಣಿಯೂ, ವನಮಾಲೆಯು ಬೆಳಗುತ್ತಿದ್ದವು. ॥ ೫೧-೫೨ ॥ ನಂದ-ಸುನಂದರೇ ಮೊದಲಾ ಪಾರ್ಷದರು ತಮ್ಮ ಒಡೆಯನೆಂದೂ, ಸನಕಾದಿ ಮಹರ್ಷಿಗಳು ಪರಬ್ರಹ್ಮನೆಂದೂ, ಬ್ರಹ್ಮ-ರುದ್ರಾದಿ ದೇವತೆಗಳು ಸರ್ವೇಶ್ವರನೆಂದೂ, ಮರೀಚ್ಯಾದಿ ಒಂಭತ್ತು ಬ್ರಾಹ್ಮಣರು ಪ್ರಜಾಪತಿಯೆಂದೂ, ಪ್ರಹ್ಲಾದ-ನಾರದಾದಿ ಭಗವದ್ಭಕ್ತರು ಹಾಗೂ ಅಷ್ಟವಸುಗಳು ಪರಮಪ್ರಿಯತಮ ಭಗವಂತನೆಂದೂ ತಿಳಿದು ಭಿನ್ನ-ಭಿನ್ನ ಭಾವಗಳಿಂದ ನಿರ್ದೋಷವಾದ ವೇದವಾಣಿಗಳಿಂದ ಭಗವಂತನನ್ನು ಸ್ತುತಿಸುತ್ತಿದ್ದಾರೆ. ॥ ೫೩-೫೪ ॥ ಜೊತೆಗೇ ಲಕ್ಷ್ಮೀ, ಪುಷ್ಟಿ, ಸರಸ್ವತಿ, ಕಾಂತಿ, ಕೀರ್ತಿ, ತುಷ್ಟಿ (ಅರ್ಥಾತ್ – ಐಶ್ವರ್ಯ, ಬಲ, ಜ್ಞಾನ, ಶ್ರೀ, ಯಶ ಮತ್ತು ವೈರಾಗ್ಯ – ಈ ಷಡೈಶ್ವರ್ಯ ಶಕ್ತಿಗಳು), ಇಳಾ, ಊರ್ಜಾ, ವಿದ್ಯಾ-ಅವಿದ್ಯಾ, ಹ್ಲಾದಿನೀ, ಸಂವಿತ್ ಮತ್ತು ಮಾಯೆ ಮೊದಲಾದ ಶಕ್ತಿಗಳು ಮೂರ್ತಿಮತ್ತಾಗಿ ನಿಂತು ಅವನ ಸೇವೆ ಮಾಡುತ್ತಿದ್ದರು. ॥ ೫೫ ॥

ಭಗವಂತನ ದಿವ್ಯವಾದ ಸ್ವರೂಪವನ್ನು ನೋಡಿದ ಅಕ್ರೂರನಿಗೆ ಜಂಘಾಬಲವೇ ಉಡುಗಿಹೋಗಿತ್ತು. ಬಾಯಿಂದ ಮಾತೇ ಹೊರಡಲಿಲ್ಲ. ಶರೀರವೆಲ್ಲವೂ ಹರ್ಷಾತಿರೇಕದಿಂದ ಪುಳಕಗೊಂಡಿತು. ಪ್ರೇಮೋದ್ರೇಕದಿಂದ ಅವನ ಕಣ್ಣುಗಳು ಆನಂದ ಬಾಷ್ಪಗಳನ್ನು ಸುರಿಸಿದುವು. ॥ ೫೬ ॥ ಕೆಲವು ಕ್ಷಣಗಳು ಹೀಗೆಯೇ ಇದ್ದು ಮತ್ತೆ ಅವನು ಚೇತರಿಸಿಕೊಂಡು ಭಗವಂತನ ಚರಣಗಳಲ್ಲಿ ಶಿರಸ್ಸನ್ನಿಟ್ಟು ನಮಸ್ಕರಿಸಿದನು. ಅನಂತರ ಕೈಜೋಡಿಸಿಕೊಂಡು ಗದ್ಗದ ಧ್ವನಿಯಿಂದ ನಿಧಾನವಾಗಿ ಭಗವಂತನನ್ನು ಸ್ತುತಿಸತೊಡಗಿದನು. ॥ ೫೭ ॥

ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೩೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇಽಕ್ರೂರಪ್ರತಿಯಾನೇ ಏಕೋನಚತ್ವಾರಿಂಶೋಽಧ್ಯಾಯಃ ॥ ೩೯ ॥

# ನಲವತ್ತನೆಯ ಅಧ್ಯಾಯ

## ಅಕ್ರೂರನು ಮಾಡಿದ ಭಗವಾನ್ ಶ್ರೀಕೃಷ್ಣನ ಸ್ತುತಿ

ಅಕ್ರೂರ ಉವಾಚ

ನತೋಽಸ್ಮ್ಯಹಂ ತ್ವಾಖಿಲಹೇತುಹೇತುಂ
ನಾರಾಯಣಂ ಪೂರುಷಮಾದ್ಯಮವ್ಯಯಮ್ ।
ಯನ್ನಾಭಿಜಾತಾದರವಿಂದ ಕೋಶಾದ್
ಬ್ರಹ್ಮಾಽಽವಿರಾಸೀದ್ಯತ ಏಷ ಲೋಕಃ ॥ ೧ ॥

ಭೂಸ್ತೋಯಮಗ್ನಿಃ ಪವನಃ ಖಮಾದಿ-
ರ್ಮಹಾನಜಾದಿರ್ಮನ ಇಂದ್ರಿಯಾಣಿ ।
ಸರ್ವೇಂದ್ರಿಯಾರ್ಥಾ ವಿಬುಧಾಶ್ಚ ಸರ್ವೇ
ಯೇ ಹೇತವಸ್ತೇ ಜಗತೋಽಂಗಭೂತಾಃ ॥ ೨ ॥

ನೈತೇ ಸ್ವರೂಪಂ ವಿದುರಾತ್ಮನಸ್ತೇ
ಹ್ಯಜಾದಯೋಽನಾತ್ಮತಯಾ ಗೃಹೀತಾಃ ।
ಅಜೋಽನುಬದ್ಧಃ ಸ ಗುಣೈರಜಾಯಾ
ಗುಣಾತ್ಪರಂ ವೇದ ನ ತೇ ಸ್ವರೂಪಮ್ ॥ ೩ ॥

ತ್ವಾಂ ಯೋಗಿನೋ ಯಜಂತ್ಯದ್ಧಾ ಮಹಾಪುರುಷಮೀಶ್ವರಮ್ ।
ಸಾಧ್ಯಾತ್ಮಂ ಸಾಧಿಭೂತಂ ಚ ಸಾಧಿದೈವಂ ಚ ಸಾಧವಃ ॥ ೪ ॥

ತ್ರಯ್ಯಾ ಚ ವಿದ್ಯಯಾ ಕೇಚಿತ್ ತ್ವಾಂ ವೈ ವೈತಾನಿಕಾ ದ್ವಿಜಾಃ ।
ಯಜಂತೇ ವಿತತೈರ್ಯಜ್ಞೈರ್ನಾನಾರೂಪಾಮರಾಖ್ಯಯಾ ॥ ೫ ॥

ಏಕೇ ತ್ವಾಖಿಲಕರ್ಮಾಣಿ ಸಂನ್ಯಸ್ಯೋಪಶಮಂ ಗತಾಃ ।
ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಮ್ ॥ ೬ ॥

ಅನ್ಯೇ ಚ ಸಂಸ್ಕೃತಾತ್ಮಾನೋ ವಿಧಿನಾಭಿಹಿತೇನ ತೇ ।
ಯಜಂತಿ ತ್ವನ್ಮಯಾಸ್ತ್ವಾಂ ವೈ ಬಹುಮೂರ್ತ್ಯೇಕಮೂರ್ತಿಕಮ್ ॥ ೭ ॥

ತ್ವಾಮೇವಾನ್ಯೇ ಶಿವೋಕ್ತೇನ ಮಾರ್ಗೇಣ ಶಿವರೂಪಿಣಮ್ ।
ಬಹ್ವಾಚಾರ್ಯವಿಭೇದೇನ ಭಗವನ್ ಸಮುಪಾಸತೇ ॥ ೮ ॥

ಅಕ್ರೂರನು ಹೇಳಿದನು - ಪ್ರಭುವೇ! ನೀನು ಪ್ರಕೃತಿಯೇ ಮೊದಲಾದ ಸಮಸ್ತ ಕಾರಣಗಳಿಗೆ ಪರಮಕಾರಣನಾಗಿರುವೆ. ನೀನೇ ಅವಿನಾಶಿಯಾದ ಪುರುಷೋತ್ತಮ ನಾರಾಯಣನಾಗಿರುವೆ. ನಿನ್ನ ನಾಭಿಕಮಲದಿಂದ ಈ ಚರಾಚರ ಜಗತ್ತನ್ನು ಸೃಷ್ಟಿಸಿದ ಆ ಬ್ರಹ್ಮದೇವರ ಆವಿರ್ಭಾವವಾಗಿರುವುದು. ಅಂತಹ ನಿನ್ನ ಚರಣಗಳಿಗೆ ನಾನು ವಂದಿಸುತ್ತೇನೆ. ॥ ೧ ॥ ಜಗದೀಶ್ವರನೇ! ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ, ಪ್ರಕೃತಿ, ಪುರುಷ, ಮನಸ್ಸು, ಇಂದ್ರಿಯಗಳು, ಇಂದ್ರಿಯಗಳ ವಿಷಯಗಳು, ಇಂದ್ರಿಯಗಳ ಅಧಿಷ್ಠಾತೃ ದೇವತೆಗಳು, ಸಮಸ್ತವಾದ ಚರಾಚರಜಗತ್ತು, ಅದರಲ್ಲಿ ನಡೆಯುವ ವ್ಯವಹಾರಗಳು ಇವೆಲ್ಲವೂ ನಿನ್ನ ಅವಯವಗಳೇ ಆಗಿವೆ. ॥ ೨ ॥ ಇವೆಲ್ಲವೂ ನಿನ್ನ ಅವಯವಗಳೇ ಆಗಿದ್ದರೂ ನಿನ್ನ ಆತ್ಮಸ್ವರೂಪವನ್ನು ಅವು ತಿಳಿಯುವುದಿಲ್ಲ. ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಒಳಗಾಗುವುದರಿಂದ ಪ್ರಕೃತಿ ಮತ್ತು ಪ್ರಕೃತಿಯಿಂದ ಉಂಟಾದ ಸಮಸ್ತ ಪದಾರ್ಥಗಳು ಅನಾತ್ಮವೇ ಆಗಿವೆ. ಬ್ರಹ್ಮದೇವರು ನಿನ್ನ ಸ್ವರೂಪವೇ ಆಗಿದ್ದರೂ ಪ್ರಕೃತಿಯ ಗುಣವಾದ ರಜಸ್ಸಿನಿಂದ ಆವಿರ್ಭೂತನಾಗಿದ್ದಾನೆ. ಆದರಿಂದಾಗಿ ಅವನೂ ಕೂಡ ಗುಣಾತೀತನಾದ ನಿನ್ನ ಆತ್ಮಸ್ವರೂಪವನ್ನು ತಿಳಿದವನಲ್ಲ. ॥ ೩ ॥ ಸಾಧುಸತ್ಪುರುಷರೂ, ಯೋಗಿಗಳೂ ತಮ್ಮ ಅಂತಃಕರಣದಲ್ಲಿ ನೆಲೆಸಿದ ಅಂತರ್ಯಾಮಿಯ ರೂಪದಲ್ಲಿಯೂ, ಸಮಸ್ತ ಭೂತ-ಭೌತಿಕ ಪದಾರ್ಥಗಳಲ್ಲಿಯೂ ವ್ಯಾಪ್ತನಾದ ಪರಮಾತ್ಮನ ರೂಪದಲ್ಲಿಯೂ, ಸೂರ್ಯ, ಚಂದ್ರ, ಅಗ್ನಿ ಮೊದಲಾದ ದೇವತೆಗಳಲ್ಲಿ ಇಷ್ಟದೇವತೆಯ ರೂಪದಲ್ಲಿಯೂ, ಅವರ ಸಾಕ್ಷಿಯಾದ ಮಹಾಪುರುಷ ಹಾಗೂ ನಿಯಾಮಕ ಈಶ್ವರನ ರೂಪದಲ್ಲಿಯೂ ಸಾಕ್ಷಾತ್ತಾಗಿ ನಿನ್ನನ್ನೇ ಉಪಾಸನೆ ಮಾಡುತ್ತಾರೆ. ॥ ೪ ॥ ಯಾಜ್ಞಿಕರಾದ ಕೆಲವು ಬ್ರಾಹ್ಮಣರು ಕರ್ಮಕಾಂಡವನ್ನು ಪ್ರತಿಪಾದಿಸುವ ವೇದತ್ರಯಗಳ ಮೂಲಕವಾಗಿ ವಿಸ್ತಾರವಾದ ಯಜ್ಞಗಳಿಂದ ನಾನಾರೂಪಗಳುಳ್ಳ ದೇವತೆಗಳ ಹೆಸರಿನಿಂದ ನಿನ್ನನ್ನೇ ಪೂಜಿಸುತ್ತಾರೆ. ॥ ೫ ॥ ಅನೇಕ ಜ್ಞಾನಿಗಳು ತಮ್ಮ ಸಮಸ್ತ ಕರ್ಮಗಳನ್ನು ಸನ್ನ್ಯಸ್ತವಾಗಿಸಿ, ಶಾಂತಭಾವದಲ್ಲಿ ಸ್ಥಿತರಾಗುತ್ತಾರೆ. ಅವರು ಹೀಗೆ ಜ್ಞಾನಯಜ್ಞದ ಮೂಲಕವಾಗಿ ಜ್ಞಾನಸ್ವರೂಪನಾದ ನಿನ್ನನ್ನೇ ಆರಾಧಿಸುತ್ತಾರೆ.॥೬॥ ಇನ್ನೂ ಅನೇಕರು ಸಂಸ್ಕಾರಗಳಿಂದ ಶುದ್ಧಚಿತ್ತವುಳ್ಳ ವೈಷ್ಣವ ಭಕ್ತರು ನಿನ್ನಿಂದ ಉಪದಿಷ್ಟವಾದ ಪಾಂಚರಾತ್ರ ಮೊದಲಾದ ವಿಧಿಗಳಿಂದ ತನ್ಮಯರಾಗಿ ನಿನ್ನ ಚತುರ್ವ್ಯೂಹಾದಿ ಅನೇಕ ರೂಪಗಳನ್ನು ಮತ್ತು ನಾರಾಯಣ ಸ್ವರೂಪವಾದ ಒಂದೇ ಸ್ವರೂಪವನ್ನು ಪೂಜಿಸುತ್ತಾರೆ. ॥ ೭ ॥ ಭಗವಂತನೇ! ಮತ್ತೆ ಕೆಲವರು ಶಿವನಿಂದ ಹೇಳಲ್ಪಟ್ಟಿರುವ ಶೈವಾಗಮದ ವಿಧಾನದಿಂದ ಹಲವಾರು ಭೇದಗಳುಳ್ಳ ಶೈವ ಪಾಶುಪತಾದಿ ಶಿವಸ್ವರೂಪವಾದ ನಿನ್ನನ್ನೇ ಪೂಜಿಸುತ್ತಾರೆ. ॥ ೮ ॥

ಸರ್ವ ಏವ ಯಜಂತಿ ತ್ವಾಂ ಸರ್ವದೇವಮಯೇಶ್ವರಮ್ ।
ಯೇಽಪ್ಯನ್ಯದೇವತಾಭಕ್ತಾ ಯದ್ಯಪ್ಯನ್ಯಧಿಯಃ ಪ್ರಭೋ ॥ ೯ ॥

ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾಃ ಪ್ರಭೋ ।
ವಿಶಂತಿ ಸರ್ವತಃ ಸಿಂಧುಂ ತದ್ವತ್ತ್ವಾಂ ಗತಯೋಽಂತತಃ ॥ ೧೦ ॥

ಸತ್ತ್ವಂ ರಜಸ್ತಮ ಇತಿ ಭವತಃ ಪ್ರಕೃತೇರ್ಗುಣಾಃ ।
ತೇಷು ಹಿ ಪ್ರಾಕೃತಾಃ ಪ್ರೋತಾ ಆಬ್ರಹ್ಮಸ್ಥಾವರಾದಯಃ ॥ ೧೧ ॥

ತುಭ್ಯಂ ನಮಸ್ತೇಽಸ್ತ್ವವಿಷಕ್ತದೃಷ್ಟಯೇ
ಸರ್ವಾತ್ಮನೇ ಸರ್ವಧಿಯಾಂ ಚ ಸಾಕ್ಷಿಣೇ ।
ಗುಣಪ್ರವಾಹೋಽಯಮವಿದ್ಯಯಾ ಕೃತಃ
ಪ್ರವರ್ತತೇ ದೇವನೃತಿರ್ಯಗಾತ್ಮಸು ॥ ೧೨ ॥

ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ
ಸೂರ್ಯೋ ನಭೋ ನಾಭಿರಥೋ ದಿಶಃ ಶ್ರುತಿಃ ।
ದ್ಯೌಃ ಕಂ ಸುರೇಂದ್ರಾಸ್ತವ ಬಾಹವೋಽರ್ಣವಾಃ
ಕುಕ್ಷಿರ್ಮರುತ್ ಪ್ರಾಣಬಲಂ ಪ್ರಕಲ್ಪಿತಮ್ ॥ ೧೩ ॥

ರೋಮಾಣಿ ವೃಕ್ಷೌಷಧಯಃ ಶಿರೋರುಹಾ
ಮೇಘಾಃಪರಸ್ಯಾಸ್ಥಿನಖಾನಿ ತೇಽದ್ರಯಃ ।
ನಿಮೇಷಣಂ ರಾತ್ರ್ಯಹನೀ ಪ್ರಜಾಪತಿ-
ರ್ಮೇಢ್ರಸ್ತು ವೃಷ್ಟಿಸ್ತವ ವೀರ್ಯಮಿಷ್ಯತೇ ॥ ೧೪ ॥

ತ್ವಯ್ಯವ್ಯಯಾತ್ಮನ್ ಪುರುಷೇ ಪ್ರಕಲ್ಪಿತಾ
ಲೋಕಾಃ ಸಪಾಲಾ ಬಹುಜೀವಸಂಕುಲಾಃ ।
ಯಥಾ ಜಲೇ ಸಂಜಿಹತೇ ಜಲೌಕಸೋಽ-
ಪ್ಯುದುಂಬರೇ ವಾ ಮಶಕಾ ಮನೋಮಯೇ ॥ ೧೫ ॥

ಯಾನಿ ಯಾನೀಹ ರೂಪಾಣಿ ಕ್ರೀಡನಾರ್ಥಂ ಬಿಭರ್ಷಿ ಹಿ ।
ತೈರಾಮೃಷ್ಟಶುಚೋ ಲೋಕಾ ಮುದಾ ಗಾಯಂತಿ ತೇ ಯಶಃ ॥ ೧೬ ॥

ನಮಃ ಕಾರಣಮತ್ಸ್ಯಾಯ ಪ್ರಲಯಾಬ್ಧಿಚರಾಯ ಚ ।
ಹಯಶೀರ್ಷ್ಣೇ ನಮಸ್ತುಭ್ಯಂ ಮಧುಕೈಟಭಮೃತ್ಯವೇ ॥ ೧೭ ॥

ಸ್ವಾಮಿ! ನಿನ್ನಿಂದ ಭಿನ್ನರೆಂದು ಭಾವಿಸಿ ಹಲವಾರು ದೇವತೆಗಳನ್ನು ಪೂಜಿಸುವ ಅನ್ಯದೇವತಾ ಭಕ್ತರೂ ಕೂಡ ವಾಸ್ತವವಾಗಿ ನಿನ್ನನ್ನೇ ಆರಾಧಿಸುತ್ತಾರೆ. ಏಕೆಂದರೆ, ನೀನೇ ಸಮಸ್ತ ದೇವತೆಗಳ ರೂಪದಲ್ಲಿರುವ ಸರ್ವೇಶ್ವರನಾಗಿರುವೆ. ॥ ೯ ॥ ಪ್ರಭುವೇ! ಪರ್ವತದಲ್ಲಿ ಹುಟ್ಟಿದ ನದಿಗಳು ಮಳೆಯ ನೀರಿನಿಂದ ತುಂಬಿ ಹರಿಯುತ್ತಾ ಕೊನೆಗೆ ಸಮುದ್ರವನ್ನೇ ಸೇರುವಂತೆಯೇ ಶ್ರುತಿ ಸ್ಮೃತಿ-ಪುರಾಣಗಳಲ್ಲಿ ಹೇಳಿರುವ ಎಲ್ಲ ಉಪಾಸನಾ ಮಾರ್ಗಗಳು ನಿನ್ನಲ್ಲಿಯೇ ಬಂದು ಸೇರುವುವು. ॥ ೧೦ ॥ ದೇವದೇವನೇ! ಸತ್ತ್ವ-ರಜಸ್ತಮಗಳೆಂಬುವು ನಿನ್ನ ಪ್ರಕೃತಿಯ ಗುಣಗಳಾಗಿವೆ. ಬ್ರಹ್ಮನಿಂದ ಹಿಡಿದು ಸಕಲ ಚರಾಚರ ಪ್ರಾಣಿಗಳೂ ಕೂಡ ಬಟ್ಟೆಯಲ್ಲಿ ನೂಲು ಹಾಸುಹೊಕ್ಕಾಗಿರುವಂತೆ ತ್ರಿಗುಣಗಳಲ್ಲಿ ಓತಪ್ರೋತವಾಗಿವೆ. ॥ ೧೧ ॥ ನೀನು ಸರ್ವಸ್ವರೂಪನಾಗಿದ್ದರೂ ಅವುಗಳಲ್ಲಿ ಲಿಪ್ತನಾಗಿಲ್ಲ, ನೀನು ನಿರ್ಲಿಪ್ತನು. ನೀನು ಸಮಸ್ತರ ಬುದ್ಧಿಗಳಲ್ಲಿಯೂ ಸಾಕ್ಷಿ-ಸ್ವರೂಪನಾಗಿರುವೆ. ಗುಣಗಳ ಪ್ರವಾಹದಿಂದ ಉಂಟಾದ ಈ ಸೃಷ್ಟಿಯು ಅಜ್ಞಾನಮೂಲಕವೇ ಆಗಿದೆ ಮತ್ತು ದೇವ-ಮನುಷ್ಯ-ತಿರ್ಯಕ್ ಪ್ರಾಣಿಗಳಲ್ಲಿಯೂ ವ್ಯಾಪ್ತವಾಗಿದೆ. ಆದರೆ ನೀನು ಮಾತ್ರ ಇವೆಲ್ಲದರಿಂದ ಬೇರೆಯೆ ಆಗಿರುವೆ. ಗುಣಾತೀತನಾಗಿರುವೆ. ಅಂತಹ ನಿನಗೆ ನಮಸ್ಕರಿಸುತ್ತೇನೆ. ॥ ೧೨ ॥ ಅಗ್ನಿಯು ನಿನ್ನ ಮುಖವಾಗಿದೆ. ಪೃಥ್ವಿಯು ಚರಣವಾಗಿದೆ. ಸೂರ್ಯ-ಚಂದ್ರರು ಕಣ್ಣುಗಳಾಗಿವೆ. ಆಕಾಶವೇ ನಾಭಿಯಾಗಿದೆ. ದಿಕ್ಕುಗಳು ಕಿವಿಗಳಾಗಿವೆ. ಸ್ವರ್ಗವೇ ಶಿರವಾಗಿದೆ. ದೇವೇಂದ್ರ ಗಣಗಳು ನಿನ್ನ ಭುಜಗಳಾಗಿವೆ. ಸಮುದ್ರವು ಹೊಟ್ಟೆಯಾಗಿದೆ. ವಾಯುವು ನಿನ್ನ ಪ್ರಾಣಶಕ್ತಿಯ ರೂಪದಲ್ಲಿ ಉಪಾಸನೆಗಾಗಿ ಕಲ್ಪಿತವಾಗಿದೆ. ॥ ೧೩ ॥ ವೃಕ್ಷಗಳು ಮತ್ತು ಔಷಧಿಗಳು ನಿನ್ನ ರೋಮಗಳಾಗಿವೆ. ಮೇಘಗಳು ತಲೆಕೂದಲುಗಳಾಗಿವೆ. ಪರ್ವತಗಳು ನಿನ್ನ ಮೂಳೆಗಳೂ, ಉಗುರುಗಳೂ ಆಗಿವೆ. ಹಗಲು-ರಾತ್ರಿಗಳು ರೆಪ್ಪೆಗಳನ್ನು ಮುಚ್ಚಿ ತೆರೆಯುವುದಾಗಿದೆ. ಪ್ರಜಾಪತಿಯೆ ಜನನೇಂದ್ರಿಯವಾಗಿದ್ದು ಮಳೆಯೇ ವೀರ್ಯವಾಗಿದೆ. ॥ ೧೪ ॥ ಅವಿನಾಶಿಯಾದ ಪರಮಾತ್ಮನೇ! ನೀರಿನಲ್ಲಿ ಕೋಟಿ-ಕೋಟಿ ಜಲಚರಗಳಿರುವಂತೆ, ಅತ್ತಿಯ ಹಣ್ಣಿನಲ್ಲಿ ನೂರಾರು ಸಣ್ಣ ಸಣ್ಣ ಜೀವಿಗಳಿರುವಂತೆ ಉಪಾಸನೆಗಾಗಿ ಸ್ವೀಕರಿಸಿಕೊಂಡ ನಿನ್ನ ಮನೋಮಯ ಪುರುಷರೂಪದಲ್ಲಿ ಅನೇಕ ಪ್ರಕಾರದ ಜೀವ-ಜಂತುಗಳಿಂದ ತುಂಬಿದ ಲೋಕಗಳು ಮತ್ತು ಲೋಕಪಾಲಕರು ಕಲ್ಪಿತವಾಗಿವೆ. ॥ ೧೫ ॥ ನೀನು ಲೀಲೆಗಾಗಿ ಈ ಲೋಕದಲ್ಲಿ ಯಾವ ಯಾವ ರೂಪಗಳನ್ನು ಧರಿಸುವೆಯೋ, ಆ ಅವತಾರಗಳೆಲ್ಲ ಜನರ ಶೋಕ-ಮೋಹಗಳನ್ನು ನಾಶವಾಗಿಸುವುವು. ಅವರೆಲ್ಲರೂ ಅತಿ ಆನಂದದಿಂದ ನಿನ್ನ ನಿರ್ಮಲ ಕೀರ್ತಿಯನ್ನು ಕೊಂಡಾಡುವರು. ॥ ೧೬ ॥ ಪ್ರಭುವೇ! ಪ್ರಳಯಕಾಲದಲ್ಲಿ ಏಕಾರ್ಣವವಾಗಿದ್ದ ಸಮುದ್ರದಲ್ಲಿ ಓಡುತ್ತಿದ್ದ ಜಗತ್ಕಾರಣವಾದ ಮತ್ಸ್ಯಮೂರ್ತಿಗೆ ನಮಸ್ಕರಿಸುತ್ತೇನೆ. ಹಯಗ್ರೀವರೂಪಿಯಾಗಿ ಮಧು ಕೈಟಭರಿಗೆ ಮೃತ್ಯುವಾದ ನಿನಗೆ ನಮಸ್ಕರಿಸುತ್ತೇನೆ. ॥ ೧೭ ॥

ಅಕೂಪಾರಾಯ ಬೃಹತೇ ನಮೋ ಮಂದರಧಾರಿಣೇ ।
ಕ್ಷಿತ್ಯುದ್ಧಾರವಿಹಾರಾಯ ನಮಃ ಸೂಕರಮೂರ್ತಯೇ
॥ ೧೮ ॥

ನಮಸ್ತೇಽದ್ಭುತಸಿಂಹಾಯ ಸಾಧುಲೋಕಭಯಾಪಹ ।
ವಾಮನಾಯ ನಮಸ್ತುಭ್ಯಂ ಕ್ರಾಂತತ್ರಿಭುವನಾಯ ಚ
॥ ೧೯ ॥

ನಮೋ ಭೃಗೂಣಾಂ ಪತಯೇ ದೃಪ್ತಕ್ಷತ್ರವನಚ್ಛಿದೇ ।
ನಮಸ್ತೇ ರಘುವರ್ಯಾಯ ರಾವಣಾಂತಕರಾಯ ಚ
॥ ೨೦ ॥

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಸಾತ್ವತಾಂ ಪತಯೇ ನಮಃ
॥ ೨೧ ॥

ನಮೋ ಬುದ್ಧಾಯ ಶುದ್ಧಾಯ ದೈತ್ಯದಾನವಮೋಹಿನೇ ।
ಮ್ಲೇಚ್ಛಪ್ರಾಯಕ್ಷತ್ರಹಂತ್ರೇ ನಮಸ್ತೇ ಕಲ್ಕಿರೂಪಿಣೇ
॥ ೨೨ ॥

ಭಗವನ್ ಜೀವಲೋಕೋಽಯಂ ಮೋಹಿತಸ್ತವ ಮಾಯಯಾ ।
ಅಹಂಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು
॥ ೨೩ ॥

ಅಹಂ ಚಾತ್ಮಾತ್ಮಜಾಗಾರದಾರಾರ್ಥಸ್ವಜನಾದಿಷು ।
ಭ್ರಮಾಮಿ ಸ್ವಪ್ನಕಲ್ಪೇಷು ಮೂಢಃ ಸತ್ಯಧಿಯಾ ವಿಭೋ
॥ ೨೪ ॥

ಅನಿತ್ಯಾನಾತ್ಮದುಃಖೇಷು ವಿಪರ್ಯಯಮತಿರ್ಹ್ಯಹಮ್ ।
ದ್ವಂದ್ವಾರಾಮಸ್ತಮೋವಿಷ್ಟೋ ನ ಜಾನೇ ತ್ವಾಽಽತ್ಮನಃ ಪ್ರಿಯಮ್
॥ ೨೫ ॥

ಯಥಾಽಬುಧೋ ಜಲಂ ಹಿತ್ವಾ ಪ್ರತಿಚ್ಛನ್ನಂ ತದುದ್ಭವೈಃ ।
ಅಭ್ಯೇತಿ ಮೃಗತೃಷ್ಣಾಂ ವೈ ತದ್ವತ್ತ್ವಾಹಂ ಪರಾಙ್ಮುಖಃ
॥ ೨೬ ॥

ನೋತ್ಸಹೇಽಹಂ ಕೃಪಣಧೀಃ ಕಾಮಕರ್ಮಹತಂ ಮನಃ ।
ರೋದ್ಧುಂ ಪ್ರಮಾಥಿಭಿಶ್ಚಾಕ್ಷೈರ್ಹ್ರಿಯಮಾಣಮಿತಸ್ತತಃ
॥ ೨೭ ॥

ಭಗವಂತನೇ! ನೀನೇ ವಿಶಾಲವಾದ ಕೂರ್ಮರೂಪವನ್ನು ಧರಿಸಿ ಮಂದರ ಪರ್ವತವನ್ನು ಬೆನ್ನ ಮೇಲೆ ಹೊತ್ತಿರುವ ನಿನಗೆ ನಮಸ್ಕರಿಸುತ್ತೇನೆ. ನೀನೇ ಭೂದೇವಿಯನ್ನು ಉದ್ಧರಿಸಲು ವರಾಹನಾಗಿ ಅವತರಿಸಿದ ನಿನಗೆ ನಮಸ್ಕರಿಸುತ್ತೇನೆ. ॥ ೧೮ ॥ ಸತ್ಪುರುಷರ ಭಯವನ್ನು ಹೋಗಲಾಡಿಸುವ ಪ್ರಭುವೇ! ನಿನ್ನ ಆ ಅಲೌಕಿಕ ನರಸಿಂಹರೂಪಕ್ಕೆ ನಮೋ ನಮಃ. ವಾಮನರೂಪವನ್ನು ಧರಿಸಿ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಆಳೆದಂತಹ ನಿನಗೆ ನಮಸ್ಕಾರವು. ॥ ೧೯ ॥ ದುರಹಂಕಾರಿಗಳಾದ ಕ್ಷತ್ರಿಯರೆಂಬ ಆರಣ್ಯವನ್ನೇ ಕತ್ತರಿಸಿ ಹಾಕಿದ ಭೃಗುಶ್ರೇಷ್ಠನಾದ ಪರಶುರಾಮನಿಗೆ ನಮಸ್ಕರಿಸುತ್ತೇನೆ. ರಘುವಂಶದಲ್ಲಿ ಶ್ರೀರಾಮನಾಗಿ ಅವತರಿಸಿದ ನಿನಗೆ ನಮಸ್ಕರಿಸುತ್ತೇನೆ. ॥ ೨೦ ॥ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ಚತುರ್ವ್ಯೂಹ ಸ್ವರೂಪನಾಗಿರುವ ಹಾಗೂ ಯದುವಂಶೀಯರಿಗೆ ಒಡೆಯನಾದ ನಿನಗೆ ನಮಸ್ಕರಿಸುತ್ತೇನೆ. ॥ ೨೧ ॥ ದೈತ್ಯ-ದಾನವರನ್ನು ವಿಮೋಹಗೊಳಿಸಲು ನೀನು ಶುದ್ಧ ಅಹಿಂಸಾಮಾರ್ಗದ ಪ್ರವರ್ತಕನಾದ ಬುದ್ಧ ರೂಪವನ್ನು ಸ್ವೀಕರಿಸುವೆ. ಅಂತಹ ನಿನಗೆ ನಮಸ್ಕಾರವು. ಪೃಥ್ವಿಯಲ್ಲಿ ಕ್ಷತ್ರಿಯರು ಮ್ಲೇಚ್ಛಪ್ರಾಯರಾದಾಗ ಅವರನ್ನು ನಾಶಪಡಿಸಲು ನೀನೇ ಕಲ್ಕಿಯ ರೂಪದಿಂದ ಅವತರಿಸುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೨ ॥

ಭಗವಂತನೇ! ಈ ಸಮಸ್ತ ಜೀವಿಗಳು ನಿನ್ನ ಮಾಯೆಯಿಂದ ಮೋಹಿತರಾಗಿದ್ದಾರೆ. ಈ ಮೋಹದಿಂದಲೇ ನಾನು-ನನ್ನದೆಂಬ ದುರಾಗ್ರಹಕ್ಕೆ ಒಳಗಾಗಿ ಕರ್ಮಮಾರ್ಗದಲ್ಲಿ ಅಲೆಯುತ್ತಿದ್ದಾರೆ. ॥ ೨೩ ॥ ವಿಭುವೇ! ಸ್ವಪ್ನದಲ್ಲಿ ಕಾಣುವ ಪದಾರ್ಥಗಳಂತಿರುವ ದೇಹ-ಗೇಹ, ಪತ್ನೀ-ಪುತ್ರರು, ಧನ-ಸ್ವಜನ ಇವೆಲ್ಲವನ್ನು ಮೂಢನಾದ ನಾನೂ ಕೂಡ ಸತ್ಯವೆಂದೇ ತಿಳಿದು ಭ್ರಮಿಸಿ ವಿಮೋಹಿತನಾಗಿದ್ದೇನೆ. ॥ ೨೪ ॥ ನನ್ನ ಮೂರ್ಖತೆಯನ್ನಾದರೂ ನೋಡು. ಪ್ರಭುವೇ! ಅನಿತ್ಯ ವಸ್ತುಗಳನ್ನು ನಿತ್ಯವೆಂದೂ, ಅನಾತ್ಮವನ್ನು ಆತ್ಮನೆಂದೂ, ದುಃಖವನ್ನು ಸುಖವೆಂದೂ ನಾನು ಭಾವಿಸಿದ್ದೇನೆ. ಅಜ್ಞಾನವಶದಿಂದ ಸಾಂಸಾರಿಕ ಸುಖ-ದುಃಖಗಳೇ ಮೊದಲಾದ ದ್ವಂದ್ವಗಳಲ್ಲಿ ಬಿದ್ದ ನಾನು ನಿಜವಾಗಿ ಪ್ರಿಯನಾಗಿರುವ ನಿನ್ನನ್ನೇ ಮರೆತಿದ್ದೇನೆ. ॥ ೨೫ ॥ ಅಜ್ಞಾನಿಯಾದವನೊಬ್ಬನು ಸರೋವರದಲ್ಲಿ ನೀರಿನಿಂದಲೇ ಹುಟ್ಟಿದ ಪಾಚಿಯಿಂದ ಮರೆಯಾದ ನೀರನ್ನು ಗುರುತಿಸಲಾರದೆ, ಬಿಸಿಲ್ಗುದುರೆಯಿಂದ ದೂರದಲ್ಲಿ ನೀರಿನಂತೆ ಕಾಣುವ ಮರೀಚಿಕೆಯನ್ನು ಅರಸಿ ಹೋಗುವಂತೆಯೇ, ನಾನು ನಿನ್ನ ಮಾಯೆಯಿಂದ ಆವೃತನಾಗಿ ಹತ್ತಿರದಲ್ಲಿರುವ ಆನಂದಕಂದನಾದ ನಿನ್ನನ್ನು ಗುರುತಿಸಲಾರದೆ ನಿನ್ನಿಂದ ಪರಾಙ್ಮುಖನಾಗಿದ್ದೇನೆ. ॥ ೨೬ ॥ ಅತ್ಯಂತ ದುರ್ಬಲವಾದ ಬುದ್ಧಿಯುಳ್ಳ ನಾನು ಅತ್ಯಂತ ಬಲವತ್ತರವಾದ ಇಂದ್ರಿಯಗಳಿಂದ ಯದ್ವಾ-ತದ್ವಾ ಸೆಳೆಯಲ್ಪಡುತ್ತಿರುವ, ಕಾಮ ಕರ್ಮಗಳಿಂದ ಕೆಡಿಸಲ್ಪಟ್ಟಿರುವ ಮನಸ್ಸನ್ನು ತಡೆಗಟ್ಟಲು ಅಸಮರ್ಥನಾಗಿದ್ದೇನೆ. ॥ ೨೭ ॥

ಸೋಽಹಂ ತವಾಂಘ್ರ್ಯುಪಗತೋಽಸ್ಮ್ಯಸತಾಂ ದುರಾಪಂ
ತಚ್ಚಾಪ್ಯಹಂ ಭವದನುಗ್ರಹ ಈಶ ಮನ್ಯೇ ।
ಪುಂಸೋ ಭವೇದ್ಯರ್ಹಿ ಸಂಸರಣಾಪವರ್ಗ-
ಸ್ತ್ವಯ್ಯಬ್ಜನಾಭ ಸದುಪಾಸನಯಾ ಮತಿಃ ಸ್ಯಾತ್ ॥ ೨೮ ॥

ಹೀಗೆ ಅಲೆಯುತ್ತಿರುವ ನಾನು – ದುಷ್ಟರಿಗೆ ದುರ್ಲಭವಾದ ನಿನ್ನ ಚರಣಕಮಲಗಳ ಛತ್ರಛಾಯೆಯನ್ನು ಪಡೆದಿದ್ದೇನೆ. ಸ್ವಾಮಿಯೇ! ಇದನ್ನು ನಿನ್ನ ಕೃಪಾಪ್ರಸಾದವೆಂದೇ ತಿಳಿಯುತ್ತೇನೆ. ಏಕೆಂದರೆ, ಪದ್ಮನಾಭನೇ! ಜೀವನಿಗೆ ಸಂಸಾರದಿಂದ ಮುಕ್ತನಾಗುವ ಸಮಯ ಒದಗಿದಾಗ ಸತ್ಪುರುಷರ ಉಪಾಸನೆಯಿಂದ ಚಿತ್ತವೃತ್ತಿಯು ನಿನ್ನಲ್ಲಿ ತೊಡಗುವುದು. ॥ ೨೮ ॥ ಪ್ರಭೋ! ನೀನು ಕೇವಲ ವಿಜ್ಞಾನ ಸ್ವರೂಪನೂ, ವಿಜ್ಞಾನಘನನೂ ಆಗಿರುವೆ. ಕಂಡು ಬರುವ ವೃತ್ತಿಗಳಿಗೆಲ್ಲ ನೀನೆ ಕಾರಣನೂ, ಅಧಿಷ್ಠಾನನೂ ಆಗಿರುವೆ. ಜೀವಿಯ ಸ್ವರೂಪದಲ್ಲಿ ಮತ್ತು ಜೀವಿಗಳ ಸುಖ-ದುಃಖಾದಿಗಳ ನಿಮಿತ್ತ, ಕಾಲ, ಕರ್ಮ, ಸ್ವಭಾವ ಹಾಗೂ ಪ್ರಕೃತಿಯ ರೂಪದಲ್ಲಿಯೂ ನೀನೇ ಇರುವೆ. ಅವುಗಳ ನಿಯಾಮಕನೂ ನೀನೇ ಆಗಿರುವೆ. ಅನಂತ ಶಕ್ತಿಯುಳ್ಳ ನೀನು ಸಾಕ್ಷಾತ್ ಬ್ರಹ್ಮವೇ ಆಗಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೯ ॥ ಪ್ರಭೋ! ನೀನೇ ವಾಸುದೇವನು. ಸಮಸ್ತ ಜೀವರ ಆಶ್ರಯನಾದ ಸಂಕರ್ಷಣನು ನೀನೇ. ಬುದ್ಧಿ ಮತ್ತು ಮನಸ್ಸಿನ ಅಧಿಷ್ಠಾತೃ ದೇವತೆ ಹೃಷೀಕೇಶನೂ (ಪ್ರದ್ಯುಮ್ನ ಮತ್ತು ಅನಿರುದ್ಧ) ನೀನೇ. ನಾನು ಬಾರಿ-ಬಾರಿಗೂ ನಿನಗೆ ನಮಸ್ಕರಿಸುತ್ತೇನೆ. ಪ್ರಭುವೇ! ಶರಣಾಗತನಾದ ನನ್ನನ್ನು ರಕ್ಷಿಸು. ॥ ೩೦ ॥

ನಮೋ ವಿಜ್ಞಾನಮಾತ್ರಾಯ ಸರ್ವಪ್ರತ್ಯಯಹೇತವೇ ।
ಪುರುಷೇಶಪ್ರಧಾನಾಯ ಬ್ರಹ್ಮಣೇಽನಂತಶಕ್ತಯೇ ॥ ೨೯ ॥

ನಮಸ್ತೇ ವಾಸುದೇವಾಯ ಸರ್ವಭೂತಕ್ಷಯಾಯ ಚ ।
ಹೃಷೀಕೇಶ ನಮಸ್ತುಭ್ಯಂ ಪ್ರಪನ್ನಂ ಪಾಹಿ ಮಾಂ ಪ್ರಭೋ ॥ ೩೦ ॥

ನಲವತ್ತನೆಯ ಅಧ್ಯಾಯವು ಮುಗಿಯಿತು. ॥ ೪೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ
ಪೂರ್ವಾರ್ಧೇ ಅಕ್ರೂರಸ್ತುತಿರ್ನಾಮ ಚತ್ವಾರಿಂಶೋಽಧ್ಯಾಯಃ ॥ ೪೦ ॥

# ನಲವತ್ತೊಂದನೆಯ ಅಧ್ಯಾಯ

## ಮಥುರೆಗೆ ಶ್ರೀಕೃಷ್ಣನ ಪ್ರವೇಶ

*ಶ್ರೀಶುಕ ಉವಾಚ*

ಸ್ತುವತಸ್ತಸ್ಯ ಭಗವಾನ್ ದರ್ಶಯಿತ್ವಾ ಜಲೇ ವಪುಃ ।
ಭೂಯಃ ಸಮಾಹರತ್ ಕೃಷ್ಣೋ ನಟೋ ನಾಟ್ಯಮಿವಾತ್ಮನಃ ॥ ೧ ॥

ಸೋಽಪಿ ಚಾಂತರ್ಹಿತಂ ವೀಕ್ಷ್ಯ ಜಲಾದುನ್ಮಜ್ಜ್ಯ ಸತ್ವರಃ ।
ಕೃತ್ವಾ ಚಾವಶ್ಯಕಂ ಸರ್ವಂ ವಿಸ್ಮಿತೋ ರಥಮಾಗಮತ್ ॥ ೨ ॥

ತಮಪೃಚ್ಛದ್ಧೃಷೀಕೇಶಃ ಕಿಂ ತೇ ದೃಷ್ಟಮಿಹಾದ್ಭುತಮ್ ।
ಭೂಮೌ ವಿಯತಿ ತೋಯೇ ವಾ ತಥಾ ತ್ವಾಂ ಲಕ್ಷಯಾಮಹೇ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಹೀಗೆ ಅನನ್ಯ ಭಕ್ತಿಯಿಂದ ಸ್ತೋತ್ರಮಾಡುತ್ತಿದ್ದ ಅಕ್ರೂರನಿಗೆ ನೀರಿನಲ್ಲಿ ತನ್ನ ದಿವ್ಯವಾದ ಸ್ವರೂಪವನ್ನು ತೋರಿಸಿ, ಮರುಕ್ಷಣದಲ್ಲೇ ನಟನು ನಾಟಕವಾಡಿ ತೆರೆಯ ಹಿಂದೆ ಸರಿಯುವಂತೆ ಭಗವಂತನು ಪುನಃ ಶ್ರೀಕೃಷ್ಣನಾಗಿಯೇ ಅಕ್ರೂರನಿಗೆ ಕಾಣಿಸಿಕೊಂಡನು. ॥ ೧ ॥ ಭಗವಂತನ ಆ ದಿವ್ಯರೂಪವು ಅಂತರ್ಧಾನವಾದುದನ್ನು ಕಂಡ ಅಕ್ರೂರನು ನೀರಿನಿಂದ ಹೊರಬಂದು, ಆವಶ್ಯಕವೆನಿಸಿದ ನಿತ್ಯಕರ್ಮಗಳನ್ನು ಬೇಗ-ಬೇಗನೆ ಪೂರೈಸಿಕೊಂಡು ಶೀಘ್ರವಾಗಿ ರಥದಲ್ಲಿ ಬಂದು ಕುಳಿತನು. ಆಗ ಅವನು ಅತ್ಯಂತ ವಿಸ್ಮಿತನಾಗಿದ್ದನು. ॥ ೨ ॥ ಭಗವಾನ್ ಶ್ರೀಕೃಷ್ಣನು ಅವನಲ್ಲಿ ಕೇಳಿದನು – ಚಿಕ್ಕಪ್ಪ! ನೀನು ಭೂಮಿಯಲ್ಲಾಗಲೀ, ಆಕಾಶದಲ್ಲಾಗಲೀ, ನೀರಿನಲ್ಲಾಗಲೀ ಏನಾದರೂ ಅದ್ಭುತವಾದ ವಸ್ತುವನ್ನು ಕಂಡೆಯಾ? ಏಕೆಂದರೆ, ನಿನ್ನ ಮುಖಾವಲೋಕನದಿಂದ ಹಾಗೆ ತಿಳಿಯುತ್ತಾ ಇದೆ. ॥ ೩ ॥

ಅಕ್ರೂರ ಉವಾಚ

**ಅದ್ಭುತಾನೀಹ ಯಾವಂತಿ ಭೂಮೌ ವಿಯತಿ ವಾ ಜಲೇ ।**
**ತ್ವಯಿ ವಿಶ್ವಾತ್ಮಕೇ ತಾನಿ ಕಿಂ ಮೇಽದೃಷ್ಟಂ ವಿಪಶ್ಯತಃ**
**॥ ೪ ॥**

**ಯತ್ರಾದ್ಭುತಾನಿ ಸರ್ವಾಣಿ ಭೂಮೌ ವಿಯತಿ ವಾ ಜಲೇ ।**
**ತಂ ತ್ವಾನುಪಶ್ಯತೋ ಬ್ರಹ್ಮನ್ ಕಿಂ ಮೇ ದೃಷ್ಟಮಿಹಾದ್ಭುತಮ್**
**॥ ೫ ॥**

**ಇತ್ಯುಕ್ತ್ವಾ ಚೋದಯಾಮಾಸ ಸ್ಯಂದನಂ ಗಾಂದಿನೀಸುತಃ ।**
**ಮಥುರಾಮನಯದ್ರಾಮಂ ಕೃಷ್ಣಂ ಚೈವ ದಿನಾತ್ಯಯೇ**
**॥ ೬ ॥**

**ಮಾರ್ಗೇ ಗ್ರಾಮಜನಾ ರಾಜನ್ಸ್ತತ್ರ ತತ್ರೋಪಸಂಗತಾಃ ।**
**ವಸುದೇವಸುತೌ ವೀಕ್ಷ್ಯ ಪ್ರೀತಾ ದೃಷ್ಟಿಂ ನ ಚಾದದುಃ**
**॥ ೭ ॥**

**ತಾವದ್ವ್ರಜೌಕಸಸ್ತತ್ರ ನಂದಗೋಪಾದಯೋಽಗ್ರತಃ ।**
**ಪುರೋಪವನಮಾಸಾದ್ಯ ಪ್ರತೀಕ್ಷಂತೋಽವತಸ್ಥಿರೇ**
**॥ ೮ ॥**

**ತಾನ್ ಸಮೇತ್ಯಾಹ ಭಗವಾನಕ್ರೂರಂ ಜಗದೀಶ್ವರಃ ।**
**ಗೃಹೀತ್ವಾ ಪಾಣಿನಾ ಪಾಣಿಂ ಪ್ರಶ್ರಿತಂ ಪ್ರಹಸನ್ನಿವ**
**॥ ೯ ॥**

**ಭವಾನ್ ಪ್ರವಿಶತಾಮಗ್ರೇ ಸಹಯಾನಃ ಪುರೀಂ ಗೃಹಮ್ ।**
**ವಯಂ ತ್ವಿಹಾವಮುಚ್ಯಾಥ ತತೋ ದ್ರಕ್ಷ್ಯಾಮಹೇ ಪುರೀಮ್**
**॥ ೧೦ ॥**

ಅಕ್ರೂರ ಉವಾಚ

**ನಾಹಂ ಭವದ್ಭ್ಯಾಂ ರಹಿತಃ ಪ್ರವೇಕ್ಷ್ಯೇ ಮಥುರಾಂ ಪ್ರಭೋ ।**
**ತ್ಯಕ್ತುಂ ನಾರ್ಹಸಿ ಮಾಂ ನಾಥ ಭಕ್ತಂ ತೇ ಭಕ್ತವತ್ಸಲ**
**॥ ೧೧ ॥**

**ಆಗಚ್ಛ ಯಾಮ ಗೇಹಾನ್ನಃ ಸನಾಥಾನ್ ಕುರ್ವಧೋಕ್ಷಜ ।**
**ಸಹಾಗ್ರಜಃ ಸಗೋಪಾಲೈಃ ಸುಹೃದ್ಭಿಶ್ಚ ಸುಹೃತ್ತಮ**
**॥ ೧೨ ॥**

**ಪುನೀಹಿ ಪಾದರಜಸಾ ಗೃಹಾನ್ನೋ ಗೃಹಮೇಧಿನಾಮ್ ।**
**ಯಚ್ಛೌಚೇನಾನುತೃಪ್ಯಂತಿ ಪಿತರಃ ಸಾಗ್ನಯಃ ಸುರಾಃ**
**॥ ೧೩ ॥**

**ಅವನಿಜ್ಯಾಂಘ್ರಿಯುಗಲಮಾಸೀಚ್ಛ್ಲೋಕ್ಯೋ ಬಲಿರ್ಮಹಾನ್ ।**
**ಐಶ್ವರ್ಯಮತುಲಂ ಲೇಭೇ ಗತಿಂ ಚೈಕಾಂತಿನಾಂ ತು ಯಾ**
**॥ ೧೪ ॥**

**ಅಕ್ರೂರನು ಹೇಳಿದನು** – ಸ್ವಾಮಿಯೇ! ಪೃಥಿವಿ, ಆಕಾಶ, ನೀರು ಇವುಗಳಲ್ಲಿ ಮತ್ತು ಇಡೀ ಜಗತ್ತಿಲ್ಲಿ ಇರುವ ಅದ್ಭುತ ವಸ್ತುಗಳೆಲ್ಲವೂ ನಿನ್ನಲ್ಲಿಯೇ ಇದೆ. ಏಕೆಂದರೆ, ನೀನು ವಿಶ್ವರೂಪನಾಗಿರುವೆ. ನಾನು ನಿನ್ನನ್ನು ನೋಡುತ್ತಿರುವಾಗ ನಾನು ನೋಡದಿರುವ ಯಾವ ಅದ್ಭುತವಸ್ತು ತಾನೇ ಉಳಿದೀತು ? ॥ ೪ ॥ ಭಗವಂತಾ! ಪೃಥಿವಿಯಲ್ಲಾಗಲೀ, ನೀರಿನಲ್ಲಾಗಲೀ, ಆಕಾಶದಲ್ಲಾಗಲೀ ಇರುವ ಅದ್ಭುತ ವಸ್ತುಗಳೆಲ್ಲವೂ ನೆಲೆಸಿರುವ ನಿನ್ನನ್ನೇ ನಾನು ನೋಡುತ್ತಿದ್ದೇನೆ. ಹಾಗಿರುವಾಗ ನಾನು ಬೇರೆಯಾದ ಅದ್ಬುತವಸ್ತುವನ್ನು ನೋಡಬೇಕಾಗಿದೆಯೇ ? ॥ ೫ ॥ ಗಾಂದಿನೀ ನಂದನನಾದ ಅಕ್ರೂರನು ಹೀಗೆ ಹೇಳಿ ರಥವನ್ನು ನಡೆಸುತ್ತಾ ಭಗವಾನ್ ಶ್ರೀಕೃಷ್ಣನನ್ನು ಮತ್ತು ಬಲರಾಮರನನ್ನು ಕರೆದುಕೊಂಡು ಸಾಯಂಕಾಲವಾಗುತ್ತಿದ್ದಂತೆ ಮಥುರೆಗೆ ತಲುಪಿದನು. ॥ ೬ ॥ ಪರೀಕ್ಷಿತನೇ! ದಾರಿಯಲ್ಲಿ ಅಲ್ಲಲ್ಲಿ ಹಳ್ಳಿಯ ಜನರು ಭಗವಾನ್ ಶ್ರೀಕೃಷ್ಣ-ಬಲರಾಮರನ್ನು ನೋಡಲು ಗುಂಪು-ಗುಂಪಾಗಿ ಬಂದು ಅವನನ್ನು ನೋಡಿ ಆನಂದಿತರಾಗುತ್ತಿದ್ದರು. ಅವರು ನೆಟ್ಟ ನೋಟದಿಂದ ಅವರನ್ನೇ ನೋಡುತ್ತಾ ಧನ್ಯತೆಯನ್ನು ಪಡೆಯುತ್ತಿದ್ದರು. ಶ್ರೀಕೃಷ್ಣನನ್ನು ನೋಡುತ್ತಾ ಅವರು ತಮ್ಮ ದೃಷ್ಟಿಯನ್ನು ಬೇರೆಡೆಗೆ ಕದಲಿಸದೇ ಹೋದರು. ॥ ೭ ॥ ನಂದಗೋಪನೇ ಮೊದಲಾದ ವ್ರಜವಾಸಿಗಳು ಮೊದಲೇ ಮಥುರೆಗೆ ತಲುಪಿ ಊರಿನ ಹೊರಗಿನ ಉದ್ಯಾನದಲ್ಲಿ ಬೀಡುಬಿಟ್ಟು ರಾಮ-ಕೃಷ್ಣರ ಪ್ರತೀಕ್ಷೆ ಮಾಡುತ್ತಿದ್ದರು. ॥ ೮ ॥ ಅವರ ಬಳಿಗೆ ತಲುಪುತ್ತಲೇ ಜಗದೀಶ್ವರನಾದ ಶ್ರೀಕೃಷ್ಣನು ರಥದಿಂದಿಳಿದು, ನಿಂತಿರುವ ಅಕ್ರೂರನ ಕೈಯನ್ನು ಹಿಡಿದುಕೊಂಡು ಮುಗುಳ್ನಗುತ್ತಾ ಇಂತೆಂದನು. ॥ ೯ ॥ ಚಿಕ್ಕಪ್ಪನವರೇ! ನೀವು ರಥದೊಂದಿಗೆ ಮುಂದಾಗಿ ಮಥುರೆಯನ್ನು ಪ್ರವೇಶಿಸಿ ತಮ್ಮ ಮನೆಗೆ ಹೋಗಿರಿ. ನಾವು ಮೊದಲಿಗೆ ಇಲ್ಲಿ ತಂಗಿ, ಮತ್ತೆ ನಗರವನ್ನು ನೋಡಲು ಬರುವೆವು. ॥ ೧೦ ॥

**ಅಕ್ರೂರನು ಹೇಳಿದನು** – ಪ್ರಭುವೇ! ನಿಮ್ಮಿಬ್ಬರನ್ನು ಬಿಟ್ಟು ನಾನು ಮಥುರೆಯನ್ನು ಪ್ರವೇಶಿಸಲಾರೆನು. ಸ್ವಾಮಿ! ನಾನು ನಿನ್ನ ಭಕ್ತನಾಗಿರುವೆನು. ಭಕ್ತವತ್ಸಲನಾದ ನೀನು ನನ್ನ ಕೈ ಬಿಡ ಬೇಡ. ॥ ೧೧ ॥ ಭಗವಂತ! ಅಧೋಕ್ಷಜನೇ! ಸುಹೃತ್ತಮನೇ! ನೀನು ನಿನ್ನಣ್ಣ ಬಲರಾಮನೊಡಗೊಂಡು, ನಂದಗೋಪನೇ ಮೊದಲಾದ ಗೋಪಾಲಕರೊಂದಿಗೆ ನಮ್ಮ ಮನೆಗೆ ಬನ್ನಿರಿ. ॥ ೧೨ ॥ ನಾವು ಗೃಹಸ್ಥರು. ನಿನ್ನ ಚರಣಕಮಲಗಳ ಧೂಳಿನಿಂದ ನಮ್ಮ ಮನೆಯನ್ನು ಪವಿತ್ರಗೊಳಿಸು. ನಿನ್ನ ದಿವ್ಯವಾದ ಚರಣಗಳನ್ನು ತೊಳೆಯುವುದರಿಂದ ಅಗ್ನಿಗಳೂ, ದೇವತೆಗಳೂ, ಪಿತೃಗಳೂ, ತೃಪ್ತರಾಗುತ್ತಾರೆ. ॥ ೧೩ ॥ ಪ್ರಭೋ! ಸತ್ಪುರುಷರು ಸದಾಕಾಲ ಕೊಂಡಾಡುತ್ತಿರುವ ನಿನ್ನ ಚರಣಯುಗಳಗಳನ್ನು ತೊಳೆಯುವುದರಿಂದ ಬಲಿಯು ಪುಣ್ಯಶ್ಲೋಕನೆಂಬ ಕೀರ್ತಿಯನ್ನು ಪಡೆದನು. ಕೀರ್ತಿಯೇ ಅಲ್ಲ - ಅನನ್ಯ ಪ್ರೇಮಿ ಭಕ್ತರಿಗೆ ದೊರೆಯುವಂತಹ ಅತುಲನೀಯ ಐಶ್ವರ್ಯವೂ, ಸದ್ಗತಿಯೂ ದೊರೆಯಿತು. ॥ ೧೪ ॥

ಆಪಸ್ತೇಽಂಘ್ರ್ಯವನೇಜನ್ಯಸ್ತ್ರೀನ್
ಲೋಕಾನ್ ಶುಚಯೋಽಪುನನ್ ।
ಶಿರಸಾಧತ್ತ ಯಾಃ ಶರ್ವಃ
ಸ್ವರ್ಯಾತಾಃ ಸಗರಾತ್ಮಜಾಃ ॥ ೧೫ ॥

ದೇವದೇವ ಜಗನ್ನಾಥ ಪುಣ್ಯಶ್ರವಣಕೀರ್ತನ ।
ಯದೂತ್ತಮೋತ್ತಮಶ್ಲೋಕ ನಾರಾಯಣ ನಮೋಽಸ್ತು ತೇ
॥ ೧೬ ॥

*ಶ್ರೀಭಗವಾನುವಾಚ*

ಆಯಾಸ್ಯೇ ಭವತೋ ಗೇಹಮಹಮಾರ್ಯಸಮನ್ವಿತಃ ।
ಯದುಚಕ್ರದ್ರುಹಂ ಹತ್ವಾ ವಿತರಿಷ್ಯೇ ಸುಹೃತ್ಪ್ರಿಯಮ್
॥ ೧೭ ॥

*ಶ್ರೀಶುಕ ಉವಾಚ*

ಏವಮುಕ್ತೋ ಭಗವತಾ ಸೋಽಕ್ರೂರೋ ವಿಮನಾ ಇವ ।
ಪುರೀಂ ಪ್ರವಿಷ್ಟಃ ಕಂಸಾಯ ಕರ್ಮಾವೇದ್ಯ ಗೃಹಂ ಯಯೌ
॥ ೧೮ ॥

ಅಥಾಪರಾಹ್ಣೇ ಭಗವಾನ್ ಕೃಷ್ಣಃ ಸಂಕರ್ಷಣಾನ್ವಿತಃ ।
ಮಥುರಾಂ ಪ್ರಾವಿಶದ್ಗೋಪೈರ್ದಿದೃಕ್ಷುಃ ಪರಿವಾರಿತಃ
॥ ೧೯ ॥

ದದರ್ಶ ತಾಂ ಸ್ಫಾಟಿಕತುಂಗಗೋಪುರ-
ದ್ವಾರಾಂ ಬೃಹದ್ಧೇಮಕಪಾಟತೋರಣಾಮ್ ।
ತಾಮ್ರಾರಕೋಷ್ಠಾಂ ಪರಿಖಾದುರಾಸದಾ-
ಮುದ್ಯಾನರಮ್ಯೋಪವನೋಪಶೋಭಿತಾಮ್ ॥ ೨೦ ॥

ಸೌವರ್ಣಶೃಂಗಾಟಕಹರ್ಮ್ಯನಿಷ್ಕುಟೈಃ
ಶ್ರೇಣೀಸಭಾಭಿರ್ಭವನೈರುಪಸ್ಕೃತಾಮ್ ।
ವೈದೂರ್ಯವಜ್ರಾಮಲನೀಲವಿದ್ರುಮೈ-
ರ್ಮುಕ್ತಾಹರಿದ್ಭಿರ್ವಲಭೀಷು ವೇದಿಷು ॥ ೨೧ ॥

ಜುಷ್ಟೇಷು ಜಾಲಾಮುಖರಂಧ್ರಕುಟ್ಟಿಮೇ-
ಷ್ವಾವಿಷ್ಟಪಾರಾವತಬರ್ಹಿನಾದಿತಾಮ್ ।
ಸಂಸಿಕ್ತರಥ್ಯಾಪಣಮಾರ್ಗಚತ್ವರಾಂ
ಪ್ರಕೀರ್ಣಮಾಲ್ಯಾಂಕುರಲಾಜತಂಡುಲಾಮ್ ॥ ೨೨ ॥

ನಿನ್ನ ಚರಣೋದಕವಾದ ಗಂಗೆಯು ಮೂರು ಲೋಕಗಳನ್ನೇ ಪವಿತ್ರಗೊಳಿಸಿರುವಳು. ನಿಜವಾಗಿಯೂ ಅದು ಪವಿತ್ರತೆಯ ಮೂರ್ತಿಮಂತ ಸ್ವರೂಪನೇ ಆಗಿದೆ. ಅದರ ಸ್ಪರ್ಶದಿಂದಲೆ ಸಗರನ ಪುತ್ರರಿಗೆ ಸದ್ಗತಿ ಪ್ರಾಪ್ತವಾಯಿತು. ಅದೇ ಜಲವನ್ನು ಸಾಕ್ಷಾತ್ ಶಂಕರನು ತನ್ನ ಶಿರದಲ್ಲಿ ಧರಿಸಿರುವನು. ॥ ೧೫ ॥ ಜಗನ್ನಾಥನೇ! ದೇವದೇವನೇ! ನಿನ್ನ ಗುಣ-ಲೀಲೆಗಳ ಶ್ರವಣ-ಕೀರ್ತನೆಯು ಪರಮ ಮಂಗಳಪ್ರದವಾಗಿದೆ. ಸ್ತೋತ್ತಮರು ನಿನ್ನ ಗುಣಗಳನ್ನು ಕೀರ್ತಿಸುತ್ತಾ ಇರುತ್ತಾರೆ. ನಾರಾಯಣನೇ! ನಾನು ನಿನಗೆ ನಮಸ್ಕರಿಸುತ್ತೇನೆ. ॥ ೧೬ ॥

**ಶ್ರೀಭಗವಂತನು ಹೇಳಿದನು** - ಅಕ್ರೂರನೇ! ಮೊದಲಿಗೆ ಯದುವಂಶೀಯರಿಗೆ ದ್ರೋಹವೆಸಗಿರುವ ಕಂಸನನ್ನು ಸಂಹರಿಸಿ ಸುಹೃದ್-ಜನರೆಲ್ಲರಿಗೆ ಸಂತೋಷವನ್ನುಂಟುಮಾಡಿದ ಬಳಿಕ ಬಲರಾಮ, ನಂದರಾಜರೇ ಮೊದಲಾದವರೊಡನೆ ನಿನ್ನ ಮನೆಗೆ ಬರುತ್ತೇನೆ. ನೀನು ನಿರಾತಂಕವಾಗಿ ಮಥುರೆಯನ್ನು ಪ್ರವೇಶಿಸು. ॥ ೧೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಂತನು ಹೀಗೆ ಹೇಳಿದಾಗ ಅಕ್ರೂರನು ಮನಸ್ಸಿಲ್ಲದ ಮನಸ್ಸಿನಿಂದ ಮಥುರೆಯನ್ನು ಪ್ರವೇಶಿಸಿ, ಕಂಸನಲ್ಲಿ ಬಲರಾಮ-ಕೃಷ್ಣರು ಬಂದಿರುವ ಸಮಾಚಾರವನ್ನು ತಿಳಿಸಿ, ತನ್ನ ಮನೆಗೆ ತೆರಳಿದನು. ॥ ೧೮ ॥ ಮರುದಿನ ಅಪರಾಹ್ನ ಸಮಯದಲ್ಲಿ ಶ್ರೀಕೃಷ್ಣನು ಬಲರಾಮ ಮತ್ತು ಗೋಪಬಾಲಕರೊಂದಿಗೆ ಮಥುರಾ ಪಟ್ಟಣವನ್ನು ನೋಡಲು ನಗರವನ್ನು ಪ್ರವೇಶಿಸಿದನು. ॥ ೧೯ ॥ ಭಗವಾನ್ ಶ್ರೀಕೃಷ್ಣನು ನೋಡುತ್ತಾನೆ-ಸ್ಫಟಿಕಶಿಲಾಮಯವಾದ ಹೆಬ್ಬಾಗಿಲಿನಿಂದಲೂ, ಎತ್ತರವಾದ ಗೋಪುರಗಳಿಂದಲೂ, ದೊಡ್ಡದಾದ ಬಾಗಿಲುಗಳಿಂದಲೂ ಕೂಡಿತ್ತು ಆ ನಗರವು. ಅಲ್ಲಿಯ ಕಿಡಕಿಗಳು ಚಿನ್ನದಿಂದ ಮಾಡಿದ್ದು, ಹೆಬ್ಬಾಗಿಲುಗಳಿಗೆ ಚಿನ್ನದ ತೋರಣಗಳಿದ್ದವು. ನಗರದ ಸುತ್ತಲೂ ತಾಮ್ರ ಮತ್ತು ಹಿತ್ತಾಳೆಯ ಪ್ರಾಕಾರಗಳಿದ್ದು, ಸುತ್ತಲಿದ್ದ ಕಂದಕಗಳಿಂದಾಗಿ ನಗರವನ್ನು ಸುಲಭವಾಗಿ ಪ್ರವೇಶಿಸಲಾಗುತ್ತಿರಲಿಲ್ಲ. ಅಲ್ಲಲ್ಲಿ ಸುಂದರವಾದ ಉದ್ಯಾನವನಗಳು, ರಮಣೀಯ ಉಪವನಗಳೂ ಶೋಭಿಸುತ್ತಿದ್ದವು. ॥ ೨೦ ॥ ಅಲ್ಲಿ ಸುವರ್ಣದಿಂದ ಅಲಂಕೃತವಾದ ಚೌಕಗಳಿದ್ದು, ಧನಿಕರ ಸೌಧಗಳು ಇದ್ದವು. ಜೊತೆಗೆ ಹೂದೋಟಗಳೂ, ಪ್ರಜಾವರ್ಗದ ಸಭಾಭವನಗಳೂ, ಸಾಮಾನ್ಯ ಜನರು ವಾಸಿಸುವ ಭವನಗಳಿಂದಲೂ ಸಮಲಂಕೃತವಾಗಿತ್ತು. ವಜ್ರ, ವೈಡೂರ್ಯ, ನೀಲ, ಹವಳ, ಪಚ್ಚೆ ಮುಂತಾದವುಗಳಿಂದ ಸಮಲಂಕೃತವಾದ ಚಾವಣಿಗಳೂ, ಜಗುಲಿಗಳೂ ಇದ್ದವು. ರತ್ನ ಖಚಿತವಾದ ಕಿಟಕಿಗಳಲ್ಲಿಯೂ ಜಗುಲಿಗಳಲ್ಲಿಯೂ ಕುಳಿತು ಕಪೋತ ಪಾರಿವಾಳ ಪಕ್ಷಿಗಳೂ, ನವಿಲುಗಳೂ ಧ್ವನಿಮಾಡುತ್ತಿದ್ದವು. ರಸ್ತೆಗಳನ್ನೂ, ಅಂಗಡಿ ಬೀದಿಗಳನ್ನು, ರಾಜಮಾರ್ಗಗಳನ್ನು, ಚೌಕಗಳನ್ನು ಚೆನ್ನಾಗಿ ಗುಡಿಸಿ ಸಾರಿಸಿದ್ದರು. ಅಲ್ಲಲ್ಲಿ ಹೂವಿನ ಹಾರಗಳಿಂದಲೂ ಮೊಳಕೆ ಧಾನ್ಯಗಳಿಂದಲೂ, ಅರಳು-ಅಕ್ಷತೆಗಳಿಂದಲೂ ಅಲಂಕರಿಸಿದ್ದರು. ॥ ೨೧-೨೨ ॥

ಆಪೂರ್ಣಕುಂಭೈರ್ದಧಿಚಂದನೋಕ್ಷಿತೈಃ
ಪ್ರಸೂನದೀಪಾವಲಿಭಿಃ ಸಪಲ್ಲವೈಃ ।
ಸವೃಂದರಂಭಾಕ್ರಮುಕೈಃ ಸಕೇತುಭಿಃ
ಸ್ವಲಂಕೃತದ್ವಾರಗೃಹಾಂ ಸಪಟ್ಟಿಕೈಃ ॥ ೨೩ ॥

ತಾಂ ಸಂಪ್ರವಿಷ್ಟೌ ವಸುದೇವನಂದನೌ
ವೃತೌ ವಯಸ್ಯೈರ್ನರದೇವವರ್ತ್ಮನಾ ।
ದ್ರಷ್ಟುಂ ಸಮೀಯುಸ್ತ್ವರಿತಾಃ ಪುರಸ್ತ್ರಿಯೋ
ಹರ್ಮ್ಯಾಣಿ ಚೈವಾರುರುಹುರ್ನೃಪೋತ್ಸುಕಾಃ ॥ ೨೪ ॥

ಕಾಶ್ಚಿದ್ವಿಪರ್ಯಗ್ಧೃತವಸ್ತ್ರಭೂಷಣಾ
ವಿಸ್ಮೃತ್ಯ ಚೈಕಂ ಯುಗಲೇಷ್ವಥಾಪರಾಃ ।
ಕೃತೈಕಪತ್ರಶ್ರವಣೈಕನೂಪುರಾ
ನಾಂಕ್ತ್ವಾ ದ್ವಿತೀಯಂ ತ್ವಪರಾಶ್ಚ ಲೋಚನಮ್ ॥ ೨೫ ॥

ಅಶ್ನಂತ್ಯ ಏಕಾಸ್ತದಪಾಸ್ಯ ಸೋತ್ಸವಾ
ಅಭ್ಯಜ್ಯಮಾನಾ ಅಕೃತೋಪಮಜ್ಜನಾಃ ।
ಸ್ವಪಂತ್ಯ ಉತ್ಥಾಯ ನಿಶಮ್ಯ ನಿಃಸ್ವನಂ
ಪ್ರಪಾಯಯಂತ್ಯೋಽರ್ಭಮಪೋಹ್ಯ ಮಾತರಃ ॥ ೨೬ ॥

ಮನಾಂಸಿ ತಾಸಾಮರವಿಂದಲೋಚನಃ
ಪ್ರಗಲ್ಭಲೀಲಾಹಸಿತಾವಲೋಕನೈಃ ।
ಜಹಾರ ಮತ್ತದ್ವಿರದೇಂದ್ರವಿಕ್ರಮೋ
ದೃಶಾಂ ದದಚ್ಛ್ರೀರಮಣಾತ್ಮನೋತ್ಸವಮ್ ॥ ೨೭ ॥

ದೃಷ್ಟ್ವಾ ಮುಹುಃಶ್ರುತಮನುದ್ರುತಚೇತಸಸ್ತಂ
ತತ್ಪ್ರೇಕ್ಷಣೋತ್ಸ್ಮಿತಸುಧೋಕ್ಷಣಲಬ್ಧಮಾನಾಃ ।
ಆನಂದಮೂರ್ತಿಮುಪಗುಹ್ಯ ದೃಶಾಽಽತ್ಮಲಬ್ಧಂ
ಹೃಷ್ಯತ್ತ್ವಚೋ ಜಹುರನಂತಮರಿಂದಮಾಧಿಮ್ ॥ ೨೮ ॥

ಮನೆಗಳ ಬಾಗಿಲಲ್ಲಿ ಮೊಸರು, ಚಂದನಾದಿಗಳಿಂದ ಅಲಂಕರಿಸಿದ ನೀರಿನ ಕಲಶಗಳನ್ನು ಇಟ್ಟಿದ್ದರು. ಅವನ್ನು ಹೂವುಗಳಿಂದ, ದೀಪ, ಚಿಗುರುಗಳಿಂದ, ಗೊನೆಸಹಿತ ಬಾಳೆಯ ಕಂಬಗಳಿಂದ, ಅಡಿಕೆ ಮರಗಳ ಹೊಂಬಾಳೆಗಳಿಂದಲೂ, ಗಿಡಗಳಿಂದಲೂ, ರೇಷ್ಮೆ ವಸ್ತ್ರಗಳಿಂದಲೂ ಚೆನ್ನಾಗಿ ಅಲಂಕರಿಸಿದ್ದರು. ॥ ೨೩ ॥

ಪರೀಕ್ಷಿತನೇ! ವಸುದೇವನಂದನ ಭಗವಾನ್ ಶ್ರೀಕೃಷ್ಣನು ಬಲರಾಮ ಗೋಪಬಾಲಕರೊಂದಿಗೆ ಮಥುರೆಯ ರಾಜಬೀದಿಯ ಮೂಲಕ ನಗರವನ್ನು ಪ್ರವೇಶಿಸಿದನು. ಆ ಸಮಯದಲ್ಲಿ ನಗರದ ನಾರಿಯರು ಅತ್ಯಂತ ಉತ್ಸುಕತೆಯಿಂದ ಅವಸರ-ಆವಸರವಾಗಿ ಮಹಡಿಯನ್ನೇರಿ ನೋಡುತ್ತಾ ನಿಂತರು. ॥ ೨೪ ॥ ಕೃಷ್ಣ-ಬಲರಾಮರನ್ನು ನೋಡಬೇಕೆಂದು ಧಾವಿಸಿ ಬಂದವರಲ್ಲಿ ಕೆಲವರು ಅವಸರದಿಂದಾಗಿ ವಸ್ತ್ರಗಳನ್ನು, ಆಭರಣಗಳನ್ನು ಹಿಂದು ಮುಂದಾಗಿ ಧರಿಸಿದ್ದರು. ಕೆಲವರು ಜೋಡಿಯಾಗಿ ತೊಡಬೇಕಾದ ಕಂಕಣ ಕುಂಡಲಗಳನ್ನು ಒಂಟಿಯಾಗಿಯೇ ತೊಟ್ಟಿದ್ದರು. ಯಾರೋ ಒಬ್ಬಳು ಕಿವಿಗೆ ಕರ್ಣಪುಷ್ಪವನ್ನು ಧರಿಸಿದರೆ, ಮತ್ತೊಬ್ಬಳು ಒಂದೇ ಕಾಲಿಗೆ ನೂಪುರವನ್ನು ಧರಿಸಿದ್ದಳು. ಕೆಲವರು ಒಂದೆ ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಿದ್ದರೆ, ಮತ್ತೊಬ್ಬಳು ಕಾಡಿಗೆ ಹಚ್ಚಿಕೊಳ್ಳಲೇ ಇಲ್ಲ. ॥ ೨೫ ॥ ಕೆಲವು ಹೆಂಗಳೆಯರು ಊಟಮಾಡುತ್ತಿದ್ದರು. ಸುದ್ದಿ ತಿಳಿದಾಗ ಊಟವನ್ನು ಹಾಗೇ ಬಿಟ್ಟು ಕೈತೊಳೆಯದೆಯೇ ಓಡಿ ಬಂದಿದ್ದರು. ಎಲ್ಲರ ಮನಸ್ಸು ಆನಂದೋತ್ಸಾಹದಿಂದ ತುಂಬಿ ಹೋಗಿತ್ತು. ಕೆಲವರು ಅಂಗರಾಗವನ್ನು ಹಚ್ಚಿಕೊಳ್ಳುತ್ತಿದ್ದವರು ಸ್ನಾನ ಮಾಡದೇ ಹಾಗೇ ಬಂದಿದ್ದರು. ಮಲಗಿದ್ದ ಕೆಲವರು ಗದ್ದಲವನ್ನು ಕೇಳಿ ಹಾಗೆಯೇ ಬಂದಿದ್ದರು. ಮಕ್ಕಳಿಗೆ ಹಾಲು ಕುಡಿಸುತ್ತಿದ್ದ ಕೆಲವರು ಮಗುವನ್ನು ಅಲ್ಲೆ ಬಿಟ್ಟು ಶ್ರೀಕೃಷ್ಣನನ್ನು ನೋಡಲು ಆಗಮಿಸಿದ್ದರು. ॥ ೨೬॥ ಕಮಲನಯನ ಶ್ರೀಕೃಷ್ಣನು ಮತ್ತಗಜದಂತೆ ಠೀವಿಯಿಂದ ನಡೆದು ಬರುತ್ತಿದ್ದನು. ಮಹಾಲಕ್ಷ್ಮಿಗೂ ಆನಂದವನ್ನುಂಟು ಮಾಡುವ ತನ್ನ ವಿಗ್ರಹದಿಂದ ಮಥುರೆಯ ಸ್ತ್ರೀಯರ ಕಣ್ಣುಗಳಿಗೆ ಆನಂದೋತ್ಸವವನ್ನು ಉಂಟುಮಾಡುತ್ತಿದ್ದನು. ಪ್ರೌಢವಾದ ಹಾವ-ಭಾವಗಳಿಂದಲೂ, ಮುಗುಳ್ನಗೆಯಿಂದಲೂ, ಚೇತೋಹಾರಿಯಾದ ಕಡೆಗಣ್ಣ ನೋಟದಿಂದಲೂ ಅವರ ಮನಸ್ಸನ್ನು ಅಪಹರಿಸಿ ಬಿಟ್ಟಿದ್ದನು. ॥ ೨೭ ॥ ಮಥುರಾ ನಗರದ ಸ್ತ್ರೀಯರು ಅನೇಕ ದಿನಗಳಿಂದ ಭಗವಾನ್ ಶ್ರೀಕೃಷ್ಣನ ಅದ್ಭುತ ಲೀಲೆಗಳನ್ನು ಕೇಳುತ್ತಾ ಬಂದಿದ್ದರು. ಅವರ ಚಿತ್ತವು ಬಹಳ ಕಾಲದಿಂದ ಶ್ರೀಕೃಷ್ಣದರ್ಶನಕ್ಕಾಗಿ ಚಂಚಲವಾಗಿದ್ದು ವ್ಯಾಕುಲವಾಗಿತ್ತು. ಇಂದು ಅವನನ್ನು ನೋಡಿದರು. ಶ್ರೀಕೃಷ್ಣನೂ ಕೂಡ ತನ್ನ ಪ್ರೇಮಪೂರ್ಣ ಓರೆನೋಟದಿಂದ ನಸುನಗೆಯ ಅಮೃತ ಸಿಂಚನದಿಂದ ಅವರನ್ನು ಸಮ್ಮಾನಿಸಿದನು. ಪರೀಕ್ಷಿತನೇ! ಆ ಸ್ತ್ರೀಯರು ಕಣ್ಣುಗಳ ಮೂಲಕ ಭಗವಂತನನ್ನು ತಮ್ಮ ಹೃದಯದಲ್ಲಿ ಇಟ್ಟುಕೊಂಡು ಆನಂದಮಯ ಸ್ವರೂಪವನ್ನು ಆಲಿಂಗಿಸಿಕೊಂಡರು. ಅವರೆಲ್ಲರ ಶರೀರ ಪುಳಕಗೊಂಡಿತು ಹಾಗೂ ಬಹಳ ದಿನಗಳಿಂದಿದ್ದ ವಿರಹ ವ್ಯಥೆಯು ಶಾಂತವಾಯಿತು. ॥ ೨೮ ॥

ಪ್ರಾಸಾದಶಿಖರಾರೂಢಾಃ ಪ್ರೀತ್ಯುತ್ಫುಲ್ಲಮುಖಾಂಬುಜಾಃ ।
ಅಭ್ಯವರ್ಷನ್ ಸೌಮನಸ್ಯೈಃ ಪ್ರಮದಾ ಬಲಕೇಶವೌ
॥ ೨೯ ॥

ದಧ್ಯಕ್ಷತೈಃ ಸೋದಪಾತ್ರೈಃ ಸ್ರಗ್ಗಂಧೈರಭ್ಯುಪಾಯನೈಃ ।
ತಾವಾನರ್ಚುಃ ಪ್ರಮುದಿತಾಸ್ತತ್ರ ತತ್ರ ದ್ವಿಜಾತಯಃ
॥ ೩೦ ॥

ಊಚುಃ ಪೌರಾ ಅಹೋ ಗೋಪ್ಯಸ್ತಪಃ ಕಿಮಚರನ್ ಮಹತ್ ।
ಯಾ ಹ್ಯೇತಾವನುಪಶ್ಯಂತಿ ನರಲೋಕಮಹೋತ್ಸವೌ
॥ ೩೧ ॥

ರಜಕಂ ಕಂಚಿದಾಯಾಂತಂ ರಂಗಕಾರಂ ಗದಾಗ್ರಜಃ ।
ದೃಷ್ಟ್ವಾಯಾಚತ ವಾಸಾಂಸಿ ಧೌತಾನ್ಯತ್ಯುತ್ತಮಾನಿ ಚ
॥ ೩೨ ॥

ದೇಹ್ಯಾವಯೋಃ ಸಮುಚಿತಾನ್ಯಂಗ ವಾಸಾಂಸಿ ಚಾರ್ಹತೋಃ ।
ಭವಿಷ್ಯತಿ ಪರಂ ಶ್ರೇಯೋ ದಾತುಸ್ತೇ ನಾತ್ರ ಸಂಶಯಃ
॥ ೩೩ ॥

ಸ ಯಾಚಿತೋ ಭಗವತಾ ಪರಿಪೂರ್ಣೇನ ಸರ್ವತಃ ।
ಸಾಕ್ಷೇಪಂ ರುಷಿತಃ ಪ್ರಾಹ ಭೃತ್ಯೋ ರಾಜ್ಞಃ ಸುದುರ್ಮದಃ
॥ ೩೪ ॥

ಈದೃಶಾನ್ಯೇವ ವಾಸಾಂಸಿ ನಿತ್ಯಂ ಗಿರಿವನೇಚರಾಃ ।
ಪರಿಧತ್ತ ಕಿಮುದ್ವೃತ್ತಾ ರಾಜದ್ರವ್ಯಾಣ್ಯಭೀಪ್ಸಥ
॥ ೩೫ ॥

ಯಾತಾಶು ಬಾಲಿಶಾ ಮೈವಂ ಪ್ರಾರ್ಥ್ಯಂ ಯದಿ ಜಿಜೀವಿಷಾ ।
ಬಧ್ನಂತಿ ಘ್ನಂತಿ ಲುಂಪಂತಿ ದೃಪ್ತಂ ರಾಜಕುಲಾನಿ ವೈ
॥ ೩೬ ॥

ಏವಂ ವಿಕತ್ಥಮಾನಸ್ಯ ಕುಪಿತೋ ದೇವಕೀಸುತಃ ।
ರಜಕಸ್ಯ ಕರಾಗ್ರೇಣ ಶಿರಃ ಕಾಯಾದಪಾತಯತ್
॥ ೩೭ ॥

ತಸ್ಯಾನುಜೀವಿನಃ ಸರ್ವೇ ವಾಸಃ ಕೋಶಾನ್ ವಿಸೃಜ್ಯ ವೈ ।
ದುದ್ರುವುಃ ಸರ್ವತೋ ಮಾರ್ಗಂ ವಾಸಾಂಸಿ ಜಗೃಹೇಽಚ್ಯುತಃ
॥ ೩೮ ॥

ವಸಿತ್ವಾಽಽತ್ಮಪ್ರಿಯೇ ವಸ್ತ್ರೇ ಕೃಷ್ಣಃ ಸಂಕರ್ಷಣಸ್ತಥಾ ।
ಶೇಷಾಣ್ಯಾದತ್ತ ಗೋಪೇಭ್ಯೋ ವಿಸೃಜ್ಯ ಭುವಿ ಕಾನಿಚಿತ್
॥ ೩೯ ॥

ಮಥುರೆಯ ನಾರಿಯರು ತಮ್ಮ-ತಮ್ಮ ಮನೆಗಳ ಮಹಡಿಗಳನ್ನು ಹತ್ತಿ ಬಲರಾಮ-ಶ್ರೀಕೃಷ್ಣರ ಮೇಲೆ ಹೂವಿನ ಮಳೆಗರೆದರು. ಆಗ ಆ ಸ್ತ್ರೀಯರ ಮುಖಕಮಲಗಳು ಪ್ರೇಮಾವೇಗದಿಂದ ಅರಳಿದ್ದವು. ॥ ೨೯ ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಲ್ಲರೂ ಅಲ್ಲಲ್ಲಿ ಮೊಸರು, ಅಕ್ಷತೆ, ನೀರುತುಂಬಿದ ಕಲಶಗಳಿಂದ ಪುಷ್ಪಹಾರಗಳಿಂದ, ಚಂದನಾದಿ ಕಾಣಿಕೆ ಸಾಮಗ್ರಿಗಳಿಂದ ಭಗವಾನ್ ಶ್ರೀಕೃಷ್ಣ ಬಲರಾಮರನ್ನು ಆನಂದಮಗ್ನರಾಗಿ ಪೂಜಿಸಿದರು.॥ ೩೦॥ ಭಗವಂತನನ್ನು ನೋಡಿದ ಪುರವಾಸಿಗಳೆಲ್ಲರೂ – 'ಧನ್ಯ ! ಧನ್ಯ !! ಸಕಲ ಮನುಷ್ಯರಿಗೆ ಪರಮಾನಂದವನ್ನೀಯುವ ಇವರಿಬ್ಬರನ್ನು ನೋಡುತ್ತಿದ್ದ ಗೋಪಿಯರು ಯಾವ ಮಹಾನ್ ತಪಸ್ಸು ಮಾಡಿದ್ದರೋ !' ಎಂದು ಪರಸ್ಪರ ಮಾತನಾಡಿಕೊಂಡರು. ॥ ೩೧ ॥

ಅದೇ ಸಮಯದಲ್ಲಿ ಬಟ್ಟೆಗಳಿಗೆ ಬಣ್ಣ ಹಾಕುವ ಕೆಲಸವನ್ನು ಮಾಡುತ್ತಿದ್ದ ಒಬ್ಬ ಅಗಸರವನು ತಮ್ಮ ಕಡೆಗೆ ಬರುತ್ತಿರುವುದನ್ನು ಭಗವಾನ್ ಶ್ರೀಕೃಷ್ಣನು ನೋಡಿದನು. ಕೃಷ್ಣನು ಅವನ ಬಳಿ ಮಡಿಮಾಡಿದ ಒಳ್ಳೆಯ ಬಟ್ಟೆಗಳನ್ನು ಉಡಲು ಕೇಳಿದನು. ॥ ೩೨ ॥ ಅಯ್ಯಾ ! ನಮ್ಮಿಬ್ಬರಿಗೂ ತೊಡಲು ಯೋಗ್ಯವಾದ ಬಟ್ಟೆಗಳನ್ನು ಕೊಡು. ರಾಜಯೋಗ್ಯವಾದ ಈ ಬಟ್ಟೆಗಳನ್ನು ತೊಟ್ಟುಕೊಳ್ಳಲು ನಾವು ಅರ್ಹರಾಗಿದ್ದೇವೆ. ನೀನು ನಮಗೆ ಈ ವಸ್ತ್ರಗಳನ್ನು ಕೊಟ್ಟರೆ ನಿನಗೆ ಬಹಳ ಶ್ರೇಯಸ್ಸು ಉಂಟಾದೀತು. ಇದರಲ್ಲಿ ಸಂಶಯವೇ ಇಲ್ಲ. ॥ ೩೩ ॥ ಪರೀಕ್ಷಿತನೇ ! ಭಗವಂತನು ಸರ್ವತ್ರ ಪರಿಪೂರ್ಣನಾಗಿದ್ದಾನೆ. ಎಲ್ಲವೂ ಅವನದ್ದೇ ಆಗಿದೆ. ಹೀಗಿದ್ದರೂ ಅವನು ಹೀಗೆ ಯಾಚಿಸುವ ಲೀಲೆಯನ್ನು ತೋರಿದನು. ಆದರೆ ಅವನು ಮೂರ್ಖರಾಜನಾದ ಕಂಸನ ಸೇವಕನಾಗಿದ್ದು ಸೊಕ್ಕಿ ಹೋಗಿದ್ದನು. ಭಗವಂತನಿಗೆ ಕೊಡುವುದು ಹಾಗಿರಲಿ, ಅವನು ಸಿಟ್ಟಿನಿಂದ ಆಕ್ಷೇಪಿಸುತ್ತಾ ಹೇಳುತ್ತಾನೆ. ॥೩೪ ॥ ಕಾಡು-ಮೇಡುಗಳಲ್ಲಿ ಸದಾ ಸಂಚರಿಸುವ ನೀವುಗಳು ಪ್ರತಿದಿನವೂ ಇಂತಹ ಬಟ್ಟೆಗಳನ್ನು ಉಡುವಿರಾ ? ಉದ್ದಟರಾಗಿರುವ ನೀವು ಈ ರೀತಿ ಬಾಯಿಗೆ ಬಂದ ಹಾಗೆ ಗಳಹುತ್ತಿರುವಿ. ರಾಜನ ವಸ್ತ್ರಗಳನ್ನು ಅಪಹರಿಸುವ ಅಪೇಕ್ಷೆಯೇ ? ॥ ೩೫ ॥ ಎಲೈ ಮೂರ್ಖರೇ ! ಹೋಗಿ, ಓಡಿ ಹೋಗಿ ! ಕೆಲವು ದಿನ ಬದುಕುಳಿಯಬೇಕಿದ್ದರೆ ಹೀಗೆ ಕೇಳಬೇಡಿರಿ. ರಾಜಭಟರು ನಿಮ್ಮಂತಹ ಕೊಬ್ಬಿರುವವರನ್ನು ಬಂಧಿಸುತ್ತಾರೆ, ಕೊಂದು ಹಾಕುತ್ತಾರೆ. ಅವರಲ್ಲಿರುವ ಸರ್ವಸ್ವವನ್ನು ಕಿತ್ತುಕೊಳ್ಳುವರು. ॥ ೩೬ ॥ ಆ ಮಡಿವಾಳನ ಮಿತಿಮೀರಿದ ತಲೆಹರಟೆಯ ಮಾತನ್ನು ಕೇಳಿದಾಗ ಭಗವಾನ್ ಶ್ರೀಕೃಷ್ಣನು ಕೊಂಚ ಕುಪಿತನಾಗಿ ಕೈಯಿಂದ ಒಂದು ಏಟು ಹೊಡೆದು ತಲೆಯನ್ನು ದೇಹದಿಂದ ಬೇರ್ಪಡಿಸಿದನು. ॥ ೩೭ ॥ ಇದನ್ನು ನೋಡಿದ ಆ ಅಗಸನ ಅನುಯಾಯಿಗಳು ಬಟ್ಟೆಗಳ ಮೂಟೆಯನ್ನು ಅಲ್ಲೇ ಬಿಸುಟು ದಿಕ್ಕಾಪಾಲಾಗಿ ಓಡಿಹೋದರು. ಭಗವಂತನು ಆ ವಸ್ತ್ರಗಳನ್ನು ಎತ್ತಿಕೊಂಡನು. ॥ ೩೮ ॥ ಶ್ರೀಕೃಷ್ಣ-ಬಲರಾಮರು ತಮಗೆ ಪ್ರಿಯವೆನಿಸಿದ ವಸ್ತ್ರಗಳನ್ನು ಉಟ್ಟುಕೊಂಡರು. ಉಳಿದ ಬಟ್ಟೆಗಳನ್ನು ಜೊತೆಯವರಾದ ಗೋಪಬಾಲಕರಿಗೆ ಹಂಚಿದರು ಹಾಗೂ ಉಳಿದವುಗಳನ್ನು ಅಲ್ಲೇ ಬಿಟ್ಟು ಮುಂದಕ್ಕೆ ನಡೆದರು. ॥ ೩೯ ॥

ತತಸ್ತು ವಾಯಕಃ ಪ್ರೀತಸ್ತಯೋರ್ವೇಷಮಕಲ್ಪಯತ್ ।
ವಿಚಿತ್ರವರ್ಣೈಶ್ಚೈಲೇಯೈರಾಕಲ್ಪೈರನುರೂಪತಃ
॥ ೪೦ ॥

ನಾನಾಲಕ್ಷಣವೇಷಾಭ್ಯಾಂ ಕೃಷ್ಣರಾಮೌ ವಿರೇಜತುಃ ।
ಸ್ವಲಂಕೃತೌ ಬಾಲಗಜೌ ಪರ್ವಣೀವ ಸಿತೇತರೌ
॥ ೪೧ ॥

ತಸ್ಯ ಪ್ರಸನ್ನೋ ಭಗವಾನ್ ಪ್ರಾದಾತ್ ಸಾರೂಪ್ಯಮಾತ್ಮನಃ ।
ಶ್ರಿಯಂ ಚ ಪರಮಾಂ ಲೋಕೇ ಬಲೈಶ್ವರ್ಯಸ್ಮೃತೀಂದ್ರಿಯಮ್
॥ ೪೨ ॥

ತತಃ ಸುದಾಮ್ನೋ ಭವನಂ ಮಾಲಾಕಾರಸ್ಯ ಜಗ್ಮತುಃ ।
ತೌ ದೃಷ್ಟ್ವಾ ಸ ಸಮುತ್ಥಾಯ ನನಾಮ ಶಿರಸಾ ಭುವಿ
॥ ೪೩ ॥

ತಯೋರಾಸನಮಾನೀಯ ಪಾದ್ಯಂ ಚಾರ್ಘ್ಯಾರ್ಹಣಾದಿಭಿಃ ।
ಪೂಜಾಂ ಸಾನುಗಯೋಶ್ಚಕ್ರೇ ಸ್ರಕ್‌ತಾಂಬೂಲಾನುಲೇಪನೈಃ
॥ ೪೪ ॥

ಪ್ರಾಹ ನಃ ಸಾರ್ಥಕಂ ಜನ್ಮ ಪಾವಿತಂ ಚ ಕುಲಂ ಪ್ರಭೋ ।
ಪಿತೃದೇವರ್ಷಯೋ ಮಹ್ಯಂ ತುಷ್ಟಾ ಹ್ಯಾಗಮನೇನ ವಾಮ್
॥ ೪೫ ॥

ಭವಂತೌ ಕಿಲ ವಿಶ್ವಸ್ಯ ಜಗತಃ ಕಾರಣಂ ಪರಮ್ ।
ಅವತೀರ್ಣಾವಿಹಾಂಶೇನ ಕ್ಷೇಮಾಯ ಚ ಭವಾಯ ಚ
॥ ೪೬ ॥

ನ ಹಿ ವಾಂ ವಿಷಮಾ ದೃಷ್ಟಿಃ ಸುಹೃದೋರ್ಜಗದಾತ್ಮನೋಃ ।
ಸಮಯೋಃ ಸರ್ವಭೂತೇಷು ಭಜಂತಂ ಭಜತೋರಪಿ
॥ ೪೭ ॥

ತಾವಾಜ್ಞಾಪಯತಂ ಭೃತ್ಯಂ ಕಿಮಹಂ ಕರವಾಣಿ ವಾಮ್ ।
ಪುಂಸೋಽತ್ಯನುಗ್ರಹೋ ಹ್ಯೇಷ ಭವದ್ಭಿರ್ಯನ್ನಿಯುಜ್ಯತೇ
॥ ೪೮ ॥

ಇತ್ಯಭಿಪ್ರೇತ್ಯ ರಾಜೇಂದ್ರ ಸುದಾಮಾ ಪ್ರೀತಮಾನಸಃ ।
ಶಸ್ತೈಃ ಸುಗಂಧೈಃ ಕುಸುಮೈರ್ಮಾಲಾ ವಿರಚಿತಾ ದದೌ
॥ ೪೯ ॥

ಭಗವಾನ್ ಶ್ರೀಕೃಷ್ಣನು ಮತ್ತು ಬಲರಾಮರು ರಾಜಬೀದಿಯಲ್ಲಿ ಸ್ವಲ್ಪ ದೂರ ಹೋಗುತ್ತಲೇ ಅವರಿಗೆ ಓರ್ವ ದರ್ಜಿ ಭೆಟ್ಟಿಯಾದನು. ಭಗವಂತನ ಅನುಪಮ ಸೌಂದರ್ಯವನ್ನು ನೋಡಿ ಅವನಿಗೆ ತುಂಬಾ ಸಂತೋಷವಾಯಿತು. ಅವನು ಆ ಬಣ್ಣ-ಬಣ್ಣದ ಸುಂದರ ವಸ್ತ್ರಗಳನ್ನು ಅವರವರ ಶರೀರಕ್ಕೆ ಹೊಂದುವಂತೆ ಸರಿಪಡಿಸಿ ಸಿಂಗರಿಸಿದನು. ॥ ೪೦ ॥ ವಿಧ-ವಿಧವಾದ ವಸ್ತ್ರಗಳಿಂದ ವಿಭೂಷಿತರಾದ ಸಹೋದರರಿಬ್ಬರೂ ಇನ್ನೂ ಹೆಚ್ಚು ಶೋಭಿಸತೊಡಗಿದರು. ಉತ್ಸವದ ಸಮಯದಲ್ಲಿ ಸಿಂಗರಿಸಲ್ಪಟ್ಟ ಕರಿಯ ಮತ್ತು ಬಿಳಿಯ ಆನೆಯ ಮರಿಗಳಂತೆ ಅವರು ಕಂಡುಬರುತ್ತಿದ್ದರು. ॥ ೪೧ ॥ ಭಗವಾನ್ ಶ್ರೀಕೃಷ್ಣನು ಆ ದರ್ಜಿಯ ಮೇಲೆ ಅತ್ಯಂತ ಪ್ರಸನ್ನನಾದನು. ಅವನು ಅವನಿಗೆ ಇಹದಲ್ಲಿ ಐಶ್ವರ್ಯವನ್ನು, ಬಲವನ್ನೂ, ಅಧಿಕಾರವನ್ನೂ, ಸ್ಮರಣ ಶಕ್ತಿಯನ್ನೂ, ಇಂದ್ರಿಯ ಪಟುತ್ವವನ್ನು ಅನುಗ್ರಹಿಸಿ, ಅವಸಾನಾನಂತರ ತನ್ನ ಸಾರೂಪ್ಯಮುಕ್ತಿಯನ್ನು ಕರುಣಿಸಿದನು. ॥ ೪೨ ॥

ಬಳಿಕ ಭಗವಾನ್ ಶ್ರೀಕೃಷ್ಣನು ಸುದಾಮನೆಂಬ ಹೂವಾಡಿಗನ ಮನೆಗೆ ಹೋದನು. ಜಗದಾನಂದಕರರಾದ ಸಹೋದರರಿಬ್ಬರನ್ನು ನೋಡುತ್ತಲೇ ಸುದಾಮನು ಎದ್ದುನಿಂತು ತಲೆಬಾಗಿ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೪೩ ॥ ಮತ್ತೆ ಅವರನ್ನು ಆಸನದಲ್ಲಿ ಕುಳ್ಳಿರಿಸಿ ಅವರ ಕೈ-ಕಾಲು ತೊಳೆದು ಗೋಪಬಾಲಕರು ಸೇರಿ ಎಲ್ಲರನ್ನು ಹೂವಿನಹಾರ, ತಾಂಬೂಲ-ಚಂದನಾದಿಗಳಿಂದ ಯಥೋಚಿತವಾಗಿ ಪೂಜಿಸಿದನು. ॥ ೪೪ ॥ ಬಳಿಕ ಎರಡೂ ಕೈಗಳನ್ನು ಜೋಡಿಸಿಕೊಂಡು ಪ್ರಾರ್ಥಿಸಿದನು – ಸ್ವಾಮಿ! ನಿಮ್ಮಿಬ್ಬರ ಶುಭಾಗಮನದಿಂದ ನಮ್ಮ ಜನ್ಮ ಪಾವನವಾಯಿತು. ನಮ್ಮ ಕುಲಪವಿತ್ರವಾಯಿತು. ಇಂದು ನಾನು ದೇವ-ಋಷಿ-ಪಿತೃ ಇವರ ಋಣದಿಂದ ಮುಕ್ತನಾದೆನು. ಅವರು ನಮ್ಮ ಮೇಲೆ ಸಂತುಷ್ಟರಾದರು. ॥ ೪೫ ॥ ನೀವಿಬ್ಬರೂ ಜಗತ್ತಿನ ಪರಮಕಾರಣರಾಗಿದ್ದೀರಿ. ನೀವು ಪ್ರಪಂಚದ ಅಭ್ಯುದಯ (ಉನ್ನತಿ) ಮತ್ತು ನಿಃಶ್ರೇಯಸ (ಮೋಕ್ಷ)ಗಳಿಗೆ ಈ ಭೂಮಿಯಲ್ಲಿ ತಮ್ಮ ಜ್ಞಾನ, ಬಲ ಮೊದಲಾದ ಅಂಶಗಳಿಂದ ಅವತರಿಸಿರುವಿರಿ. ॥ ೪೬ ॥ ನೀವು ಪ್ರೇಮಿಸುವವರನ್ನು ಪ್ರೇಮಿಸುವವರೂ, ಭಜಿಸುವವರನ್ನು ಭಜಿಸುವವರೂ ಆಗಿದ್ದರೂ ನಿಮ್ಮ ದೃಷ್ಟಿಯಲ್ಲಿ ವಿಷಮತೆ ಇಲ್ಲ. ಏಕೆಂದರೆ, ನೀವು ಸಮಸ್ತ ಜಗತ್ತಿನ ಪರಮ ಸುಹೃದರೂ, ಆತ್ಮವೂ ಆಗಿರುವಿರಿ. ನೀವು ಸಮಸ್ತ ಪ್ರಾಣಿ-ಪದಾರ್ಥಗಳಲ್ಲಿ ಸಮರೂಪದಿಂದ ನೆಲೆಸಿರುವಿರಿ. ॥ ೪೭ ॥ ನಾನು ನಿಮ್ಮ ದಾಸನಾಗಿದ್ದೇನೆ. ನಾನು ನಿಮ್ಮಗಳ ಯಾವ ಸೇವೆಮಾಡಲಿ ಎಂಬುದನ್ನು ಆಜ್ಞಾಪಿಸಿರಿ. ಭಗವಂತ! ನೀನು ಜೀವಿಗಳಿಗೆ ಆಜ್ಞೆಯನ್ನಿತ್ತು, ಕಾರ್ಯದಲ್ಲಿ ತೊಡಗಿಸುವುದು ನಿನ್ನ ಮಹದನುಗ್ರಹವಾಗಿದೆ, ಪೂರ್ಣ ಕೃಪಾಪ್ರಸಾದವಾಗಿದೆ. ॥ ೪೮ ॥ ರಾಜೇಂದ್ರ! ಸುದಾಮ ಹೂವಾಡಿಗನು ಹೀಗೆ ಪ್ರಾರ್ಥನೆಗೈದು ಭಗವಂತನ ಅಭಿಪ್ರಾಯವನ್ನು ತಿಳಿದು, ಅತ್ಯಂತ ಪ್ರೇಮಾನಂದದಿಂದ ಸುಂದರವಾದ ಹಾಗೂ ಸುಂಗಧಿತವಾದ ಪುಷ್ಪಗಳ ಹಾರಗಳನ್ನು ಅವರಿಗೆ ತೊಡಿಸಿದನು. ॥ ೪೯ ॥

ತಾಭಿಃ ಸ್ವಲಂಕೃತೌ ಪ್ರೀತೌ ಕೃಷ್ಣರಾಮೌ ಸಹಾನುಗೌ ।
ಪ್ರಣತಾಯ ಪ್ರಪನ್ನಾಯ ದದತುರ್ವರದೌ ವರಾನ್
॥ ೫೦ ॥

ಗೋಪಾಲಬಾಲಕರು ಹಾಗೂ ಬಲರಾಮನೊಂದಿಗೆ ಭಗವಾನ್ ಶ್ರೀಕೃಷ್ಣನು ಆ ಸುಂದರವಾದ ಮಾಲೆಗಳಿಂದ ಅಲಂಕೃತನಾಗಿ, ವರದಾಯಕನಾದ ಪ್ರಭುವು ಪ್ರಸನ್ನನಾಗಿ ಶರಣಾಗತನೂ, ವಿನೀತನೂ ಆದ ಸುದಾಮನಿಗೆ ಶ್ರೇಷ್ಠವಾದ ವರವನ್ನು ಕರುಣಿಸಿದನು. ॥ ೫೦ ॥ ಸುದಾಮ ಹೂವಾಡಿಗನು 'ನನಗೆ ಅವಿಚಲ ಭಕ್ತಿಯುಂಟಾಗಲಿ. ನಿನ್ನ ಭಕ್ತರೊಂದಿಗೆ ನನಗೆ ಸೌಹಾರ್ದ್ರ ಮಿತ್ರತೆಯ ಸಂಬಂಧ ಉಂಟಾಗಲಿ ಮತ್ತು ಸಮಸ್ತ ಪ್ರಾಣಿಗಳ ಕುರಿತು ಅಹೈತುಕವಾದ ದಯಾಭಾವವು ಇರಲಿ' ಎಂಬ ವರವನ್ನು ಬೇಡಿದನು. ॥ ೫೧ ॥ ಭಗವಾನ್ ಶ್ರೀಕೃಷ್ಣನು ಸುದಾಮನು ಬೇಡಿದ ವರವನ್ನು ಕೊಡುವುದರ ಜೊತೆಗೆ ವಂಶ ಪಾರಂಪರ್ಯದೊಂದಿಗೆ ಹೆಚ್ಚುತ್ತಿರುವ ಅತುಲ ಸಂಪತ್ತನ್ನೂ ಹಾಗೂ ಬಲ, ಆಯುಸ್ಸು, ಕೀರ್ತಿ, ಕಾಂತಿ ಇವುಗಳನ್ನು ಕರುಣಿಸಿದನು. ಬಳಿಕ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ಅಲ್ಲಿಂದ ಬೀಳ್ಕೊಂಡನು. ॥ ೫೨ ॥

ಸೋಽಪಿ ವವ್ರೇಽಚಲಾಂ ಭಕ್ತಿಂ ತಸ್ಮಿನ್ನೇವಾಖಿಲಾತ್ಮನಿ ।
ತದ್ಭಕ್ತೇಷು ಚ ಸೌಹಾರ್ದಂ ಭೂತೇಷು ಚ ದಯಾಂ ಪರಾಮ್
॥ ೫೧ ॥

ಇತಿ ತಸ್ಮೈ ವರಂ ದತ್ತ್ವಾ ಶ್ರಿಯಂ ಚಾನ್ವಯವರ್ಧಿನೀಮ್ ।
ಬಲಮಾಯುರ್ಯಶಃ ಕಾಂತಿಂ ನಿರ್ಜಗಾಮ ಸಹಾಗ್ರಜಃ
॥ ೫೨ ॥

ನಲವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೪೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ
ಪೂರ್ವಾರ್ಧೇ ಪುರಪ್ರವೇಶೋ ನಾಮ ಏಕಚತ್ವಾರಿಂಶೋಽಧ್ಯಾಯಃ ॥ ೪೧ ॥

# ನಲವತ್ತೆರಡನೆಯ ಅಧ್ಯಾಯ

## ಕುಬ್ಜೆಯ ಮೇಲೆ ಕೃಪೆ, ಧನುರ್ಭಂಗ, ಕಂಸನ ತಳಮಳ

*ಶ್ರೀಶುಕ ಉವಾಚ*

ಅಥ ವ್ರಜನ್ ರಾಜಪಥೇನ ಮಾಧವಃ
ಸ್ತ್ರಿಯಂ ಗೃಹೀತಾಂಗವಿಲೇಪಭಾಜನಾಮ್ ।
ವಿಲೋಕ್ಯ ಕುಬ್ಜಾಂ ಯುವತೀಂ ವರಾನನಾಂ
ಪಪ್ರಚ್ಛ ಯಾಂತೀಂ ಪ್ರಹಸನ್ ರಸಪ್ರದಃ ॥ ೧ ॥

ಕಾ ತ್ವಂ ವರೋರ್ವೇತದು ಹಾನುಲೇಪನಂ
ಕಸ್ಯಾಂಗನೇ ವಾ ಕಥಯಸ್ವ ಸಾಧು ನಃ ।
ದೇಹ್ಯಾವಯೋರಂಗವಿಲೇಪಮುತ್ತಮಂ
ಶ್ರೇಯಸ್ತತಸ್ತೇ ನಚಿರಾದ್ಭವಿಷ್ಯತಿ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಅನಂತರ ಭಗವಾನ್ ಶ್ರೀಕೃಷ್ಣನು ತನ್ನ ಸಂಗಡಿಗರೊಂದಿಗೆ ರಾಜಬೀದಿಯಲ್ಲಿ ಬರುತ್ತಿರುವಾಗ ಓರ್ವ ಯುವತಿಯನ್ನು ನೋಡಿದನು. ಆಕೆಯ ಮುಖವು ಸುಂದರವಾಗಿದ್ದರೂ ಶರೀರದಿಂದ ಕುಳ್ಳಾಗಿದ್ದಳು. ಇದರಿಂದ ಅವಳನ್ನು ಕುಬ್ಜೆ ಎಂದೇ ಕರೆಯುತ್ತಿದ್ದರು. ಆಕೆಯು ಕೈಯಲ್ಲಿ ಗಂಧದ ಪಾತ್ರೆಯನ್ನು ಹಿಡಿದುಕೊಂಡಿದ್ದಳು. ಪ್ರೇಮರಸವನ್ನು ದಾನಮಾಡುವುದಕ್ಕಾಗಿ ಭಗವಾನ್ ಶ್ರೀಕೃಷ್ಣನು ಕುಬ್ಜೆಯ ಮೇಲೆ ಕೃಪೆ ತೋರಲು ನಗುತ್ತಾ ಆಕೆಯನ್ನು ಪ್ರಶ್ನಿಸಿದನು. ॥ ೧ ॥ ಎಲೈ ಸುಂದರಿಯೇ! ನೀನು ಯಾರು? ಈ ಗಂಧವನ್ನು ಯಾರಿಗಾಗಿ ಕೊಂಡುಹೋಗುತ್ತಿರುವೆ? ಕಲ್ಯಾಣಿ! ಎಲ್ಲವನ್ನು ಯಥಾವತ್ತಾಗಿ ಹೇಳು. ಈ ಉತ್ತಮವಾದ ಗಂಧವನ್ನೂ, ಅಂಗರಾಗವನ್ನು ನಮಗೆ ಕೊಟ್ಟು ಬಿಡು. ಇದರಿಂದ ಶೀಘ್ರವಾಗಿ ನಿನಗೆ ಪರಮ ಶ್ರೇಯಸ್ಸು ಉಂಟಾದೀತು. ॥ ೨ ॥

*ಸೈರಂಧ್ರ್ಯುವಾಚ*

ದಾಸ್ಯಸ್ಮ್ಯಹಂ ಸುಂದರ ಕಂಸಸಮ್ಮತಾ
ತ್ರಿವಕ್ರನಾಮಾ ಹ್ಯನುಲೇಪಕರ್ಮಣಿ ।
ಮದ್ಭಾವಿತಂ ಭೋಜಪತೇರತಿಪ್ರಿಯಂ
ವಿನಾ ಯುವಾಂ ಕೋಽನ್ಯತಮಸ್ತದರ್ಹತಿ ॥ ೩ ॥

**ಸೈರಂಧ್ರಿಯಾದ ಕುಬ್ಜೆಯು ಹೇಳಿದಳು** – ಸುಂದರಾಂಗನೇ! ನಾನು ಕಂಸನಿಗೆ ಪ್ರಿಯಳಾದ ದಾಸಿಯು. ಮಹಾರಾಜನು ನನ್ನನ್ನು ಬಹಳವಾಗಿ ಸಮ್ಮಾನಿಸುತ್ತಾನೆ. ತ್ರಿವಕ್ರಾ (ಕುಬ್ಜೆ) ಎಂಬುದು ನನ್ನ ಹೆಸರು. ನಾನು ರಾಜನಲ್ಲಿ ಗಂಧ, ಅಂಗರಾಗವನ್ನು ಹಚ್ಚುವ ಕೆಲಸ ಮಾಡುತ್ತಿದ್ದೇನೆ. ನಾನು ತಯಾರಿಸಿದ ಗಂಧ ಮತ್ತು ಅಂಗರಾಗವು

ರೂಪಪೇಶಲಮಾಧುರ್ಯಹಸಿತಾಲಾಪವೀಕ್ಷಿತೈಃ ।
ಧರ್ಷಿತಾತ್ಮಾ ದದೌ ಸಾಂದ್ರಮುಭಯೋರನುಲೇಪನಮ್
॥ ೪ ॥

ತತಸ್ತಾವಂಗರಾಗೇಣ ಸ್ವವರ್ಣೇತರಶೋಭಿನಾ ।
ಸಂಪ್ರಾಪ್ತಪರಭಾಗೇನ ಶುಶುಭಾತೇಽನುರಂಜಿತೌ
॥ ೫ ॥

ಪ್ರಸನ್ನೋ ಭಗವಾನ್ ಕುಬ್ಜಾಂ ತ್ರಿವಕ್ರಾಂ ರುಚಿರಾನನಾಮ್ ।
ಋಜ್ವೀಂ ಕರ್ತುಂ ಮನಶ್ಚಕ್ರೇ ದರ್ಶಯನ್ ದರ್ಶನೇ ಫಲಮ್
॥ ೬ ॥

ಪದ್ಭ್ಯಾಮಾಕ್ರಮ್ಯ ಪ್ರಪದೇ ದ್ವ್ಯಂಗುಲ್ಯುತ್ತಾನಪಾಣಿನಾ ।
ಪ್ರಗೃಹ್ಯ ಚುಬುಕೇಽಧ್ಯಾತ್ಮಮುದನೀನಮದಚ್ಯುತಃ
॥ ೭ ॥

ಸಾ ತದರ್ಜುಸಮಾನಾಂಗೀ ಬೃಹಚ್ಛ್ರೋಣಿಪಯೋಧರಾ ।
ಮುಕುಂದಸ್ಪರ್ಶನಾತ್ಸದ್ಯೋ ಬಭೂವ ಪ್ರಮದೋತ್ತಮಾ
॥ ೮ ॥

ತತೋ ರೂಪಗುಣೌದಾರ್ಯಸಂಪನ್ನಾ ಪ್ರಾಹ ಕೇಶವಮ್ ।
ಉತ್ತರೀಯಾಂತಮಾಕೃಷ್ಯ ಸ್ಮಯಂತೀ ಜಾತಹೃಚ್ಛಯಾ
॥ ೯ ॥

ಏಹಿ ವೀರ ಗೃಹಂ ಯಾಮೋ ನ ತ್ವಾಂ ತ್ಯಕ್ತುಮಿಹೋತ್ಸಹೇ ।
ತ್ವಯೋನ್ಮಥಿತಚಿತ್ತಾಯಾಃ ಪ್ರಸೀದ ಪುರುಷರ್ಷಭ
॥ ೧೦ ॥

ಏವಂ ಸ್ತ್ರಿಯಾ ಯಾಚ್ಯಮಾನಃ ಕೃಷ್ಣೋ ರಾಮಸ್ಯ ಪಶ್ಯತಃ ।
ಮುಖಂ ವೀಕ್ಷ್ಯಾನುಗಾನಾಂ ಚ ಪ್ರಹಸಂಸ್ತಾಮುವಾಚ ಹ
॥ ೧೧ ॥

ಏಷ್ಯಾಮಿ ತೇ ಗೃಹಂ ಸುಭ್ರೂಃ ಪುಂಸಾಮಾಧಿವಿಕರ್ಶನಮ್ ।
ಸಾಧಿತಾರ್ಥೋಽಗೃಹಾಣಾಂ ನಃ ಪಾಂಥಾನಾಂ ತ್ವಂ ಪರಾಯಣಮ್
॥ ೧೨ ॥

ವಿಸೃಜ್ಯ ಮಾಧ್ವ್ಯಾ ವಾಣ್ಯಾ ತಾಂ ವ್ರಜನ್ ಮಾರ್ಗೇ ವಣಿಕ್ಪಥೈಃ ।
ನಾನೋಪಾಯನತಾಂಬೂಲಸ್ರಗ್ಗಂಧೈಃ ಸಾಗ್ರಜೋಽರ್ಚಿತಃ
॥ ೧೩ ॥

ಭೋಜರಾಜ ಕಂಸನಿಗೆ ಅತ್ಯಂತ ಪ್ರಿಯವಾಗಿರುತ್ತದೆ. ಆದರೆ ಇಂತಹ ಅಮೋಘವಾದ ಚಂದವನ್ನು ಲೇಪಿಸಿಕೊಳ್ಳಲು ಅರ್ಹರಾದವರು ನಿಮ್ಮಿಬ್ಬರನ್ನುಳಿದು ಬೇರೆ ಯಾರೂ ಇರುವುದಿಲ್ಲ. ॥ ೩ ॥ ಭಗವಂತನ ಸೌಂದರ್ಯ, ಸೌಕುಮಾರ್ಯ, ರಸಿಕತೆ, ಮಂದ ಹಾಸ, ಪ್ರೇಮಾಲಾಪ ಮತ್ತು ಕುಡಿನೋಟದಿಂದ ಕದಡಿಹೋದ ಮನಸ್ಸಿನಿಂದ ಕೂಡಿದ್ದ ಕುಬ್ಜೆಯು ರಾಮ-ಕೃಷ್ಣರಿಗೆ ತಾನು ರಾಜನಿಗಾಗಿ ಸಿದ್ಧಪಡಿಸಿದ ಘಮ-ಘಮಿಸುತ್ತಿದ್ದ ಅಂಗರಾಗವನ್ನು ಸಮರ್ಪಿಸಿದಳು. ॥ ೪ ॥ ಅದನ್ನು ಸ್ವೀಕರಿಸಿದ ಶ್ರೀಕೃಷ್ಣನು ತನ್ನ ಶ್ಯಾಮಲ ಶರೀರಕ್ಕೆ ಹಳದಿ ಬಣ್ಣದ ಮತ್ತು ಬಲರಾಮನು ಕೆಂಪು ಬಣ್ಣದ ಅಂಗರಾಗವನ್ನು ಹಚ್ಚಿಕೊಂಡರು. ಹೊಕ್ಕುಳಿನಿಂದ ಮೇಲ್ಭಾಗದ ಶರೀರವನ್ನು ಅಲಂಕರಿಸಿಕೊಂಡು ಅತ್ಯಂತ ಶೋಭಾಯಮಾನರಾಗಿ ರಾರಾಜಿಸಿದರು. ॥ ೫ ॥ ಭಗವಾನ್ ಶ್ರೀಕೃಷ್ಣನು ಆ ಕುಬ್ಜೆಯ ಮೇಲೆ ಪ್ರಸನ್ನನಾಗಿ ತನ್ನ ದರ್ಶನದ ಪ್ರತ್ಯಕ್ಷ ಫಲವನ್ನು ತೋರಿಸಲಿಕ್ಕಾಗಿ ಶರೀರದಲ್ಲಿ ಮೂರುಕಡೆ ಡೊಂಕಾದ ಸುಂದರ ಮುಖವುಳ್ಳ ಆಕೆಯನ್ನು ನೇರವಾಗಿಸಲು ಯೋಚಿಸಿದನು. ॥ ೬ ॥ ಭಗವಂತನು ತನ್ನ ಕಾಲುಗಳಿಂದ ಕುಬ್ಜೆಯ ಕಾಲುಗಳನ್ನು ಒತ್ತಿ ಹಿಡಿದು, ತನ್ನ ಬಲಗೈಯ್ಯ ಎರಡು ಬೆರಳುಗಳಿಂದ ಆಕೆಯ ಗಲ್ಲವನ್ನು ಹಿಡಿದು ಸ್ವಲ್ಪ ಮೇಲಕ್ಕೆ ಎತ್ತಿದನು. ॥ ೭ ॥ ಕ್ಷಣ ಮಾತ್ರದಲ್ಲಿ ಆಕೆಯ ಶರೀರವು ನೆಟ್ಟಗಾಗಿ ಬಿಟ್ಟಿತು. ಕುಬ್ಜೆಯಾಗಿದ್ದ ಆಕೆಯು ಭಗವಂತನ ಸ್ಪರ್ಶಮಾತ್ರದಿಂದಲೇ ವಿಶಾಲವಾದ ನಿತಂಬದಿಂದ ಕೂಡಿದವಳೂ, ಪುಷ್ಟಸ್ತನಿಯೂ ಆಗಿ ರೂಪಲಾವಣ್ಯಗಳಿಂದ ಕಂಗೊಳಿಸುವ ಪ್ರಮದೋತ್ತಮೆಯಾದಳು. ॥ ೮ ॥

ಆ ಕ್ಷಣದಿಂದಲೇ ಕುಬ್ಜೆಯು ರೂಪ, ಗುಣ, ಔದಾರ್ಯಗಳಿಂದ ಸಂಪನ್ನಳಾಗಿ ಆಕೆಯ ಮನಸ್ಸಿನಲ್ಲಿ ಭಗವಂತನನ್ನು ಸೇರುವ ಕಾಮನೆ ಉಂಟಾಯಿತು. ಆಕೆಯು ಶ್ರೀಕೃಷ್ಣನ ಉತ್ತರೀಯವನ್ನು ಹಿಡಿದುಕೊಂಡು ಮುಗುಳ್ನಗುತ್ತಾ ಇಂತೆಂದಳು. ॥ ೯ ॥ ವೀರ ಶಿರೋಮಣಿಯೇ! ಬಾ, ನಮ್ಮ ಮನೆಗೆ ಹೋಗೋಣ, ಈಗ ನಾನು ನಿನ್ನನ್ನು ಇಲ್ಲಿ ಬಿಟ್ಟಿರಲಾರೆ. ಏಕೆಂದರೆ, ನನ್ನ ಚಿತ್ತವನ್ನು ನೀನು ಕದಡಿಬಿಟ್ಟಿರುವೆ. ಪುರುಷೋತ್ತಮನೇ! ದಾಸಿಯಾದ ನನ್ನ ಮೇಲೆ ಪ್ರಸನ್ನನಾಗು ॥ ೧೦ ॥ ಬಲರಾಮನ ಎದುರಿಗೆ ಕುಬ್ಜೆಯು ಹೀಗೆ ಪ್ರಾರ್ಥಿಸಿದಾಗ ಭಗವಾನ್ ಶ್ರೀಕೃಷ್ಣನು ತನ್ನ ಸಂಗಡಿಗರಾದ ಗೋಪಬಾಲಕರ ಕಡೆಗೆ ನೋಡಿ ನಸುನಗುತ್ತಾ ಆಕೆಯಲ್ಲಿ ಹೀಗೆಂದನು. ॥ ೧೧ ॥ ಸುಂದರೀ! ನಿನ್ನ ಮನೆಯು ಸಂಸಾರೀ ಜನರಿಗೆ ತಮ್ಮ ಮಾನಸಿಕ ವ್ಯಾಧಿಯನ್ನು ಕಳೆದುಕೊಳ್ಳುವ ಸಾಧನೆಯಾಗಿದೆ. ನಾನು ನನ್ನ ಕಾರ್ಯವನ್ನು ಪೂರ್ಣಗೊಳಿಸಿದ ಬಳಿಕ ಅವಶ್ಯಕವಾಗಿ ನಿನ್ನಲ್ಲಿಗೆ ಬರುವೆನು. ಮನೆ-ಮಠಗಳಿಲ್ಲದ ನಮ್ಮಂತಹ ದಾರಿಹೋಕರಿಗೆ ನಿಮ್ಮಂತಹವರ ಮನೆಯೇ ಆಸರೆಯಾಗಿದೆ. ॥ ೧೨ ॥ ಹೀಗೆ ಸವಿಯಾದ ಮಾತುಗಳನ್ನಾಡಿ ಶ್ರೀಕೃಷ್ಣನು ಆಕೆಯನ್ನು ಬೀಳ್ಕೊಟ್ಟನು. ಬಳಿಕ ಅವರು ಸಂತೆ ಬೀದಿಯಲ್ಲಿ ಬರುತ್ತಿರುವಾಗ ಅಲ್ಲಿಯ ವ್ಯಾಪಾರಿಗಳೆಲ್ಲರೂ ಒಟ್ಟಾಗಿ ಬಂದು ಬಲರಾಮ-ಕೃಷ್ಣರನ್ನು ಹೂವಿನಹಾರ, ತಾಂಬೂಲ, ಚಂದನಾದಿಗಳಿಂದ ಪೂಜಿಸಿ, ಬಗೆ-ಬಗೆಯ ಕಾಣಿಕೆಗಳನ್ನು ಅರ್ಪಿಸಿದರು. ॥ ೧೩ ॥

ತದ್ದರ್ಶನಸ್ಮರಕ್ಷೋಭಾದಾತ್ಮಾನಂ ನಾವಿದನ್ ಸ್ತ್ರಿಯಃ ।
ವಿಸ್ರಸ್ತವಾಸಃಕಬರವಲಯಾಲೇಖ್ಯಮೂರ್ತಯಃ
॥ ೧೪ ॥

ತತಃ ಪೌರಾನ್ ಪೃಚ್ಛಮಾನೋ ಧನುಷಃ ಸ್ಥಾನಮಚ್ಯುತಃ ।
ತಸ್ಮಿನ್ ಪ್ರವಿಷ್ಟೋ ದದೃಶೇ ಧನುರೈಂದ್ರಮಿವಾದ್ಭುತಮ್
॥ ೧೫ ॥

ಪುರುಷೈರ್ಬಹುಭಿರ್ಗುಪ್ತಮರ್ಚಿತಂ ಪರಮರ್ದ್ಧಿಮತ್ ।
ವಾರ್ಯಮಾಣೋ ನೃಭಿಃ ಕೃಷ್ಣಃ ಪ್ರಸಹ್ಯ ಧನುರಾದದೇ
॥ ೧೬ ॥

ಕರೇಣ ವಾಮೇನ ಸಲೀಲಮುದ್ಧೃತಂ
ಸಜ್ಯಂ ಚ ಕೃತ್ವಾ ನಿಮಿಷೇಣ ಪಶ್ಯತಾಮ್ ।
ನೃಣಾಂ ವಿಕೃಷ್ಯ ಪ್ರಬಭಂಜ ಮಧ್ಯತೋ
ಯಥೇಕ್ಷುದಂಡಂ ಮದಕರ್ಯುರುಕ್ರಮಃ ॥ ೧೭ ॥

ಧನುಷೋ ಭಜ್ಯಮಾನಸ್ಯ ಶಬ್ದಃ ಖಂ ರೋದಸೀ ದಿಶಃ ।
ಪೂರಯಾಮಾಸ ಯಂ ಶ್ರುತ್ವಾ ಕಂಸಸ್ತ್ರಾಸಮುಪಾಗಮತ್
॥ ೧೮ ॥

ತದ್ರಕ್ಷಿಣಃ ಸಾನುಚರಾಃ ಕುಪಿತಾ ಆತತಾಯಿನಃ ।
ಗೃಹೀತುಕಾಮಾ ಆವವ್ರುರ್ಗೃಹ್ಯತಾಂ ಬಧ್ಯತಾಮಿತಿ
॥ ೧೯ ॥

ಅಥ ತಾನ್ ದುರಭಿಪ್ರಾಯಾನ್ ವಿಲೋಕ್ಯ ಬಲಕೇಶವೌ ।
ಕ್ರುದ್ಧೌ ಧನ್ವನ ಆದಾಯ ಶಕಲೇ ತಾಂಶ್ಚ ಜಘ್ನತುಃ
॥ ೨೦ ॥

ಬಲಂ ಚ ಕಂಸಪ್ರಹಿತಂ ಹತ್ವಾ ಶಾಲಾಮುಖಾತ್ತತಃ ।
ನಿಷ್ಕ್ರಮ್ಯ ಚೇರತುರ್ಹೃಷ್ಟೌ ನಿರೀಕ್ಷ್ಯ ಪುರಸಂಪದಃ
॥ ೨೧ ॥

ತಯೋಸ್ತದದ್ಭುತಂ ವೀರ್ಯಂ ನಿಶಾಮ್ಯ ಪುರವಾಸಿನಃ ।
ತೇಜಃ ಪ್ರಾಗಲ್ಭ್ಯಂ ರೂಪಂ ಚ ಮೇನಿರೇ ವಿಬುಧೋತ್ತಮೌ
॥ ೨೨ ॥

ತಯೋರ್ವಿಚರತೋಃ ಸ್ವೈರಮಾದಿತ್ಯೋಽಸ್ತಮುಪೇಯಿವಾನ್ ।
ಕೃಷ್ಣರಾಮೌ ವೃತೌ ಗೋಪೈಃ ಪುರಾಚ್ಛಕಟಮೀಯತುಃ
॥ ೨೩ ॥

ಅವರಿಬ್ಬರ ದರ್ಶನದಿಂದ ಸ್ತ್ರೀಯರ ಹೃದಯದಲ್ಲಿ ಪ್ರೇಮಾವೇಗ ಮತ್ತು ಸೇರುವ ಬಯಕೆ ಜಾಗ್ರತವಾಗುತ್ತಿತ್ತು. ಇದರಿಂದ ಅವರಿಗೆ ಶರೀರದ ಜ್ಞಾನವೇ ಇರುತ್ತಿರಲಿಲ್ಲ. ಅವರಿಗೆ ವಸ್ತ್ರ, ಮುಡಿ, ಬಳೆ ಇವುಗಳು ಜಾರಿಹೋಗುತ್ತಿದ್ದರೂ ಅದರ ಪರಿವೆಯೇ ಇಲ್ಲದೆ ಚಿತ್ತಾರದಂತೆ ನಿಂತು ಬಿಡುತ್ತಿದ್ದರು. ॥ ೧೪ ॥

ಅನಂತರ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ಮುಂದೆ ಹೋಗುತ್ತಾ ಧನುರ್ಯಜ್ಞವು ನಡೆಯುವ ಸ್ಥಳವನ್ನು ಕೇಳುತ್ತಾ ರಂಗಶಾಲೆಗೆ ಬಂದು ತಲುಪಿದರು. ಅಲ್ಲಿ ಇಂದ್ರನ ಧನುಸ್ಸಿಗೆ ಸಮಾನವಾದ ಒಂದು ಅದ್ಭುತವಾದ ಬಿಲ್ಲನ್ನು ನೋಡಿದರು. ॥ ೧೫ ॥ ಪರಮ ವೈಭವದಿಂದ ಪ್ರತಿಷ್ಠಾಪಿತವಾದ ಅನುದಿನವೂ ಪೂಜಿಸಲ್ಪಟ್ಟು ಹಲವಾರು ಸೈನಿಕರಿಂದ ರಕ್ಷಿತವಾದ ಆ ಮಹಾಧನುಸ್ಸನ್ನೆತ್ತಿಕೊಳ್ಳಲು ಮುಂದಾದಾಗ ರಕ್ಷಕರು ತಡೆಯುತ್ತಿದ್ದರೂ ಶ್ರೀಕೃಷ್ಣನು ರಕ್ಷಕರನ್ನು ಹಿಂದಕ್ಕೆ ತಳ್ಳಿ ಆ ಬಿಲ್ಲನ್ನು ಬಲವಂತವಾಗಿ ಎತ್ತಿಕೊಂಡನು. ॥ ೧೬ ॥ ಎಲ್ಲರೂ ನೋಡುತ್ತಿರುವಂತೆಯೇ ಆ ಬಿಲ್ಲನ್ನು ಎಡಗೈಯಿಂದ ಮೇಲೆತ್ತಿ, ಅದಕ್ಕೆ ನಾಣನ್ನು ಬಿಗಿದು ಮದಿಸಿದ ಆನೆಯು ಕಬ್ಬಿನ ಜಲ್ಲೆಯನ್ನು ಮುರಿದು ಬಿಡುವಂತೆ ಕ್ಷಣಾರ್ಧದಲ್ಲಿ ಶ್ರೀಕೃಷ್ಣನು ಅದನ್ನು ಮಧ್ಯದಲ್ಲಿ ಮುರಿದು ಹಾಕಿದನು. ॥ ೧೭ ॥ ಧನುಸ್ಸು ಮುರಿದಾಗ ಅದರ ಶಬ್ದವು ಭೂಮ್ಯಾಕಾಶಗಳಲ್ಲಿಯೂ, ದಶದಿಕ್ಕುಗಳಲ್ಲಿಯೂ ತುಂಬಿ ಹೋಯಿತು. ಅದನ್ನು ಕೇಳಿದ ಕಂಸನು ಭಯದಿಂದ ನಡುಗಿ ಹೋದನು. ॥ ೧೮ ॥ ಧನುಸ್ಸನ್ನು ರಕ್ಷಿಸುತ್ತಿದ್ದ ಆತತಾಯಿಗಳಾದ ಅಸುರರು ಅತ್ಯಂತ ಕುಪಿತರಾದರು. ಶ್ರೀಕೃಷ್ಣನನ್ನು ಹಿಡಿಯುವ ಇಚ್ಛೆಯಿಂದ ಅವನ ಸುತ್ತಲೂ ನಿಂತು 'ಹಿಡಿಯಿರಿ. ಬಂಧಿಸಿರಿ, ತಪ್ಪಿಸಿಕೊಂಡು ಹೋಗಲು ಬಿಡಬೇಡಿರಿ' ಎಂದು ಕೂಗಾಡತೊಡಗಿದರು. ॥ ೧೯ ॥ ಆ ರಾಕ್ಷಸರ ದುರಭಿಪ್ರಾಯವನ್ನು ತಿಳಿದು ಬಲರಾಮ-ಶ್ರೀಕೃಷ್ಣರು ಕ್ರುದ್ಧರಾಗಿ ಮುರಿದು ಬಿದ್ದ ಧನುಸ್ಸಿನ ತುಂಡುಗಳನ್ನೆತ್ತಿಕೊಂಡು ಅದರಿಂದಲೇ ರಕ್ಷಕರೆಲ್ಲರನ್ನು ಧ್ವಂಸಮಾಡಿಬಿಟ್ಟರು. ॥ ೨೦ ॥ ಅವರ ಸಹಾಯಕ್ಕೆ ಬಂದ ಕಂಸನ ಸೈನಿಕರೆಲ್ಲರನ್ನೂ ಅದೇ ತುಂಡುಗಳಿಂದ ಕ್ಷಣಮಾತ್ರದಲ್ಲಿ ಸಂಹರಿಸಿಬಿಟ್ಟರು. ಬಳಿಕ ಅವರು ಯಜ್ಞಮಂಟಪದ ಮುಖ್ಯದ್ವಾರದಿಂದ ಹೊರಬಿದ್ದು, ಮಥುರಾಪಟ್ಟಣದ ಸೊಬಗನ್ನು ವೀಕ್ಷಿಸುತ್ತಾ ಆನಂದವಾಗಿ ಸಂಚರಿಸುತ್ತಿದ್ದರು. ॥ ೨೧ ॥ ನಗರವಾಸಿಗಳು ರಾಮ-ಕೇಶವರ ಅದ್ಭುತವಾದ ವೀರ್ಯಪರಾಕ್ರಮಗಳನ್ನು, ಮಹಾ ತೇಜಸ್ಸನ್ನು, ಪ್ರೌಢಿಮೆಯನ್ನೂ ರೂಪವನ್ನೂ ನೋಡಿ ಇವರಿಬ್ಬರೂ ಶ್ರೇಷ್ಠರಾದ ದೇವತೆಗಳೇ ಇರಬಹುದೆಂದು ನಿಶ್ಚಯಿಸಿಕೊಂಡರು. ॥ ೨೨ ॥ ಹೀಗೆ ಭಗವಾನ್ ಶ್ರೀಕೃಷ್ಣ-ಬಲರಾಮರು ಮಥುರೆಯಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿರುವಾಗ ಸಾಯಂಕಾಲವಾಯಿತು. ಆಗ ಅವರಿಬ್ಬರೂ ತಮ್ಮ ಸಂಗಡಿಗರೊಡನೆ ನಗರದ ಹೊರಭಾಗದಲ್ಲಿ ಬಂಡಿಗಳನ್ನು ನಿಲ್ಲಿಸಿದ್ದ ತಮ್ಮ ಬಿಡದಿಗೆ ಮರಳಿದರು. ॥ ೨೩ ॥ ಗೋಕುಲದಲ್ಲಿದ್ದ ಗೋಪಿಕೆಯರು ಶ್ರೀಕೃಷ್ಣನ ಅಗಲುವಿಕೆಯ ಸಮಯದಲ್ಲಿ ವಿರಹವೇದನೆಯಿಂದ ಹೇಳಿದಂತೆಯೇ ಇಲ್ಲಿ ಮಥುರೆಯಲ್ಲಿ ಅಕ್ಷರಶಃ ಪರಿಣಮಿಸಿತು. ಗೋಪಿಯರಂತೆಯೇ ಮಥುರೆಯ ಸ್ತ್ರೀಯರೂ ಕೂಡ ಶ್ರೀಕೃಷ್ಣನ ಅತುಲ ಸೌಂದರ್ಯ

ಗೋಪ್ಯೋ ಮುಕುಂದವಿಗಮೇ ವಿರಹಾತುರಾ ಯಾ
ಆಶಾಸತಾಶಿಷ ಋತಾ ಮಧುಪುರ್ಯಭೂವನ್ ।
ಸಂಪಶ್ಯತಾಂ ಪುರುಷಭೂಷಣಗಾತ್ರಲಕ್ಷ್ಮೀಂ
ಹಿತ್ವೇತರಾನ್ ನು ಭಜತಶ್ಚಕಮೇಽಯನಂ ಶ್ರೀಃ ॥ ೨೪ ॥

ಅವನಿಕ್ತಾಂಘ್ರಿಯುಗಲೌ ಭುಕ್ತ್ವಾ ಕ್ಷೀರೋಪಸೇಚನಮ್ ।
ಊಷತುಸ್ತಾಂ ಸುಖಂ ರಾತ್ರಿಂ ಜ್ಞಾತ್ವಾ ಕಂಸಚಿಕೀರ್ಷಿತಮ್
॥ ೨೫ ॥

ಕಂಸಸ್ತು ಧನುಷೋ ಭಂಗಂ ರಕ್ಷಿಣಾಂ ಸ್ವಬಲಸ್ಯ ಚ ।
ವಧಂ ನಿಶಮ್ಯ ಗೋವಿಂದರಾಮವಿಕ್ರೀಡಿತಂ ಪರಮ್
॥ ೨೬ ॥

ದೀರ್ಘಪ್ರಜಾಗರೋ ಭೀತೋ ದುರ್ನಿಮಿತ್ತಾನಿ ದುರ್ಮತಿಃ ।
ಬಹೂನ್ಯಚಷ್ಟೋಭಯಥಾ ಮೃತ್ಯೋರ್ದೌತ್ಯಕರಾಣಿ ಚ
॥ ೨೭ ॥

ಅದರ್ಶನಂ ಸ್ವಶಿರಸಃ ಪ್ರತಿರೂಪೇ ಚ ಸತ್ಯಪಿ ।
ಅಸತ್ಯಪಿ ದ್ವಿತೀಯೇ ಚ ದ್ವೈರೂಪ್ಯಂ ಜ್ಯೋತಿಷಾಂ ತಥಾ
॥ ೨೮ ॥

ಛಿದ್ರಪ್ರತೀತಿಶ್ಛಾಯಾಯಾಂ ಪ್ರಾಣಘೋಷಾನುಪಶ್ರುತಿಃ ।
ಸ್ವರ್ಣಪ್ರತೀತಿರ್ವೃಕ್ಷೇಷು ಸ್ವಪದಾನಾಮದರ್ಶನಮ್
॥ ೨೯ ॥

ಸ್ವಪ್ನೇ ಪ್ರೇತಪರಿಷ್ವಂಗಃ ಖರಯಾನಂ ವಿಷಾದನಮ್ ।
ಯಾಯಾನ್ನಲದಮಾಲ್ಯೇಕಸ್ತೈಲಾಭ್ಯಕ್ತೋ ದಿಗಂಬರಃ
॥ ೩೦ ॥

ಅನ್ಯಾನಿ ಚೇತ್ಥಂಭೂತಾನಿ ಸ್ವಪ್ನಜಾಗರಿತಾನಿ ಚ ।
ಪಶ್ಯನ್ ಮರಣಸಂತ್ರಸ್ತೋ ನಿದ್ರಾಂ ಲೇಭೇ ನ ಚಿಂತಯಾ
॥ ೩೧ ॥

ವ್ಯುಷ್ಟಾಯಾಂ ನಿಶಿ ಕೌರವ್ಯ ಸೂರ್ಯೇ ಚಾದ್ಭ್ಯಃ ಸಮುತ್ಥಿತೇ ।
ಕಾರಯಾಮಾಸ ವೈ ಕಂಸೋ ಮಲ್ಲಕ್ರೀಡಾಮಹೋತ್ಸವಮ್
॥ ೩೨ ॥

ಆನರ್ಚುಃ ಪುರುಷಾ ರಂಗಂ ತೂರ್ಯಭೇರ್ಯಶ್ಚ ಜಘ್ನಿರೇ ।
ಮಂಚಾಶ್ಚಾಲಂಕೃತಾಃ ಸ್ರಗ್ಭಿಃ ಪತಾಕಾಚೈಲತೋರಣೈಃ
॥ ೩೩ ॥

ವನ್ನು ನೋಡಿ ಮೈಮರೆತು ಹೋದರು. ಲಕ್ಷ್ಮಿಯನ್ನು ಅನೇಕರು ಬಯಸುತ್ತಾ ಅವಳನ್ನು ಪಡೆಯಲು ದೊಡ್ಡ-ದೊಡ್ಡ ದೇವತೆಗಳೂ ಕಾತರರಾಗಿದ್ದರು. ಆದರೆ ಆಕೆಯು ತನ್ನನ್ನು ಬಯಸದೇ ಇರುವ ಭಗವಂತನನ್ನು ವರಿಸಿಕೊಂಡು, ಅವನ ವಕ್ಷಸ್ಥಳವನ್ನೇ ತನ್ನ ನಿವಾಸ ಸ್ಥಾನವನ್ನಾಗಿಸಿಕೊಂಡಳು. ಅಂತಹ ಪುರುಷೋತ್ತಮನ ಶರೀರದ ದಿವ್ಯ ಕಾಂತಿಯನ್ನು ನೋಡುತ್ತಾ ಮಥುರೆಯ ಸ್ತ್ರೀಯರು ಆನಂದ ತುಂದಿಲರಾದರು. ॥ ೨೪ ॥ ಬಲರಾಮ ಶ್ರೀಕೃಷ್ಣರು ತಮ್ಮ ಸಂಗಡಿಗ ರೊಂದಿಗೆ ಬಿಡದಿಗೆ ಬಂದು, ಕೈ-ಕಾಲು ತೊಳೆದು ಹಾಲಿನಿಂದ ಮಾಡಿದ ಪಾಯಸ ಮುಂತಾದ ಪದಾರ್ಥಗಳನ್ನು ಭುಂಜಿಸಿ, ಕಂಸನು ಮುಂದೆ ಏನು ಮಾಡಲಿರುವನು ಎಂಬುದನ್ನು ಅರಿತು ಕೊಂಡು ಆ ರಾತ್ರಿಯನ್ನು ಸುಖವಾಗಿ ಅಲ್ಲೇ ಕಳೆದರು. ॥ ೨೫ ॥

ಶ್ರೀಕೃಷ್ಣ-ಬಲರಾಮರು ಮಕ್ಕಳ ಆಟಿಕೆಯಂತೆ, ಯಾವ ಶ್ರಮವೂ ಇಲ್ಲದೆ ಧನುಸ್ಸನ್ನು ಮುರಿದುದನ್ನು ಕಾವಲುಗಾರರನ್ನೂ ಅವರ ಸಹಾಯಕ್ಕೆ ಕಳಿಸಿದ ಸೈನ್ಯವನ್ನು ಸಂಹರಿಸಿದುದನ್ನು ಕಂಸನು ಕೇಳಿದನು. ॥ ೨೬ ॥ ಇದನ್ನು ಕೇಳಿದಾಗ ಅವನು ಬಹಳವಾಗಿ ಗಾಬರಿಗೊಂಡನು. ಆ ದುರ್ಬುದ್ಧಿಗೆ ಬಹಳ ಹೊತ್ತು ನಿದ್ದೆಯೇ ಬರಲಿಲ್ಲ. ಜಾಗ್ರದವಸ್ಥೆಯಲ್ಲೂ, ಸ್ವಪ್ನದಲ್ಲಿಯೂ ಕಂಸನು ಮೃತ್ಯು ಸೂಚಕವಾದ ಅನೇಕ ದೃಶ್ಯಗಳನ್ನು ನೋಡಿದನು. ॥ ೨೭ ॥ ಜಾಗ್ರ ದವಸ್ಥೆಯಲ್ಲಿ ಅವನಿಗೆ ನೀರಿನಲ್ಲಿ ಕನ್ನಡಿಯಲ್ಲಿ ಶರೀರದ ಪ್ರತಿಬಿಂಬ ಕಂಡರೂ ತಲೆಯೇ ಕಾಣುತ್ತಿರಲಿಲ್ಲ. ಬೆರಳುಗಳೇ ಅದಿ ಕಣ್ಣಿಗೆ ಅಡ್ಡವಾಗದಿದ್ದರೂ ಸೂರ್ಯ-ನಕ್ಷತ್ರಗಳು, ದೀಪ ಹೀಗೆ ಎರಡೆರ ಡಾಗಿ ಕಂಡುಬರುತ್ತಿತ್ತು. ॥ ೨೮ ॥ ತನ್ನ ನೆರಳಿನಲ್ಲೇ ರಂಧ್ರಗಳಿರು ವಂತೆ ಕಾಣುತ್ತಿತ್ತು. ಕಿವಿಗಳನ್ನು ಮುಚ್ಚಿಕೊಂಡರೆ ಪ್ರಾಣಧ್ವನಿಯು ಕೇಳಿ ಬರುತ್ತಿರಲಿಲ್ಲ. ವೃಕ್ಷಗಳು ಸ್ವರ್ಣಮಯವಾಗಿ ಕಾಣುತ್ತಿದ್ದವು. ನಡೆಯುವಾಗ ಹೆಜ್ಜೆಗಳ ಗುರುತುಗಳು ಕಾಣುತ್ತಿರಲಿಲ್ಲ. ॥ ೨೯ ॥ ಸ್ವಪ್ನಾವಸ್ಥೆಯಲ್ಲಿ ಕಂಸನು ಪ್ರೇತಗಳನ್ನು ತಬ್ಬಿಕೊಂಡಂತೆ ಕಂಡನು. ಕತ್ತೆಯನ್ನೇರಿ ಹೋಗುತ್ತಾ ವಿಷತಿಂದಂತೆ ಕಂಡನು. ಇಡೀ ಶರೀರಕ್ಕೆ ಎಣ್ಣೆಯನ್ನು ಮೆತ್ತಿಕೊಂಡು, ದಾಸವಾಳ ಹೂವಿನ ಮಾಲೆಯನ್ನು ಧರಿಸಿ ದಿಗಂಬರನಾಗಿ ಎಲ್ಲಿಗೋ ಹೋಗುತ್ತಿರುವಂತೆ ಕಂಡನು. ॥ ೩೦ ॥ ಸ್ವಪ್ನ ಮತ್ತು ಎಚ್ಚರದಲ್ಲಿ ಅವನು ಇಂತಹುದೇ ಅನೇಕ ಅಪಶಕುನಗಳನ್ನು ನೋಡುತ್ತಿದ್ದನು. ಇದರಿಂದ ಅತೀವ ಚಿಂತಿತ ನಾಗಿ, ಮೃತ್ಯುವು ಸಮೀಪಿಸಿದೆ ಎಂದು ಹೆದರಿ ಅವನಿಗೆ ನಿದ್ದೆಯೇ ಬರಲಿಲ್ಲ. ॥ ೩೧ ॥

ಪರೀಕ್ಷಿತನೇ! ರಾತ್ರಿಯು ಕಳೆದು ಸೂರ್ಯನಾರಾಯಣನು ಪೂರ್ವಸಮುದ್ರದಿಂದ ಮೇಲೆರಿದಾಗ ಕಂಸನು ಮಲ್ಲಕ್ರೀಡಾ ಮಹೋತ್ಸವವನ್ನು ಉದ್ಘಾಟಿಸಿದನು. ॥ ೩೨ ॥ ರಾಜಭಟರು ರಂಗಮಂಟಪವನ್ನು ಚೆನ್ನಾಗಿ ಅಲಂಕರಿಸಿದ್ದರು. ಭೇರಿ, ತುತ್ತೂರಿ, ಢಕ್ಕೆ -ಮೃದಂಗ ಮುಂತಾದ ವಾದ್ಯಗಳು ಮೊಳಗತೊಡಗಿದವು. ಪ್ರೇಕ್ಷಕರು ಕುಳಿತುಕೊಳ್ಳುವ ಮಂಚಗಳು, ಹೂವಿನ ಮಾಲೆ ಗಳಿಂದಲೂ, ಬಾವುಟಗಳಿಂದಲೂ, ಮೇಲ್ಕಟ್ಟುಗಳಿಂದಲೂ, ತೋರಣ ಗಳಿಂದಲೂ ಸಿಂಗರಿಸಲ್ಪಟ್ಟಿತ್ತು. ॥ ೩೩ ॥

ತೇಷು ಪೌರಾ ಜಾನಪದಾ ಬ್ರಹ್ಮಕ್ಷತ್ರಪುರೋಗಮಾಃ ।
ಯಥೋಪಜೋಷಂ ವಿವಿಶೂ ರಾಜಾನಶ್ಚ ಕೃತಾಸನಾಃ
॥ ೩೪ ॥

ಕಂಸಃ ಪರಿವೃತೋಽಮಾತ್ಯೈ ರಾಜಮಂಚ ಉಪಾವಿಶತ್ ।
ಮಂಡಲೇಶ್ವರಮಧ್ಯಸ್ಥೋ ಹೃದಯೇನ ವಿದೂಯತಾ
॥ ೩೫ ॥

ವಾದ್ಯಮಾನೇಷು ತೂರ್ಯೇಷು ಮಲ್ಲತಾಲೋತ್ತರೇಷು ಚ ।
ಮಲ್ಲಾಃ ಸ್ವಲಂಕೃತಾ ದೃಪ್ತಾಃ ಸೋಪಾಧ್ಯಾಯಾಃ ಸಮಾವಿಶನ್
॥ ೩೬ ॥

ಚಾಣೂರೋ ಮುಷ್ಟಿಕಃ ಕೂಟಃ ಶಲಸ್ತೋಶಲ ಏವ ಚ ।
ತ ಆಸೇದುರುಪಸ್ಥಾನಂ ವಲ್ಗುವಾದ್ಯಪ್ರಹರ್ಷಿತಾಃ
॥ ೩೭ ॥

ನಂದಗೋಪಾದಯೋ ಗೋಪಾ ಭೋಜರಾಜಸಮಾಹುತಾಃ ।
ನಿವೇದಿತೋಪಾಯನಾಸ್ತೇ ಏಕಸ್ಮಿನ್ ಮಂಚ ಆವಿಶನ್
॥ ೩೮ ॥

ಆ ಮಂಚಗಳಲ್ಲಿ ಬ್ರಾಹ್ಮಣ, ಕ್ಷತ್ರಿಯರೇ, ಮೊದಲಾದ ನಾಗರೀಕರೂ, ಗ್ರಾಮವಾಸಿಗಳೂ, ಎಲ್ಲರೂ ಯಥಾಸ್ಥಾನದಲ್ಲಿ ಕುಳಿತು. ರಾಜ ಮಹಾರಾಜರೂ ತಮ-ತಮಗೆ ನಿಶ್ಚಿತವಾದ ಆಸನಗಳಲ್ಲಿ ಕುಳಿತಿದ್ದರು. ॥ ೩೪ ॥ ಕಂಸರಾಜನು ಅಮಾತ್ಯರಿಂದ ಪರಿವೃತನಾಗಿ ಮಾಂಡಲಿಕರ ಮಧ್ಯಭಾಗದಲ್ಲಿ ಸರ್ವಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತನು. ಆದರೆ ಅವನ ಮನಸ್ಸು ಅಪಶಕುನಗಳಿಂದಾಗಿ ತಳಮಳಿಸುತ್ತಿತ್ತು. ॥ ೩೫ ॥ ನಾನಾ ಬಗೆಯ ವಾದ್ಯಗಳು ಮೊಳಗುತ್ತಿರಲು, ಜಟ್ಟಿಗಳ ಕೈಚಪ್ಪಾಳೆಯ ಶಬ್ದಗಳೂ ಕೇಳಿ ಬರುತ್ತಿದ್ದವು. ಗರ್ವಿಷ್ಠರಾದ ಮಲ್ಲರು ಯಥೋಚಿತವಾಗಿ ಅಲಂಕರಿಸಿಕೊಂಡು ತಮ್ಮ ಗುರುಗಳೊಡನೆ ರಂಗಸ್ಥಳಕ್ಕೆ ಇಳಿದರು. ॥ ೩೬ ॥ ಚಾಣೂರ, ಮುಷ್ಟಿಕ, ಕೂಟ, ಶಲ, ತೋಶಲ ಮುಂತಾದ ಮುಖ್ಯ-ಮುಖ್ಯ ಜಟ್ಟಿಗಳು ವಾದ್ಯಗಳ ಸುಮಧುರವಾದ ಧ್ವನಿಯಿಂದ ಉತ್ಸಾಹಗೊಂಡು ರಂಗಮಂಟಪದಲ್ಲಿ ಬಂದು ಕುಳಿತರು. ॥ ೩೭ ॥ ಆ ಸಮಯದಲ್ಲಿ ಭೋಜರಾಜನಿಂದ ಆಹ್ವಾನಿತರಾಗಿದ್ದ ನಂದಗೋಪನೇ ಮೊದಲಾದ ಗೋಪಾಲಕರು ತಾವು ತಂದಿದ್ದ ಕಪ್ಪ-ಕಾಣಿಕೆಗಳನ್ನು ಕಂಸನಿಗೆ ಅರ್ಪಿಸಿ, ಅವನ ಅನುಮತಿಯನ್ನು ಪಡೆದು ಒಂದು ಕಡೆ ಮಂಚವೊಂದರಲ್ಲಿ ಕುಳಿತುಕೊಂಡರು. ॥ ೩೮ ॥

*ನಲವತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೪೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಮಲ್ಲರಂಗೋಪವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ ॥ ೪೨ ॥

# ನಲವತ್ತಮೂರನೆಯ ಅಧ್ಯಾಯ

## ಕುವಲಯಾಪೀಡ ಆನೆಯ ಉದ್ಧಾರ - ರಂಗಮಂಟಪ ಪ್ರವೇಶ

*ಶ್ರೀಶುಕ ಉವಾಚ*

ಅಥ ಕೃಷ್ಣಶ್ಚ ರಾಮಶ್ಚ ಕೃತಶೌಚೌ ಪರಂತಪ ।
ಮಲ್ಲದುಂದುಭಿನಿರ್ಘೋಷಂ ಶ್ರುತ್ವಾದ್ರಷ್ಟುಮುಪೇಯತುಃ
॥ ೧ ॥

ರಂಗದ್ವಾರಂ ಸಮಾಸಾದ್ಯ ತಸ್ಮಿನ್ ನಾಗಮವಸ್ಥಿತಮ್ ।
ಅಪಶ್ಯತ್ಕುವಲಯಾಪೀಡಂ ಕೃಷ್ಣೋಽಂಬಷ್ಠ ಪ್ರಚೋದಿತಮ್
॥ ೨ ॥

ಬದ್ಧ್ವಾಪರಿಕರಂ ಶೌರಿಃ ಸಮುಹ್ಯ ಕುಟಿಲಾಲಕಾನ್ ।
ಉವಾಚ ಹಸ್ತಿಪಂ ವಾಚಾ ಮೇಘನಾದಗಭೀರಯಾ
॥ ೩ ॥

ಅಂಬಷ್ಠಾಂಬಷ್ಠ ಮಾರ್ಗಂ ನೌ ದೇಹ್ಯಪಕ್ರಾಮ ಮಾಚಿರಮ್ ।
ನೋ ಚೇತ್ ಸಕುಂಜರಂ ತ್ವಾದ್ಯ ನಯಾಮಿ ಯಮಸಾದನಮ್
॥ ೪ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಶತ್ರುತಾಪಕನಾದ ಪರೀಕ್ಷಿತನೇ! ಬಳಿಕ ಶ್ರೀಕೃಷ್ಣ-ಬಲರಾಮರಿಬ್ಬರೂ ಸ್ನಾನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಮಲ್ಲರು ಮಾಡಿದ ತೂರ್ಯ ದುಂದುಭಿಗಳ ಘೋಷವನ್ನು ಕೇಳಿ ರಂಗಭೂಮಿಯನ್ನು ನೋಡಲು ಹೊರಟರು. ॥ ೧ ॥ ಭಗವಾನ್ ಶ್ರೀಕೃಷ್ಣನು ರಂಗಭೂಮಿಯ ಮಹಾದ್ವಾರಕ್ಕೆ ಬಂದಾಗ ಅಲ್ಲಿ ಮಾವುತನ ಪ್ರೇರಣೆಯಂತೆ ಕುವಲಯಾಪೀಡ ಎಂಬ ಆನೆಯು ನಿಂತಿರುವುದನ್ನು ನೋಡಿದನು. ॥ ೨ ॥ ಆಗ ಭಗವಾನ್ ಶ್ರೀಕೃಷ್ಣನು ನಡುಕಟ್ಟನ್ನು ಸರಿಯಾಗಿ ಬಿಗಿದು, ಗುಂಗುರು ಗುಂಗುರಾದ ಕೂದಲುಗಳನ್ನು ಸರಿಪಡಿಸಿಕೊಂಡು ಮೇಘಗಂಭೀರ ಧ್ವನಿಯಿಂದ ಮಾವುತನಿಗೆ ಹೇಳಿದನು. ॥ ೩ ॥ ಎಲವೋ ಮಾವಟಿಗನೇ! ನಮ್ಮಿಬ್ಬರಿಗೂ ಹೋಗಲು ದಾರಿ ಬಿಡು. ದಾರಿಯನ್ನು ಬಿಟ್ಟು ಅತ್ತಕಡೆ ಹೊರಟು ಹೋಗು. ನೀನು ಆನೆಯನ್ನು ನಿಲ್ಲಿಸಿಕೊಂಡು ಹೀಗೆ ನಿಂತಿದ್ದರೆ ಆನೆಯೊಡನೆ ನಿನ್ನನ್ನೂ ಯಮಸದನಕ್ಕೆ ಅಟ್ಟಿಬಿಡುವೆನು. ॥ ೪ ॥

ಏವಂ ನಿರ್ಭರ್ತ್ಸಿತೋಽಂಬಷ್ಠಃ ಕುಪಿತಃ ಕೋಪಿತಂ ಗಜಮ್ ।
ಚೋದಯಾಮಾಸ ಕೃಷ್ಣಾಯ ಕಾಲಾಂತಕಯಮೋಪಮಮ್ ॥ ೫ ॥

ಕರೀಂದ್ರಸ್ತಮಭಿದ್ರುತ್ಯ ಕರೇಣ ತರಸಾಗ್ರಹೀತ್ ।
ಕರಾದ್ವಿಗಲಿತಃ ಸೋಽಮುಂ ನಿಹತ್ಯಾಂಘ್ರಿಷ್ವಲೀಯತ ॥ ೬ ॥

ಸಂಕ್ರುದ್ಧಸ್ತಮಚಕ್ಷಾಣೋ ಘ್ರಾಣದೃಷ್ಟಿಃ ಸ ಕೇಶವಮ್ ।
ಪರಾಮೃಶತ್ಪುಷ್ಕರೇಣ ಸ ಪ್ರಸಹ್ಯ ವಿನಿರ್ಗತಃ ॥ ೭ ॥

ಪುಚ್ಛೇ ಪ್ರಗೃಹ್ಯಾತಿಬಲಂ ಧನುಷಃ ಪಂಚವಿಂಶತಿಮ್ ।
ವಿಚಕರ್ಷ ಯಥಾ ನಾಗಂ ಸುಪರ್ಣ ಇವ ಲೀಲಯಾ ॥ ೮ ॥

ಸ ಪರ್ಯಾವರ್ತಮಾನೇನ ಸವ್ಯದಕ್ಷಿಣತೋಽಚ್ಯುತಃ ।
ಬಭ್ರಾಮ ಭ್ರಾಮ್ಯಮಾಣೇನ ಗೋವತ್ಸೇನೇವ ಬಾಲಕಃ ॥ ೯ ॥

ತತೋಽಭಿಮುಖಮಭ್ಯೇತ್ಯ ಪಾಣಿನಾಽಽಹತ್ಯ ವಾರಣಮ್ ।
ಪ್ರಾದ್ರವನ್ ಪಾತಯಾಮಾಸ ಸ್ಪೃಶ್ಯಮಾನಃ ಪದೇ ಪದೇ ॥ ೧೦ ॥

ಸ ಧಾವನ್ ಕ್ರೀಡಯಾ ಭೂಮೌ ಪತಿತ್ವಾ ಸಹಸೋತ್ಥಿತಃ ।
ತಂ ಮತ್ವಾ ಪತಿತಂ ಕ್ರುದ್ಧೋ ದಂತಾಭ್ಯಾಂ ಸೋಽಹನತ್ಕ್ಷಿತಿಮ್ ॥ ೧೧ ॥

ಸ್ವವಿಕ್ರಮೇ ಪ್ರತಿಹತೇ ಕುಂಜರೇಂದ್ರೋಽತ್ಯಮರ್ಷಿತಃ ।
ಚೋದ್ಯಮಾನೋ ಮಹಾಮಾತ್ರೈಃ ಕೃಷ್ಣಮಭ್ಯದ್ರವದ್ರುಷಾ ॥ ೧೨ ॥

ತಮಾಪತಂತಮಾಸಾದ್ಯ ಭಗವಾನ್ ಮಧುಸೂದನಃ ।
ನಿಗೃಹ್ಯ ಪಾಣಿನಾ ಹಸ್ತಂ ಪಾತಯಾಮಾಸ ಭೂತಲೇ ॥ ೧೩ ॥

ಪತಿತಸ್ಯ ಪದಾಽಽಕ್ರಮ್ಯ ಮೃಗೇಂದ್ರ ಇವ ಲೀಲಯಾ ।
ದಂತಮುತ್ಪಾಟ್ಯ ತೇನೇಭಂ ಹಸ್ತಿಪಾಂಶ್ಚಾಹನದ್ಧರಿಃ ॥ ೧೪ ॥

ಭಗವಾನ್ ಶ್ರೀಕೃಷ್ಣನು ಮಾವಟಿಗನಿಗೆ ಹೀಗೆ ಗದರಿಸಿದಾಗ ಅವನು ಕೋಪದಿಂದ ಕಿಡಿ-ಕಿಡಿಯಾದನು. ಅವನು ಪ್ರಳಯ ಕಾಲದ ಯಮನಂತಿದ್ದ ಕುವಲಯಾಪೀಡ ಆನೆಯನ್ನು ಅಂಕುಶದಿಂದ ತಿವಿದು ಕೆರಳಿಸಿ ಶ್ರೀಕೃಷ್ಣನ ಕಡೆಗೆ ನುಗ್ಗಿಸಿದನು. ॥ ೫ ॥ ಕುವಲಯಾಪೀಡವು ನುಗ್ಗಿ ಹೋಗಿ ಶ್ರೀಕೃಷ್ಣನನ್ನು ಸೊಂಡಿಲಿನಿಂದ ಹಿಡಿದುಕೊಂಡಿತು. ಆದರೆ ಭಗವಂತನು ಸೊಂಡಿನಿಲಿಂದ ನುಣುಚಿಕೊಂಡು ಅದಕ್ಕೆ ಬಲವಾದ ಒಂದು ಏಟನ್ನು ಕೊಟ್ಟು ಅದರ ಕಾಲುಗಳ ನಡುವೆ ಸೇರಿಕೊಂಡನು. ॥ ೬ ॥ ಶ್ರೀಕೃಷ್ಣನನ್ನು ತನ್ನೆದುರಿಗೆ ಕಾಣದೆ ಕುವಲಯಾಪೀಡವು ಕೋಪಗೊಂಡು, ವಾಸನೆಯಿಂದಲೇ ಅರಿತು ತನ್ನ ಸೊಂಡಿಲಿನಿಂದ ಕೃಷ್ಣನನ್ನು ಪುನಃ ಹಿಡಿದುಕೊಂಡಿತು. ಆದರೆ ಭಗವಂತನು ತನ್ನನ್ನು ಬಿಡಿಸಿಕೊಂಡನು. ॥ ೭ ॥ ಬಳಿಕ ಭಗವಂತನು ಆ ಮಹಾ ಬಲಿಷ್ಠವಾದ ಆನೆಯ ಬಾಲವನ್ನು ಹಿಡಿದುಕೊಂಡು-ಗರುಡನು ಸರ್ಪವನ್ನು ಎಳೆದೊಯ್ಯುವಂತೆ ಇಪ್ಪತ್ತೈದು ಮಾರು ಲೀಲಾಜಾಲವಾಗಿ ಹಿಂದಕ್ಕೆ ಸರಸರನೆ ಸೆಳೆದುಕೊಂಡು ಹೋದನು. ॥ ೮ ॥ ಕರುವಿನ ಬಾಲಹಿಡಿದುಕೊಂಡು ಆಡುವ ಹುಡುಗನಂತೆ ಶ್ರೀಕೃಷ್ಣನು ಅದರ ಬಾಲವನ್ನು ಹಿಡಿದುಕೊಂಡು ಎಡಕ್ಕೂ ಬಲಕ್ಕೂ ಎಳೆದಾಡುತ್ತಾ, ತಿರುಗಿಸುತ್ತಾ ಆಟವಾಡತೊಡಗಿನು. ಅದು ಎಡಕ್ಕೆ ತಿರುಗಿ ಕೃಷ್ಣನನ್ನು ಹಿಡಿಯಲು ಮುಂದಾದಾಗ ಅವನು ಬಲಕ್ಕೆ ಹೋಗುತ್ತಾ, ಬಲಕ್ಕೆ ಹಿಡಿಯಲು ಹೋದಾಗ ಎಡಕ್ಕೂ ಹೋಗುತ್ತಿದ್ದನು. ॥ ೯ ॥ ಅನಂತರ ಶ್ರೀಕೃಷ್ಣನು ಆನೆಯ ಮುಂದೆ ಬಂದು ಅದಕ್ಕೆ ಒಂದು ಜೋರಾಗಿ ಗುದ್ದಿದನು ಮತ್ತು ಅದನ್ನು ಬೀಳಿಸಲೆಂದೇ ಅದು ಈಗಲೇ ಆಗಲೋ ಮುಟ್ಟಿಬಿಡುವುದೋ ಎಂಬಂತೆ ಓಡತೊಡಗಿದನು. ಒಮ್ಮೆ ಜೋರಾಗಿ ಓಡುತ್ತಾ ಗಕ್ಕನೆ ನಿಂತುಬಿಡುವನು. ಆನೆಯು ಇನ್ನೇನೋ ಹಿಡಿದು ಬಿಡುವುದೋ ಎಂದಾಗ ದೂರಕ್ಕೆ ಓಡಿದನು. ॥ ೧೦ ॥ ಭಗವಾನ್ ಶ್ರೀಕೃಷ್ಣನು ಓಡುತ್ತಾ-ಓಡುತ್ತಾ ಒಮ್ಮೆ ಲೀಲೆಯಿಂದ ನೆಲದಲ್ಲಿ ಬಿದ್ದವನಂತೆ ನಟಿಸಿದನು ಹಾಗೂ ತಕ್ಷಣ ಎದ್ದು ಓಡುವನು. ಆಗ ಆ ಕುವಲಯಾಪೀಡವು ಸಿಟ್ಟಿನಿಂದ ಕೆರಳಿತ್ತು. ಕೃಷ್ಣನು ಬಿದ್ದಿರುವನೆಂದು ತಿಳಿದು ಜೋರಾಗಿ ತನ್ನ ದಂತಗಳಿಂದ ನೆಲಕ್ಕೆ ತಿವಿಯಿತು. ॥ ೧೧ ॥ ಆದರೆ ಆನೆಯ ಆಕ್ರಮಣವು ವ್ಯರ್ಥವಾಯಿತು. ಆಗ ಅದು ಇನ್ನೂ ಕೆರಳಿತು. ಮಾವಟಿಗನು ಅಂಕುಶದಿಂದ ತಿವಿಯುತ್ತಿರುವಾಗ ಕ್ರೋಧಗೊಂಡು ಶ್ರೀಕೃಷ್ಣನ ಮೇಲೆ ಮುಗಿದುಬಿತ್ತು. ॥ ೧೨ ॥ ಭಗವಾನ್ ಮಧುಸೂದನನು ಆನೆಯು ತನ್ನ ಕಡೆಗೆ ಮುನ್ನುಗ್ಗುತ್ತಿರುವುದನ್ನು ನೋಡಿ, ಅದರ ಬಳಿಗೆ ಹೋಗಿ ತನ್ನ ಒಂದೇ ಕೈಯಿಂದ ಅದರ ಸೊಂಡಿಲನ್ನು ಹಿಡಿದು ನೆಲದ ಮೇಲೆ ಕೆಡವಿದನು. ॥ ೧೩ ॥ ಅದು ನೆಲಕ್ಕೆ ಉರುಳಿದೊಡನೆಯೇ ಭಗವಂತನು ಲೀಲಾಜಾಲವಾಗಿ ಸಿಂಹದಂತೆ ಆನೆಯನ್ನು ಕಾಲಿನಿಂದ ತುಳಿದು ಅದರ ದಂತಗಳನ್ನು ಕಿತ್ತು ಆ ದಂತದಿಂದಲೇ ಆ ಆನೆಯನ್ನು ಮತ್ತು ಮಾವುತನನ್ನು ಸಂಹರಿಸಿದನು. ॥ ೧೪ ॥

ಮೃತಕಂ ದ್ವಿಪಮುತ್ಸೃಜ್ಯ ದಂತಪಾಣಿಃ ಸಮಾವಿಶತ್ ।
ಅಂಸನ್ಯಸ್ತವಿಷಾಣೋಽಸೃಙ್ಮದಬಿಂದುಭಿರಂಕಿತಃ ।
ವಿರೂಢಸ್ವೇದಕಣಿಕಾವದನಾಂಬುರುಹೋ ಬಭೌ ॥ ೧೪ ॥

ವೃತೌ ಗೋಪೈಃ ಕತಿಪಯೈರ್ಬಲದೇವಜನಾರ್ದನೌ ।
ರಂಗಂ ವಿವಿಶತೂ ರಾಜನ್ ಗಜದಂತವರಾಯುಧೌ ॥ ೧೬ ॥

ಮಲ್ಲಾನಾಮಶನಿರ್ನೃಣಾಂ ನರವರಃ
ಸ್ತ್ರೀಣಾಂ ಸ್ಮರೋ ಮೂರ್ತಿಮಾನ್
ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ
ಶಾಸ್ತಾ ಸ್ವಪಿತ್ರೋಃ ಶಿಶುಃ ।
ಮೃತ್ಯುರ್ಭೋಜಪತೇರ್ವಿರಾಡವಿದುಷಾಂ
ತತ್ತ್ವಂ ಪರಂ ಯೋಗಿನಾಂ
ವೃಷ್ಣೀನಾಂ ಪರದೇವತೇತಿ ವಿದಿತೋ
ರಂಗಂ ಗತಃ ಸಾಗ್ರಜಃ ॥ ೧೭ ॥

ಹತಂ ಕುವಲಯಾಪೀಡಂ ದೃಷ್ಟ್ವಾ ತಾವಪಿ ದುರ್ಜಯೌ ।
ಕಂಸೋ ಮನಸ್ಯಪಿ ತದಾ ಭೃಶಮುದ್ವಿವಿಜೇ ನೃಪ ॥ ೧೮ ॥

ತೌ ರೇಜತೂ ರಂಗಗತೌ ಮಹಾಭುಜೌ
ವಿಚಿತ್ರವೇಷಾಭರಣಸ್ರಗಂಬರೌ ।
ಯಥಾ ನಟಾವುತ್ತಮವೇಷಧಾರಿಣೌ
ಮನಃ ಕ್ಷಿಪಂತೌ ಪ್ರಭಯಾ ನಿರೀಕ್ಷತಾಮ್ ॥ ೧೯ ॥

ನಿರೀಕ್ಷ್ಯ ತಾವುತ್ತಮಪೂರುಷೌ ಜನಾ
ಮಂಚಸ್ಥಿತಾ ನಾಗರರಾಷ್ಟ್ರಕಾ ನೃಪ ।
ಪ್ರಹರ್ಷವೇಗೋತ್ಕಲಿತೇಕ್ಷಣಾನನಾಃ
ಪಪುರ್ನ ತೃಪ್ತಾ ನಯನೈಸ್ತದಾನನಮ್ ॥ ೨೦ ॥

ಪರೀಕ್ಷಿತನೇ! ಬಳಿಕ ಭಗವಾನ್ ಶ್ರೀಕೃಷ್ಣನು ಸತ್ತುಹೋದ ಆನೆಯನ್ನು ಅಲ್ಲಿಯೇ ಬಿಟ್ಟು ಅದರ ದಂತವನ್ನು ಕೈಯಲ್ಲಿ ಹಿಡಿದುಕೊಂಡೇ ರಂಗಮಂಟಪವನ್ನು ಪ್ರವೇಶಿಸಿದನು. ಆ ಸಮಯದಲ್ಲಿ ಶ್ರೀಕೃಷ್ಣನು ಆನೆಯ ದಂತವನ್ನು ಹೆಗಲಮೇಲೆ ಇಟ್ಟುಕೊಂಡಿದ್ದನು. ಅವನ ಶರೀರವು ಮದೋದಕದ ಮತ್ತು ರಕ್ತದ ಬಿಂದುಗಳಿಂದ ಸುಶೋಭಿತವಾಗಿತ್ತು. ಶ್ರೀಕೃಷ್ಣನ ಮುಖಾರವಿಂದವು ಮುತ್ತಿನಂತಹ ಬೆವರಿನ ಹನಿಗಳಿಂದ ಸಮಲಂಕೃತವಾಗಿತ್ತು. ॥ ೧೪ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರಿಬ್ಬರ ಕೈಗಳಲ್ಲಿಯೂ ಕುವಲಯಾಪೀಡದ ದೊಡ್ಡ ದೊಡ್ಡದಾದ ದಂತಗಳು ಶಸ್ತ್ರಗಳಂತೆ ಸುಶೋಭಿತವಾಗಿದ್ದವು. ಜೊತೆಗೆ ಕೆಲವು ಗೋಪಬಾಲಕರು ಅವರೊಂದಿಗೆ ನಡೆದು ಬರುತ್ತಿದ್ದರು. ಹೀಗೆ ಅವರು ರಂಗಭೂಮಿಯನ್ನು ಪ್ರವೇಶಿದರು. ॥ ೧೬ ॥ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ರಂಗಸ್ಥಳವನ್ನು ಪ್ರವೇಶಿಸುವಾಗ ಅವರು - ಜಟ್ಟಿಗಳಿಗೆ ಸಿಡಿಲಿನ ಸ್ವರೂಪದಿಂದಲೂ, ಸಾಧಾರಣ ಮನುಷ್ಯರಿಗೆ ನರಶ್ರೇಷ್ಠನಂತೆಯೂ, ಸ್ತ್ರೀಯರಿಗೆ ಮೂರ್ತಿವೆತ್ತ ಮನ್ಮಥನಂತೆಯೂ, ಗೋಪಾಲಕರಿಗೆ ಸ್ವಜನನಂತೆಯೂ, ದುಷ್ಟರಾಜರಿಗೆ ಶಿಕ್ಷಕನಂತೆಯೂ, ತಂದೆ ತಾಯಿಯರಂತಿದ್ದವರಿಗೆ ಮಗನಂತೆಯೂ, ಕಂಸನಿಗೆ ಮೃತ್ಯುವಿನಂತೆಯೂ, ಅಜ್ಞಾನಿಗಳಿಗೆ ವಿರಾಟಪುರುಷನಾಗಿಯೂ, ಯೋಗಿಗಳಿಗೆ ಪರತತ್ತ್ವವಾಗಿಯೂ, ಭಕ್ತಶಿರೋಮಣಿಗಳಾದ ವೃಷ್ಣಿವಂಶೀಯರಿಗೆ ತಮ್ಮ ಇಷ್ಟ ದೇವರಂತೆಯೂ ಕಂಡುಬಂದರು. (ಎಲ್ಲರೂ ತಮ್ಮ-ತಮ್ಮ ಭಾವಕ್ಕನುಸಾರ ಕ್ರಮವಾಗಿ ರೌದ್ರ, ಅದ್ಭುತ, ಶೃಂಗಾರ, ಹಾಸ್ಯ, ವೀರ, ವಾತ್ಸಲ್ಯ, ಭಯಾನಕ, ಬೀಭತ್ಸ ಶಾಂತ ಮತ್ತು ಪ್ರೇಮಭಕ್ತಿ ರಸಗಳನ್ನು ಅನುಭವಿಸಿದರು.) ॥ ೧೭ ॥ ರಾಜೇಂದ್ರ! ಕಂಸನಾದರೋ ಅತ್ಯಂತ ವೀರನೂ, ಧೀರನೂ ಆಗಿದ್ದರೂ ಇವರಿಬ್ಬರೂ ಕುವಲಯಾಪೀಡವನ್ನು ಕೊಂದುದನ್ನು ನೋಡಿದಾಗ, ಇವರನ್ನು ಗೆಲ್ಲುವುದು ಬಹಳ ಕಷ್ಟಕರವಾಗಿದೆ ಎಂಬುದು ಮನಸ್ಸಿಗೆ ಅನಿಸಿತು. ಇದರಿಂದ ಅವನು ಬಹಳವಾಗಿ ಗಾಬರಿಗೊಂಡನು. ॥ ೧೮ ॥ ಶ್ರೀಕೃಷ್ಣ-ಬಲರಾಮರು ದೀರ್ಘ ಬಾಹುಗಳಾಗಿದ್ದರು. ಪುಷ್ಪಗಳ ಹಾರಗಳಿಂದ, ವಸ್ತ್ರ ಆಭೂಷಣಗಳಿಂದ ಅವರ ವೇಷವು ವಿಚಿತ್ರವಾಗಿತ್ತು. ಉತ್ತಮವಾದ ವೇಷವನ್ನು ಧರಿಸಿ ಇಬ್ಬರು ನಟರು ಅಭಿನಯಿಸಲು ಬಂದಿರುವರೋ ಎಂದೆನಿಸುತ್ತಿತ್ತು. ನೋಡುಗರ ಕಣ್ಣುಗಳು ಅವರಲ್ಲೇ ನೆಟ್ಟು ಬಿಡುತ್ತಿದ್ದವು. ಅವರೂ ಕೂಡ ತಮ್ಮ ಪ್ರಭೆಯಿಂದ ಅವರ ಮನಸ್ಸನ್ನು ಅಪಹರಿಸಿಬಿಡುತ್ತಿದ್ದರು. ಹೀಗೆ ಅವರಿಬ್ಬರೂ ರಂಗಸ್ಥಳದಲ್ಲಿ ಶೋಭಾಯಮಾನರಾದರು. ॥ ೧೯ ॥ ಪರೀಕ್ಷಿತನೇ! ಮಂಚಗಳಲ್ಲಿ ಕುಳಿತಿದ್ದ ಮಥುರೆಯ ನಾಗರೀಕರೂ, ರಾಷ್ಟ್ರದ ಜನಸಮುದಾಯವೂ ಪುರುಷಶ್ರೇಷ್ಠರಾದ ಬಲರಾಮ-ಶ್ರೀಕೃಷ್ಣರನ್ನು ನೋಡಿ ಅತ್ಯಂತ ಪ್ರಸನ್ನರಾದರು. ಹರ್ಷೋತ್ಕರ್ಷದಿಂದಾಗಿ ಅವರ ಮುಖಗಳೂ, ಕಣ್ಣುಗಳೂ, ಕಮಲದಂತೆ ಅರಳಿದವು. ದುಂಬಿಗಳಂತಿದ್ದ ಕಣ್ಣುಗಳಿಂದ ರಾಮ-ಕೃಷ್ಣರ ಮುಖಮಧುವನ್ನು ಕುಡಿದಷ್ಟೂ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ. ॥ ೨೦ ॥

ಪ್ರಿಯಂ ರಾಜ್ಞಃ ಪ್ರಕುರ್ವಂತ್ಯಃ ಶ್ರೇಯೋ ವಿಂದಂತಿ ವೈ ಪ್ರಜಾಃ ।
ಮನಸಾ ಕರ್ಮಣಾ ವಾಚಾ ವಿಪರೀತಮತೋಽನ್ಯಥಾ
॥ ೩೩ ॥

ನಿತ್ಯಂ ಪ್ರಮುದಿತಾ ಗೋಪಾ ವತ್ಸಪಾಲಾ ಯಥಾ ಸ್ಫುಟಮ್ ।
ವನೇಷು ಮಲ್ಲಯುದ್ಧೇನ ಕ್ರೀಡಂತಶ್ಚಾರಯಂತಿ ಗಾಃ
॥ ೩೪ ॥

ತಸ್ಮಾದ್ರಾಜ್ಞಃ ಪ್ರಿಯಂ ಯೂಯಂ ವಯಂ ಚ ಕರವಾಮ ಹೇ ।
ಭೂತಾನಿ ನಃ ಪ್ರಸೀದಂತಿ ಸರ್ವಭೂತಮಯೋ ನೃಪಃ
॥ ೩೫ ॥

ತನ್ನಿಶಮ್ಯಾಬ್ರವೀತ್ ಕೃಷ್ಣೋ ದೇಶಕಾಲೋಚಿತಂ ವಚಃ ।
ನಿಯುದ್ಧಮಾತ್ಮನೋಽಭೀಷ್ಟಂ ಮನ್ಯಮಾನೋಽಭಿನಂದ್ಯ ಚ
॥ ೩೬ ॥

ಪ್ರಜಾ ಭೋಜಪತೇರಸ್ಯ ವಯಂ ಚಾಪಿ ವನೇಚರಾಃ ।
ಕರವಾಮ ಪ್ರಿಯಂ ನಿತ್ಯಂ ತನ್ನಃ ಪರಮನುಗ್ರಹಃ
॥ ೩೭ ॥

ಬಾಲಾ ವಯಂ ತುಲ್ಯಬಲೈಃ ಕ್ರೀಡಿಷ್ಯಾಮೋ ಯಥೋಚಿತಮ್ ।
ಭವೇನ್ನಿಯುದ್ಧಂ ಮಾಧರ್ಮಃ ಸ್ಪೃಶೇನ್ಮಲ್ಲ ಸಭಾಸದಃ
॥ ೩೮ ॥

ಚಾಣೂರ ಉವಾಚ

ನ ಬಾಲೋ ನ ಕಿಶೋರಸ್ತ್ವಂ ಬಲಶ್ಚ ಬಲಿನಾಂ ವರಃ ।
ಲೀಲಯೇಭೋ ಹತೋ ಯೇನ ಸಹಸ್ರದ್ವಿಪಸತ್ತ್ವಭೃತ್
॥ ೩೯ ॥

ತಸ್ಮಾದ್ಭವದ್ಭ್ಯಾಂ ಬಲಿಭಿರ್ಯೋದ್ಧವ್ಯಂ ನಾನಯೋಽತ್ರ ವೈ ।
ಮಯಿ ವಿಕ್ರಮ ವಾರ್ಷ್ಣೇಯ ಬಲೇನ ಸಹ ಮುಷ್ಟಿಕಃ
॥ ೪೦ ॥

ನೋಡಿರಪ್ಪಾ! ಮನ, ವಚನ, ಕರ್ಮದಿಂದ ರಾಜನಿಗೆ ಪ್ರಿಯವನ್ನುಂಟುಮಾಡುವ ಪ್ರಜೆಗಳು ಶ್ರೇಯಸ್ಸನ್ನು ಪಡೆಯುತ್ತಾರೆ. ರಾಜನ ಇಚ್ಛೆಗೆ ವಿರುದ್ಧವಾಗಿ ನಡೆಯುವವರು ಶಿಕ್ಷೆಗೆ ಗುರಿಯಾಗುತ್ತಾರೆ. ॥ ೩೩ ॥ ಹಸುಗಳನ್ನು ಮತ್ತು ಕರುಗಳನ್ನು ಮೇಯಿಸುವ ಗೊಲ್ಲರು ದಿನಾಲೂ ಆನಂದದಿಂದ ಕಾಡಿನಲ್ಲಿ ಕುಸ್ತಿಗಳನ್ನಾಡುತ್ತಾ ಹಸುಗಳನ್ನು ಮೇಯಿಸುತ್ತಾ ಇರುತ್ತಾರೆ ಎಂಬುದನ್ನು ಎಲ್ಲರೂ ಬಲ್ಲರು. ॥ ೩೪ ॥ ಆದಕ್ಕಾಗಿ ಬನ್ನಿರಿ, ನಾವು-ನೀವು ಸೇರಿ ಮಹಾರಾಜರನ್ನು ಸಂತೋಷಪಡಿಸಲಿಕ್ಕಾಗಿ ಕುಸ್ತಿಯನ್ನಾಡುವಾ. ಹೀಗೆ ಮಾಡುವುದರಿಂದ ಎಲ್ಲ ಪ್ರಾಣಿಗಳು ನಮ್ಮ ಮೇಲೆ ಪ್ರಸನ್ನರಾಗುವರು. ಏಕೆಂದರೆ, ರಾಜನು ಸಮಸ್ತ ಪ್ರಜೆಯ ಪ್ರತೀಕನಾಗಿದ್ದಾನೆ. ॥ ೩೫ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನಾದರೋ ಇವರೊಂದಿಗೆ ದ್ವಂದ್ವಯುದ್ಧವನ್ನೇ ಬಯಸುತ್ತಿದ್ದನು. ಅದಕ್ಕಾಗಿ ಅವನು ಚಾಣೂರನ ಮಾತನ್ನು ಕೇಳಿ ಅನುಮೋದಿಸುತ್ತಾ ದೇಶ-ಕಾಲಕ್ಕೆ ಅನುಸಾರವಾಗಿ ಇಂತೆಂದನು. ॥ ೩೬ ॥ ಎಲೈ ಚಾಣೂರನೇ! ನಾವೂ ಕೂಡ ಈ ಭೋಜರಾಜ ಕಂಸನ ವನವಾಸೀ ಪ್ರಜೆಗಳಾಗಿ ಇದ್ದೇವೆ. ನಾವು ಇವನನ್ನು ಸಂತೋಷ ಪಡಿಸಲು ಪ್ರಯತ್ನಿಸುವುದು ಆವಶ್ಯಕವಾಗಿದೆ. ಇದರಿಂದ ನಮಗೂ ಶ್ರೇಯಸ್ಸೂ ಇದೆ. ॥ ೩೭ ॥ ಆದರೆ ಚಾಣೂರನೇ! ನಾವುಗಳು ಇನ್ನೂ ಬಾಲಕರಾಗಿದ್ದೇವೆ. ಅದಕ್ಕಾಗಿ ನಾವು ನಮ್ಮ ಸಮಾನರಾದ ಬಲವುಳ್ಳ ಬಾಲಕರೊಂದಿಗೆ ಕುಸ್ತಿಯಾಡುವೆವು. ಕುಸ್ತಿಯು ಸಮಾನ ಬಲಿಷ್ಠರೊಂದಿಗೆ ನಡೆಯಬೇಕು. ಇದರಿಂದ ನೋಡುವ ಸಭಾಸದರಿಗೆ ಅನ್ಯಾಯವನ್ನು ಸಮರ್ಥಿಸುವ ಪಾಪವು ತಟ್ಟಲಾರದು. ॥ ೩೮ ॥

**ಚಾಣೂರನು ಹೇಳಿದನು** – ಅಯ್ಯಾ! ನೀನು ಮತ್ತು ಈ ಬಲರಾಮನು ಬಾಲಕರೂ ಅಲ್ಲ, ಕಿಶೋರರೂ ಅಲ್ಲ. ನೀವಿಬ್ಬರೂ ಬಲಿಷ್ಠರಲ್ಲಿ ಶ್ರೇಷ್ಠರಾಗಿರುವಿರಿ. ನೀವು ಇದೀಗಲೇ ಸಾವಿರ ಆನೆಗಳ ಬಲವುಳ್ಳ ಕುವಲಯಾಪೀಡವನ್ನು ಲೀಲಾಜಾಲವಾಗಿ ಕೊಂದು ಹಾಕಿರುವಿರಿ. ॥ ೩೯ ॥ ಅದಕ್ಕಾಗಿ ನೀವಿಬ್ಬರೂ ನಮ್ಮಂತಹ ಬಲಿಷ್ಠರೊಂದಿಗೆ ಕಾದಾಡಬೇಕು. ಇದರಲ್ಲಿ ಅನ್ಯಾಯದ ಯಾವ ಮಾತೂ ಇಲ್ಲ, ಆದುದರಿಂದ ಎಲೈ ಕೃಷ್ಣನೇ! ನೀನು ನನ್ನೊಂದಿಗೆ ನಿನ್ನ ಪರಾಕ್ರಮವನ್ನು ತೋರಬೇಕು. ಬಲರಾಮನು ಮುಷ್ಟಿಕನೊಂದಿಗೆ ಕಾದಾಡಲಿ. ॥ ೪೦ ॥

*ನಲವತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೪೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಕುವಲಯಾಪೀಡವಧೋ ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥ ೪೩ ॥

ಪಿಬಂತ ಇವ ಚಕ್ಷುರ್ಭ್ಯಾಂ ಲಿಹಂತ ಇವ ಜಿಹ್ವಯಾ ।
ಜಿಘ್ರಂತ ಇವ ನಾಸಾಭ್ಯಾಂ ಶ್ಲಿಷ್ಯಂತ ಇವ ಬಾಹುಭಿಃ
॥ ೨೧ ॥

ಊಚುಃ ಪರಸ್ಪರಂ ತೇ ವೈ ಯಥಾದೃಷ್ಟಂ ಯಥಾಶ್ರುತಮ್ ।
ತದ್ರೂಪಗುಣಮಾಧುರ್ಯಪ್ರಾಗಲ್ಭ್ಯಸ್ಮಾರಿತಾ ಇವ
॥ ೨೨ ॥

ಏತೌ ಭಗವತಃ ಸಾಕ್ಷಾದ್ಧರೇರ್ನಾರಾಯಣಸ್ಯ ಹಿ ।
ಅವತೀರ್ಣಾವಿಹಾಂಶೇನ ವಸುದೇವಸ್ಯ ವೇಶ್ಮನಿ
॥ ೨೩ ॥

ಏಷ ವೈ ಕಿಲ ದೇವಕ್ಯಾಂ ಜಾತೋ ನೀತಶ್ಚ ಗೋಕುಲಮ್ ।
ಕಾಲಮೇತಂ ವಸನ್ ಗೂಢೋ ವವೃಧೇ ನಂದವೇಶ್ಮನಿ
॥ ೨೪ ॥

ಪೂತನಾನೇನ ನೀತಾಂತಂ ಚಕ್ರವಾತಶ್ಚ ದಾನವಃ ।
ಅರ್ಜುನೌ ಗುಹ್ಯಕಃ ಕೇಶೀ ಧೇನುಕೋಽನ್ಯೇ ಚ ತದ್ವಿಧಾಃ
॥ ೨೫ ॥

ಗಾವಃ ಸಪಾಲಾ ಏತೇನ ದಾವಾಗ್ನೇಃ ಪರಿಮೋಚಿತಾಃ ।
ಕಾಲಿಯೋ ದಮಿತಃ ಸರ್ಪ ಇಂದ್ರಶ್ಚ ವಿಮದಃ ಕೃತಃ
॥ ೨೬ ॥

ಸಪ್ತಾಹಮೇಕಹಸ್ತೇನ ಧೃತೋಽದ್ರಿಪ್ರವರೋಽಮುನಾ ।
ವರ್ಷವಾತಾಶನಿಭ್ಯಶ್ಚ ಪರಿತ್ರಾತಂ ಚ ಗೋಕುಲಮ್
॥ ೨೭ ॥

ಗೋಪ್ಯೋಽಸ್ಯ ನಿತ್ಯಮುದಿತಹಸಿತಪ್ರೇಕ್ಷಣಂ ಮುಖಮ್ ।
ಪಶ್ಯಂತ್ಯೋ ವಿವಿಧಾಂಸ್ತಾಪಾಂಸ್ತರಂತಿ ಸ್ಮಾಶ್ರಮಂ ಮುದಾ
॥ ೨೮ ॥

ವದಂತ್ಯನೇನ ವಂಶೋಽಯಂ ಯದೋಃ ಸುಬಹುವಿಶ್ರುತಃ ।
ಶ್ರಿಯಂ ಯಶೋ ಮಹತ್ತ್ವಂ ಚ ಲಪ್ಸ್ಯತೇ ಪರಿರಕ್ಷಿತಃ
॥ ೨೯ ॥

ಅಯಂ ಚಾಸ್ಯಾಗ್ರಜಃ ಶ್ರೀಮಾನ್ ರಾಮಃ ಕಮಲಲೋಚನಃ ।
ಪ್ರಲಂಬೋ ನಿಹತೋ ಯೇನ ವತ್ಸಕೋ ಯೇ ಬಕಾದಯಃ
॥ ೩೦ ॥

ಜನೇಷ್ವೇವಂ ಬ್ರುವಾಣೇಷು ತೂರ್ಯೇಷು ನಿನದತ್ಸು ಚ ।
ಕೃಷ್ಣರಾಮೌ ಸಮಾಭಾಷ್ಯ ಚಾಣೂರೋ ವಾಕ್ಯಮಬ್ರವೀತ್
॥ ೩೧ ॥

ಹೇ ನಂದಸೂನೋ ಹೇ ರಾಮ ಭವಂತೌ ವೀರಸಮ್ಮತೌ ।
ನಿಯುದ್ಧಕುಶಲೌ ಶ್ರುತ್ವಾ ರಾಜ್ಞಾಽಽಹೂತೌ ದಿದೃಕ್ಷುಣಾ
॥ ೩೨ ॥

ಅವರೆಲ್ಲರೂ ಇವರಿಬ್ಬರನ್ನೂ ಕಣ್ಣುಗಳಿಂದಲೇ ಕುಡಿದುಬಿಡುವರೋ, ನಾಲಿಗೆಯಿಂದ ನೆಕ್ಕುತ್ತಿರುವರೋ, ಮೂಗಿನಿಂದ ಮೂಸುತ್ತಿರುವರೋ, ಬಾಹುಗಳಿಂದ ಅಪ್ಪಿಕೊಳ್ಳುವರೋ ಎಂದೆನಿಸುತ್ತಿತ್ತು. ॥ ೨೧ ॥ ಅವರ ಸೌಂದರ್ಯ, ಗುಣ, ಮಾಧುರ್ಯ ಮತ್ತು ನಿರ್ಭಯತೆಯಿಂದ ದರ್ಶಕರಿಗೆ ಅವರ ಲೀಲೆಗಳು ಸ್ಮರಣೆಗೆ ಬಂದವು ಹಾಗೂ ಅವರೆಲ್ಲರೂ ಪರಸ್ಪರವಾಗಿ ಕೇಳಿದ-ನೋಡಿದ ಮಾತುಗಳನ್ನು ಆಡಿಕೊಳ್ಳತೊಡಗಿದರು. ॥ ೨೨ ॥ ಒಬ್ಬನು ಹೇಳಿದನು – ಗೆಳೆಯರೇ! ಇವರಿಬ್ಬರೂ ಸಾಕ್ಷಾತ್ ಭಗವಾನ್ ನಾರಾಯಣನ ಅಂಶರೇ ಆಗಿದ್ದಾರೆ. ಈ ಭೂಮಿಯಲ್ಲಿ ವಸುದೇವನ ಮನೆಯಲ್ಲಿ ಅವತರಿಸಿರುವರು. ॥ ೨೩ ॥ ಮತ್ತೊಬ್ಬನು ಬೆರಳಿಂದ ಅವರನ್ನು ತೋರುತ್ತಾ ಹೇಳುತ್ತಾನೆ – ಈ ಶ್ಯಾಮಸುಂದರ ದೇವಕಿದೇವಿಯ ಗರ್ಭದಿಂದ ಹುಟ್ಟಿದವನು. ಹುಟ್ಟಿದೊಡನೆಯೇ ವಸುದೇವನು ಇವನನ್ನು ನಂದಗೋಕುಲಕ್ಕೆ ತಲುಪಿಸಿದನು. ಇಷ್ಟು ದಿವಸಗಳವರೆಗೆ ಇವನು ಅಡಗಿದ್ದು ನಂದಗೋಪನ ಮನೆಯಲ್ಲಿ ಬೆಳೆದು ಇಷ್ಟು ದೊಡ್ಡವನಾಗಿರುವನು. ॥ ೨೪ ॥ ಪೂತನೆ, ತೃಣಾವರ್ತ, ಶಂಖಚೂಡ, ಕೇಶಿ ಮತ್ತು ಧೇನುಕ ಮುಂತಾದವರನ್ನು ಹಾಗೂ ಇತರ ದುಷ್ಟರಾಕ್ಷಸರನ್ನು ವಧಿಸಿದುದೂ, ಯಮಳಾರ್ಜುನರ ಉದ್ಧಾರವನ್ನು ಮಾಡಿದುದೂ ಇವನೇ. ॥ ೨೫ ॥ ಗೋವುಗಳನ್ನು ಮತ್ತು ಗೋಪಬಾಲಕರನ್ನು ದಾವಾನಲದ ಜ್ವಾಲೆಯಿಂದ ಇವನೇ ಕಾಪಾಡಿದ್ದನು. ಕಾಲಿಯ ಸರ್ಪವನ್ನು ದಮನ ಮಾಡಿ, ಇಂದ್ರನ ಗರ್ವವನ್ನು ಮುರಿದವನೂ ಇವನೇ. ॥ ೨೬ ॥ ಮತ್ತೊಬ್ಬನು ಹೇಳಿದನು – ಏಳು ದಿನಗಳವರೆಗೆ ಒಂದೇ ಕೈಯ್ಯಮೇಲೆ ಗಿರಿರಾಜ ಗೋವರ್ಧನವನ್ನು ಎತ್ತಿ ಹಿಡಿದು, ಬಿರುಗಾಳಿ, ಮಳೆ, ಸಿಡಿಲುಗಳಿಂದ ಗೋಕುಲದ ಜನರನ್ನು ಕಾಪಾಡಿದವನು ಇವನೇ. ॥ ೨೭ ॥ ವ್ರಜದ ಗೋಪಿಯರು ಇವನ ಮಂದ ಮಧುರ ಮುಗುಳ್ನಗೆಯಿಂದ, ಕುಡಿನೋಟದಿಂದ, ಸದಾಕಾಲ ಏಕರಸವಾಗಿರುವ ಪ್ರಸನ್ನ ಮುಖಾರವಿಂದದ ದರ್ಶನದಿಂದ ಆನಂದಿತರಾಗುತ್ತಿದ್ದರು ಮತ್ತು ಸುಲಭವಾಗಿ ಎಲ್ಲ ಬಗೆಯ ತಾಪಗಳಿಂದ ಮುಕ್ತರಾಗಿಬಿಡುತ್ತಿದ್ದರು. ॥ ೨೮ ॥ ಇವನು ಯದು ವಂಶವನ್ನು ರಕ್ಷಿಸುವನೆಂದು, ಈ ವಿಖ್ಯಾತವಾದ ವಂಶವು ಇವನಿಂದ ಸಂಪತ್ಸಮೃದ್ಧಿಯನ್ನು, ಯಶಸ್ಸನ್ನೂ, ಗೌರವವನ್ನು ಪಡೆದುಕೊಳ್ಳುವುದೆಂದೂ ವಿದ್ವಾಂಸರು ಹೇಳಿದ್ದಾರಂತೆ. ॥ ೨೯ ॥ ಇನ್ನೊಬ್ಬನು ಹೇಳಿದನು – ಈ ಶ್ಯಾಮಸುಂದರನ ಬಳಿಯಲ್ಲಿ ನಿಂತಿರುವವನು ಇವನಣ್ಣನಾದ ಕಮಲನಯನ ಬಲರಾಮದೇವನಾಗಿದ್ದಾನೆ. ಇವನೇ ಪ್ರಲಂಬಾಸುರ, ವತ್ಸಾಸುರ, ಬಕಾಸುರ ಮುಂತಾದವರನ್ನು ಕೊಂದಿರುವನೆಂದು ಯಾರದೋ ಬಾಯಿಂದ ಕೇಳಿದ್ದೇವೆ. ॥ ೩೦ ॥

ದರ್ಶಕರಲ್ಲಿ ಹೀಗೆ ಚರ್ಚೆ ನಡೆಯುತ್ತಿದ್ದಾಗ, ರಂಗಸ್ಥಳದಲ್ಲಿ ತುತ್ತೂರಿ, ಭೇರಿಗಳೂ ಮೊಳಗುತ್ತಿರುವಾಗ ಚಾಣೂರನು ಶ್ರೀಕೃಷ್ಣ ಬಲರಾಮರನ್ನು ಸಂಬೋಧಿಸುತ್ತಾ ಹೀಗೆ ಹೇಳಿದನು. ॥ ೩೧ ॥ ನಂದನಂದನರಾದ ಬಲರಾಮ-ಶ್ರೀಕೃಷ್ಣರೇ! ನೀವಿಬ್ಬರೂ ವೀರರಿಗೆ ಆದರಣೀಯರಾಗಿರುವಿರಿ. ನೀವುಗಳು ಕುಸ್ತಿಯಾಡುವುದರಲ್ಲಿ ಅತ್ಯಂತ ನಿಪುಣರಾಗಿರುವಿರೆಂದು ಕೇಳಿ ನಿಮ್ಮ ಮಲ್ಲಯುದ್ಧ ಕೌಶಲ್ಯವನ್ನು ನೋಡುವ ಸಲುವಾಗಿ ನಮ್ಮ ರಾಜನಾದ ಕಂಸನು ನಿಮ್ಮನ್ನು ಕರೆಸಿರುವನು. ॥ ೩೨ ॥

# ನಲವತ್ತನಾಲ್ಕನೆಯ ಅಧ್ಯಾಯ

## ಚಾಣೂರ, ಮುಷ್ಟಿಕ ಮುಂತಾದ ಮಲ್ಲರ ಹಾಗೂ ಕಂಸನ ವಧೆ

*ಶ್ರೀಶುಕ ಉವಾಚ*

ಏವಂ ಚರ್ಚಿತಸಂಕಲ್ಪೋ ಭಗವಾನ್ ಮಧುಸೂದನಃ ।
ಆಸಸಾದಾಥ ಚಾಣೂರಂ ಮುಷ್ಟಿಕಂ ರೋಹಿಣೀಸುತಃ ॥ ೧ ॥

ಹಸ್ತಾಭ್ಯಾಂ ಹಸ್ತಯೋರ್ಬದ್ಧ್ವಾ ಪದ್ಭ್ಯಾಮೇವ ಚ ಪಾದಯೋಃ ।
ವಿಚಕರ್ಷತುರನ್ಯೋನ್ಯಂ ಪ್ರಸಹ್ಯ ವಿಜಿಗೀಷಯಾ ॥ ೨ ॥

ಅರತ್ನೀ ದ್ವೇ ಅರತ್ನಿಭ್ಯಾಂ ಜಾನುಭ್ಯಾಂ ಚೈವ ಜಾನುನೀ ।
ಶಿರಃ ಶೀರ್ಷ್ಣೋರಸೋರಸ್ತಾವನ್ಯೋನ್ಯಮಭಿಜಘ್ನತುಃ ॥ ೩ ॥

ಪರಿಭ್ರಾಮಣವಿಕ್ಷೇಪಪರಿರಂಭಾವಪಾತನೈಃ ।
ಉತ್ಸರ್ಪಣಾಪಸರ್ಪಣೈಶ್ಚಾನ್ಯೋನ್ಯಂ ಪ್ರತ್ಯರುಂಧತಾಮ್ ॥ ೪ ॥

ಉತ್ಥಾಪನೈರುನ್ನಯನೈಶ್ಚಾಲನೈಃ ಸ್ಥಾಪನೈರಪಿ ।
ಪರಸ್ಪರಂ ಜಿಗೀಷಂತಾವಪಚಕ್ರತುರಾತ್ಮನಃ ॥ ೫ ॥

ತದ್ಬಲಾಬಲವದ್ಯುದ್ಧಂ ಸಮೇತಾಃ ಸರ್ವಯೋಷಿತಃ ।
ಊಚುಃ ಪರಸ್ಪರಂ ರಾಜನ್ ಸಾನುಕಂಪಾ ವರೂಥಶಃ ॥ ೬ ॥

ಮಹಾನಯಂ ಬತಾಧರ್ಮ ಏಷಾಂ ರಾಜಸಭಾಸದಾಮ್ ।
ಯೇ ಬಲಾಬಲವದ್ಯುದ್ಧಂ ರಾಜ್ಞೋಽನ್ವಿಚ್ಛಂತಿ ಪಶ್ಯತಃ ॥ ೭ ॥

ಕ್ವ ವಜ್ರಸಾರಸರ್ವಾಂಗೌ ಮಲ್ಲೌ ಶೈಲೇಂದ್ರಸನ್ನಿಭೌ ।
ಕ್ವ ಚಾತಿಸುಕುಮಾರಾಂಗೌ ಕಿಶೋರೌ ನಾಪ್ತಯೌವನೌ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಚಾಣೂರನೇ ಮೊದಲಾದವರನ್ನು ಸಂಹರಿಸಲು ನಿಶ್ಚಿತವಾದ ಸಂಕಲ್ಪವನ್ನು ಮಾಡಿದನು. ಶ್ರೀಕೃಷ್ಣನು ಚಾಣೂರನೊಡನೆಯೂ ಬಲರಾಮನು ಮುಷ್ಟಿಕನೊಡನೆಯೂ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ॥ ೧ ॥ ಒಬ್ಬರು ಮತ್ತೊಬ್ಬರನ್ನು ಗೆಲ್ಲಬೇಕೆಂಬ ಛಲದಿಂದ ಪರಸ್ಪರವಾಗಿ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ತೊಡರುಗಾಲು ಕೊಟ್ಟುಕೊಂಡು ಅಲ್ಲಿಂದಿಲ್ಲಿಗೂ, ಇಲ್ಲಿಂದಲ್ಲಿಗೂ ಎಳೆದಾಡಿದರು. ॥ ೨ ॥ ಅವರು ಕೈಯಿಂದ ಕೈಯನ್ನೂ, ಮೊಣಕಾಲಿನಿಂದ ಮೊಣಕಾಲನ್ನೂ, ತಲೆಯಿಂದ ತಲೆಯನ್ನೂ, ಉಬ್ಬಿದ ಎದೆಯಿಂದ ಎದೆಯನ್ನು ಪರಸ್ಪರ ಪ್ರಹರಿಸುತ್ತಿದ್ದರು. ॥ ೩ ॥ ಹೀಗೆ ಅನೇಕ ಪಟ್ಟುಗಳನ್ನು ಪ್ರಯೋಗಿಸುತ್ತಾ ಎದುರಾಳಿಯನ್ನು ಹಿಡಿದು ಗರ-ಗರನೆ ತಿರುಗಿಸುತ್ತಾ ದೂರಕ್ಕೆ ತಳ್ಳಿಬಿಡುತ್ತಿದ್ದರು. ತೋಳಿನ ಸಂದಿಯಲ್ಲಿ ಅಮುಕುತ್ತಿದ್ದರು. ನೆಲದ ಮೇಲೆ ಬೀಳಿಸಿ ಉರುಳಿಸುತ್ತಿದ್ದರು. ವೇಗದಿಂದ ಮುನ್ನುಗ್ಗಿಬಂದು ಒಬ್ಬರು ಮತ್ತೊಬ್ಬರ ಮೇಲೆ ಬೀಳುತ್ತಿದ್ದರು. ಸಮಯವರಿತು ಹಿಂದಕ್ಕೂ ಸರಿಯುತ್ತಿದ್ದರು. ಕೆಳಕ್ಕೆ ಬಿದ್ದವನ ಕೈ-ಕಾಲುಗಳನ್ನು ಹಿಡಿದು ದರದರನೆ ಎಳೆದಾಡುತ್ತಿದ್ದರು. ಮುದುರಿ ಮಟ್ಟೆಗಟ್ಟಿ ಎತ್ತಿ ಹಾಕುವರು. ಹೆಕ್ಕತ್ತಿನ ಮೇಲೆ ತೋಳನಿಟ್ಟು ಬಗ್ಗಿಸುತ್ತಿದ್ದರು. ಎದುರಾಳಿಯು ಹಾಕಿದ ಪಟ್ಟುಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಹೀಗೆ ವಿಜಯಾಕಾಂಕ್ಷಿಗಳಾದ ಅವರು ಸೆಣಸಾಡುತ್ತಿದ್ದರು. ॥ ೪-೫ ॥

ಪರೀಕ್ಷಿತನೇ! ಆ ಮಲ್ಲಯುದ್ಧವನ್ನು ನೋಡಲು ಹಲವಾರು ಸ್ತ್ರೀಯರೂ ಬಂದಿದ್ದರು. ದೊಡ್ಡ-ದೊಡ್ಡ ಜಟ್ಟಿಗಳೊಡನೆ ಬಾಲಕರಾದ ರಾಮ-ಕೃಷ್ಣರು ಸೆಣಸಾಡುತ್ತಿರುವುದನ್ನು ಅವರು ನೋಡಿದರು. ಅವರ ಅನುಕಂಪವು ಸ್ವಾಭಾವಿಕವಾಗಿ ಶ್ರೀಕೃಷ್ಣ-ಬಲರಾಮರ ಮೇಲಿತ್ತು. ಗುಂಪು-ಗುಂಪಾಗಿ ಸೇರಿ ಹೀಗೆ ಮಾತನಾಡಿಕೊಂಡರು. ॥ ೬ ॥ ನೋಡಿ, ಇಲ್ಲಿ ಕಂಸರಾಜನ ಸಭಾಸದರು ದೊಡ್ಡ ಅನ್ಯಾಯವನ್ನು, ಅಧರ್ಮವನ್ನು ಮಾಡುತ್ತಿದ್ದಾರೆ. ರಾಜನ ಎದುರಿನಲ್ಲೇ ಬಲಿಷ್ಠರಾದ ಜಟ್ಟಿಗಳಿಗೂ, ನಿರ್ಬಲರಾದ ಬಾಲಕರಿಗೂ ಕಾಳಗವಾಗುವುದನ್ನು ಅನುಮೋದಿಸುತ್ತಿದ್ದಾರಲ್ಲ! ಇದು ಎಂತಹ ಖೇದದ ವಿಷಯವಾಗಿದೆ? ॥ ೭ ॥ ಗೆಳತಿಯರೇ! ಈ ಜಟ್ಟಿಗಳ ಪ್ರತಿಯೊಂದು ಅಂಗಾಂಗಗಳು ವಜ್ರದಂತೆ ಕಠೋರವಾಗಿವೆ. ನೋಡಲು ಇವರು ಪರ್ವತಗಳಂತೆಯೇ ಇದ್ದಾರೆ. ಆದರೆ ಶ್ರೀಕೃಷ್ಣ-ಬಲರಾಮರು ಇನ್ನೂ ಯೌವನಾವಸ್ಥೆಯನ್ನು ಹೊಂದಿರುವುದಿಲ್ಲ. ಕಿಶೋರಾವಸ್ಥೆಯಲ್ಲೇ ಇದ್ದಾರೆ. ಇವರ ಒಂದೊಂದು ಅಗಾಂಗಗಳು ಸುಕೋಮಲವಾಗಿವೆ. ಆ ಬಲಿಷ್ಠರೆಲ್ಲಿ? ಈ ಸುಕೋಮಲರಾದ ಬಾಲಕರೆಲ್ಲಿ? ॥ ೮ ॥

ಧರ್ಮವ್ಯತಿಕ್ರಮೋ ಹ್ಯಸ್ಯ ಸಮಾಜಸ್ಯ ಧ್ರುವಂ ಭವೇತ್ ।
ಯತ್ರಾಧರ್ಮಃ ಸಮುತ್ತಿಷ್ಠೇನ್ನ ಸ್ಥೇಯಂ ತತ್ರ ಕರ್ಹಿಚಿತ್ ॥ ೯ ॥

ನ ಸಭಾಂ ಪ್ರವಿಶೇತ್ ಪ್ರಾಜ್ಞಃ ಸಭ್ಯದೋಷಾನನುಸ್ಮರನ್ ।
ಅಬ್ರುವನ್ವಿಬ್ರುವನ್ನಜ್ಞೋ ನರಃ ಕಿಲ್ಬಿಷಮಶ್ನುತೇ ॥ ೧೦ ॥

ವಲ್ಗತಃ ಶತ್ರುಮಭಿತಃ ಕೃಷ್ಣಸ್ಯ ವದನಾಂಬುಜಮ್ ।
ವೀಕ್ಷ್ಯತಾಂ ಶ್ರಮವಾರ್ಯುಪ್ತಂ ಪದ್ಮಕೋಶಮಿವಾಂಬುಭಿಃ ॥ ೧೧ ॥

ಕಿಂ ನ ಪಶ್ಯತ ರಾಮಸ್ಯ ಮುಖಮಾತಾಮ್ರಲೋಚನಮ್ ।
ಮುಷ್ಟಿಕಂ ಪ್ರತಿ ಸಾಮರ್ಷಂ ಹಾಸಸಂರಂಭಶೋಭಿತಮ್ ॥ ೧೨ ॥

ಪುಣ್ಯಾ ಬತ ವ್ರಜಭುವೋ ಯದಯಂ ನೃಲಿಂಗ-
ಗೂಢಃ ಪುರಾಣಪುರುಷೋ ವನಚಿತ್ರಮಾಲ್ಯಃ ।
ಗಾಃ ಪಾಲಯನ್ ಸಹಬಲಃ ಕ್ವಣಯಂಶ್ಚ ವೇಣುಂ
ವಿಕ್ರೀಡಯಾಂಚತಿ ಗಿರಿತ್ರರಮಾರ್ಚಿತಾಂಘ್ರಿಃ ॥ ೧೩ ॥

ಗೋಪ್ಯಸ್ತಪಃ ಕಿಮಚರನ್ ಯದಮುಷ್ಯ ರೂಪಂ
ಲಾವಣ್ಯಸಾರಮಸಮೋರ್ಧ್ವಮನನ್ಯಸಿದ್ಧಮ್ ।
ದೃಗ್ಭಿಃ ಪಿಬಂತ್ಯನುಸವಾಭಿನವಂ ದುರಾಪ-
ಮೇಕಾಂತಧಾಮ ಯಶಸಃ ಶ್ರಿಯ ಐಶ್ವರಸ್ಯ ॥ ೧೪ ॥

ಇಲ್ಲಿ ಸೇರಿದ ಎಲ್ಲರಿಗೂ, ನೋಡಿದವರೆಲ್ಲರಿಗೂ ಧರ್ಮೋಲ್ಲಂಘನೆಯ ಪಾಪ ತಟ್ಟುವುದು ಖಂಡಿತ. ಸಖಿಯರೇ! ಈಗ ನಾವು ಇಲ್ಲಿಂದ ಹೋಗುವುದೇ ಯುಕ್ತವಾಗಿದೆ. ಅಧರ್ಮದ ಪ್ರಧಾನತೆ ಇರುವಲ್ಲಿ ಎಂದೂ ಇರಬಾರದೆಂಬುದು ಶಾಸ್ತ್ರದ ನಿಯಮವಾಗಿದೆ. ॥ ೯ ॥ ನೋಡಿ, ಬುದ್ಧಿವಂತರಾದವರು ಸಭಾಸದರ ದೋಷಗಳನ್ನು ತಿಳಿದು-ತಿಳಿದು ಆ ಸಭೆಯಲ್ಲಿ ಹೋಗಿ ಕುಳಿತಿರಬಾರದು ಎಂದು ಶಾಸ್ತ್ರ ಹೇಳುತ್ತದೆ. ಏಕೆಂದರೆ, ಅಲ್ಲಿಗೆ ಹೋಗಿ ಆ ಅವಗುಣಗಳನ್ನು ಹೇಳುವುದು, ಸುಮ್ಮನೆ ಇರುವುದು, ಅಥವಾ ನಾನು ಬಲ್ಲವನಲ್ಲ ಎಂದು ಹೇಳುವುದು. ಈ ಮೂರು ವಿಷಯಗಳು ಮನುಷ್ಯನನ್ನು ದೋಷಭಾಗಿಯಾಗಿಸುತ್ತವೆ. ॥ ೧೦ ॥ ಸಖಿಯರೇ! ಶತ್ರುವಿನ ಸುತ್ತಲೂ ಸುತ್ತುತ್ತಿರುವ ಶ್ರೀಕೃಷ್ಣನ ಮುಖಕಮಲವನ್ನಾದರೂ ನೋಡಿರಿ. ಕಾಳಗದ ಆಯಾಸದಿಂದಾಗಿ ತಾವರೆಯ ಎಲೆಯ ಮೇಲಿನ ನೀರಿನ ಬಿಂದುಗಳಂತೆ ಬೆವರಿನ ಬಿಂದುಗಳು ಅವರ ಮುಖದ ಮೇಲೆ ಕಂಗೊಳಿಸುತ್ತಿವೆ. ॥ ೧೧ ॥ ಸಖಿಯರೇ! ಬಲರಾಮನ ಮುಖವನ್ನಾದರೂ ನೋಡುತ್ತಿರುವೆಯಲ್ಲ! ಮುಷ್ಟಿಕನ ಮೇಲಿನ ಕೋಪದಿಂದಾಗಿ ಅವನ ಕಣ್ಣುಗಳು ತಾಮ್ರದಂತೆ ಕೆಂಪಾಗಿವೆ. ಹೀಗಿದ್ದರೂ ಅವನ ಹುಸಿನಗೆಯಿಂದಾಗಿ ಅವನ ಮುಖವು ಅತ್ಯಂತ ಶೋಭಾಯಮಾನವಾಗಿ ಕಾಣುತ್ತದೆ. ॥ ೧೨ ॥ ಗೆಳತಿಯರೇ! ನಿಜವಾಗಿ ಹೇಳುವುದಾದರೆ ವ್ರಜಭೂಮಿಯು ಪರಮಪವಿತ್ರವೂ, ಧನ್ಯತಮವೂ ಆಗಿದೆ. ಏಕೆಂದರೆ, ಅಲ್ಲಿಯೇ ಈ ಪುರುಷೋತ್ತಮರು ಮನುಷ್ಯ ವೇಷದಲ್ಲಿ ಅಡಗಿಕೊಂಡಿರುವರು. ಸಾಕ್ಷಾತ್ ಭಗವಾನ್ ಶಂಕರ ಮತ್ತು ಲಕ್ಷ್ಮೀದೇವಿಯೂ ಯಾರ ಚರಣಗಳನ್ನು ಪೂಜಿಸುತ್ತಿರುವರೋ ಆ ಪ್ರಭುವೇ ಅಲ್ಲಿ ಚಿತ್ರವಿಚಿತ್ರವಾದ ಕಾಡು ಪುಷ್ಪಗಳ ಮಾಲೆಯನ್ನು ಧರಿಸಿಕೊಂಡು ಬಲರಾಮನೊಂದಿಗೆ ಕೊಳಲನ್ನೂದುತ್ತಾ ಹಸುಗಳನ್ನು ಮೇಯಿಸುತ್ತಾ ಬಗೆ-ಬಗೆಯ ಆಟಗಳನ್ನಾಡುತ್ತಾ ಆನಂದದಿಂದ ವಿಚರಿಸುತ್ತಿದ್ದಾನೆ. ॥ ೧೩ ॥ ಸಖೀಯರೇ! ಎರಡು ಕಣ್ಣುಗಳಿಂದಲೂ ನಿತ್ಯನಿರಂತರವಾಗಿ ಶ್ರೀಕೃಷ್ಣನ ರೂಪವೆಂಬ ಮಧುವನ್ನು ಪಾನಮಾಡುತ್ತಿರುವ ಆ ಗೋಪಿಯರು ಎಂತಹ ತಪಸ್ಸನ್ನು ಮಾಡಿದ್ದರೋ ತಿಳಿಯದು. ಅವನ ರೂಪವೆಂಬುದು ಲಾವಣ್ಯದ ಸಾರವಾಗಿದೆ. ಪ್ರಪಂಚದಲ್ಲಿ ಅಥವಾ ಇದರ ಹೊರಗೆ ಯಾರ ರೂಪವೂ ಇವನಿಗೆ ಸಮಾನವಾಗಲಾರದು. ಹೀಗಿರುವಾಗ ಹೆಚ್ಚಿಗೆ ಹೇಗಿದ್ದೀತು ? ಅವನ ದಿವ್ಯ ರೂಪವು ವಸ್ತ್ರಾಭರಣಗಳಿಂದಾಗಲೀ, ಅಂಗರಾಗಗಳಿಂದಾಗಲೀ ಸಿದ್ಧವಾದುದಲ್ಲ, ಸ್ವಯಂ ಸಿದ್ಧವಾದುದು. ಅಂತಹ ಚೇತೋಹಾರಿಯಾದ ರೂಪವನ್ನು ನೋಡುತ್ತಿದ್ದರೆ ಎಂದಿಗೂ ತೃಪ್ತಿಯೇ ಉಂಟಾಗುವುದಿಲ್ಲ, ಏಕೆಂದರೆ, ಇದು ಪ್ರತಿಕ್ಷಣವೂ ಹೊಸದಾಗಿಯೇ ಇರುತ್ತದೆ, ನಿತ್ಯ ನೂತನವಾಗಿದೆ. ಸಮಗ್ರ ಯಶ, ಸೌಂದರ್ಯ ಮತ್ತು ಐಶ್ವರ್ಯ ಇವುಗಳು ಇವನಲ್ಲೇ ಆಶ್ರಿತವಾಗಿರುತ್ತವೆ. ಆದರೆ ಇವನ ದರ್ಶನವಾದರೋ ಇತರರಿಗೆ ದುರ್ಲಭವೇ ಆಗಿದೆ. ಗೋಪಿಯರ ಭಾಗ್ಯದಿಂದಲೇ ಅವರಿಗೆ ಸರ್ವದಾ ಲಭ್ಯವಾಗಿದೆ. ॥ ೧೪ ॥

ಯಾ ದೋಹನೇಽವಹನನೇ ಮಥನೋಪಲೇಪ-
ಪ್ರೇಂಖೇಂಖನಾರ್ಭರುದಿತೋಕ್ಷಣಮಾರ್ಜನಾದೌ ।
ಗಾಯಂತಿ ಚೈನಮನುರಕ್ತಧಿಯೋಽಶ್ರುಕಂಠ್ಯೋ
ಧನ್ಯಾ ವ್ರಜಸ್ತ್ರಿಯ ಉರುಕ್ರಮಚಿತ್ತಯಾನಾಃ ॥ ೧೫ ॥

ಸಖಿಯರೇ! ವ್ರಜದ ಗೋಪಿಯರು ಎಂತಹ ಧನ್ಯರು! ನಿರಂತರವಾಗಿ ಶ್ರೀಕೃಷ್ಣನಲ್ಲಿಯೇ ಚಿತ್ತವು ನೆಟ್ಟುಹೋದ ಕಾರಣ – ಹಸುಗಳನ್ನು ಕರೆಯುವಾಗ ಭತ್ತವನ್ನು ಕುಟ್ಟುವಾಗ, ಮೊಸರು ಕಡೆಯುವಾಗ, ಮನೆಯನ್ನು ಸಾರಿಸುವಾಗ, ತೊಟ್ಟಿಲನ್ನು ತೂಗುವಾಗ, ಅಳುತ್ತಿರುವ ಮಕ್ಕಳನ್ನು ಸಮಾಧಾನಪಡಿಸುವಾಗ, ಮಕ್ಕಳಿಗೆ ನೀರೆರೆಯುವಾಗ, ನೀರನ್ನು ಚುಮುಕಿಸಿ ಗುಡಿಸುವಾಗ – ಹೀಗೆ ಯಾವುದೇ ಕೆಲಸ ಮಾಡುತ್ತಿದ್ದರೂ ಶ್ರೀಕೃಷ್ಣನನ್ನೇ ಹೃತ್ಕಮಲದಲ್ಲಿ ನೆಲೆಗೊಳಿಸಿಕೊಂಡು ಆನಂದಾಶ್ರುವನ್ನು ಸುರಿಸುತ್ತಾ ಅವನ ಲೀಲಾ ಗುಣಗಳನ್ನು ಗಾನ ಮಾಡುತ್ತಾ ಮೈಮರೆಯುವರು. ॥ ೧೫ ॥

ಪ್ರಾತರ್ವ್ರಜಾದ್ವ್ರಜತ ಆವಿಶತಶ್ಚ ಸಾಯಂ
ಗೋಭಿಃ ಸಮಂ ಕ್ವಣಯತೋಽಸ್ಯ ನಿಶಮ್ಯ ವೇಣುಮ್ ।
ನಿರ್ಗಮ್ಯ ತೂರ್ಣಮಬಲಾಃ ಪಥಿ ಭೂರಿಪುಣ್ಯಾಃ
ಪಶ್ಯಂತಿ ಸಸ್ಮಿತಮುಖಂ ಸದಯಾವಲೋಕಮ್ ॥ ೧೬ ॥

ಸಖಿಯರೇ! ಶ್ರೀಕೃಷ್ಣನು ಬೆಳಗಾಗುತ್ತಲೇ ಹಸುಗಳನ್ನು ಹೊಡೆದುಕೊಂಡು ಕಾಡಿಗೆ ಹೋಗುವಾಗ, ಸಾಯಂಕಾಲ ವ್ರಜಕ್ಕೆ ಹಿಂದಿರುಗುವಾಗ ಕೊಳಲನ್ನು ನುಡಿಸುತ್ತಾ ಇರುತ್ತಾನೆ. ಶ್ರೀಕೃಷ್ಣನ ಮುರಳಿಯ ಧ್ವನಿಯನ್ನು ಕೇಳುತ್ತಲೇ ಮೈಮರೆಯುವ ಗೋಪಿಯರು ಮಾಡುತ್ತಿದ್ದ ಕೆಲಸವನ್ನು ಅಷ್ಟಕ್ಕೆ ನಿಲ್ಲಿಸಿ, ಮುರಳೀಧರನ ಕಿರುನಗೆಯನ್ನೂ, ಕುಡಿನೋಟವನ್ನೂ ನೋಡುವುದಕ್ಕಾಗಿ ಬೀದಿಗೆ ಓಡುಬರುವರು. ಹಾದಿಯ ಇಕ್ಕೆಡೆಯಲ್ಲೂ ನಿಂತು ಜಗದಾನಂದ ಕಂದನ ಮುಖಾರವಿಂದವನ್ನು ನೋಡಿ ಆನಂದತುಂದಿಲರಾಗುತ್ತಾರೆ. ನಿಶ್ಚಯವಾಗಿಯೂ ಗೋಪಿಯರು ಮಹಾಪುಣ್ಯವತಿಯರೇ ಆಗಿದ್ದಾರೆ. ॥ ೧೬ ॥

ಏವಂ ಪ್ರಭಾಷಮಾಣಾಸು ಸ್ತ್ರೀಷು ಯೋಗೇಶ್ವರೋ ಹರಿಃ ।
ಶತ್ರುಂ ಹಂತುಂ ಮನಶ್ಚಕ್ರೇ ಭಗವಾನ್ ಭರತರ್ಷಭ ॥ ೧೭ ॥

ಭರತವಂಶ ಶಿರೋಮಣಿಯೇ! ಮಥುರಾಪಟ್ಟಣದ ಸ್ತ್ರೀಯರು ಗುಂಪು-ಗುಂಪಾಗಿ ಹೀಗೆ ಮಾತನಾಡಿಕೊಳ್ಳುತ್ತಿದ್ದಾಗ ಯೋಗೇಶ್ವರನಾದ ಭಗವಾನ್ ಶ್ರೀಕೃಷ್ಣನು ಶತ್ರುವನ್ನು ಸಂಹರಿಸಲು ಮನಮಾಡಿದನು. ॥ ೧೭ ॥ ಸ್ತ್ರೀಯರ ಭಯದಿಂದ ಕೂಡಿದ ಈ ಮಾತುಗಳನ್ನು ಪಕ್ಕದಲ್ಲಿಯೇ ಸೆರೆಮನೆಯಲ್ಲಿದ್ದ ದೇವಕಿ-ವಸುದೇವರೂ ಕೇಳಿಸಿಕೊಂಡರು. ಪುತ್ರಸ್ನೇಹದಿಂದ ಅವರು ಶೋಕದಿಂದ ವಿಹ್ವಲರಾದರು. ಅವರ ಹೃದಯದಲ್ಲಿ ಅತ್ಯಂತ ಪೀಡೆಯುಂಟಾಯಿತು. ಏಕೆಂದರೆ, ಅವರು ತಮ್ಮ ಮಕ್ಕಳಾದ ಬಲರಾಮ-ಶ್ರೀಕೃಷ್ಣರ ಬಲ ಪರಾಕ್ರಮವನ್ನು ತಿಳಿದವರಾಗಿರಲಿಲ್ಲ. ॥ ೧೮ ॥ ಭಗವಾನ್ ಶ್ರೀಕೃಷ್ಣ ಮತ್ತು ಚಾಣೂರರಿಬ್ಬರೂ ಯಾವ ರೀತಿಯಿಂದ ಮಲ್ಲಯುದ್ಧದ ನಿಯಮಗಳನ್ನು ಅನುಸರಿಸಿ ಕಾದಾಡುತ್ತಿದ್ದರೋ, ಹಾಗೆಯೇ ಬಲರಾಮ ಮುಷ್ಟಿಕರೂ ಕಾಳಗವಾಡುತ್ತಿದ್ದರು. ॥ ೧೯ ॥ ಶ್ರೀಕೃಷ್ಣನ ಅಂಗಾಂಗಗಳೆಲ್ಲವೂ ವಜ್ರಕ್ಕಿಂತಲೂ ಕಠಿಣವಾಗಿದ್ದವು. ಅವುಗಳ ಪ್ರಹಾರದಿಂದ ಚಾಣೂರನ ನರಗಳೆಲ್ಲ ಸಡಿಲವಾದುವು. ಯಾತನೆಯನ್ನು ಸಹಿಸಲಾರದೆ ಶರೀರದ ಸಂದುಗಳೆಲ್ಲ ಕಳಚಿ ಹೋಗುವಂತೆ ಅವನಿಗೆ ಅನಿಸಿತು. ಅವನು ಆಯಾಸಗೊಂಡಿದ್ದನು. ॥ ೨೦ ॥ ಆಗ ಅವನು ಅತ್ಯಂತ ಕ್ರುದ್ಧನಾಗಿ ಗಿಡುಗಪಕ್ಷಿಯಂತೆ ಎಗರಿ ಎರಡೂ ಮುಷ್ಟಿಗಳನ್ನು ಬಿಗಿದು ಭಗವಾನ್ ಶ್ರೀಕೃಷ್ಣನ ವಕ್ಷಸ್ಥಳದಲ್ಲಿ ಬಲವಾಗಿ ಪ್ರಹರಿಸಿದನು. ॥ ೨೧ ॥ ಆದರೆ ಆ ಪ್ರಹಾರದಿಂದ ಭಗವಂತನು ಸ್ವಲ್ಪವೂ ವಿಚಲಿತನಾಗಲಿಲ್ಲ. ಹೂವಿನ ಹಾರದಿಂದ ಆನೆಯನ್ನು ಹೊಡೆದಂತೆ ಆಯಿತು. ಅವನು ಚಾಣೂರನ ಎರಡೂ ಭುಜಗಳನ್ನು ಹಿಡಿದು, ಅವನನ್ನು ಅಂತರಿಕ್ಷದಲ್ಲಿ ವೇದವಾಗಿ

ಸಭಯಾಃ ಸ್ತ್ರೀಗಿರಃ ಶ್ರುತ್ವಾ ಪುತ್ರಸ್ನೇಹಶುಚಾಽಽತುರೌ ।
ಪಿತರಾವನ್ವತಪ್ಯೇತಾಂ ಪುತ್ರಯೋರಬುಧೌ ಬಲಮ್ ॥ ೧೮ ॥

ತೈಸ್ತೈರ್ನಿಯುದ್ಧವಿಧಿಭಿರ್ವಿವಿಧೈರಚ್ಯುತೇತರೌ ।
ಯುಯುಧಾತೇ ಯಥಾನ್ಯೋನ್ಯಂ ತಥೈವ ಬಲಮುಷ್ಟಿಕೌ ॥ ೧೯ ॥

ಭಗವದ್ಗಾತ್ರನಿಷ್ಪಾತೈರ್ವಜ್ರನಿಷ್ಪೇಷನಿಷ್ಠುರೈಃ ।
ಚಾಣೂರೋ ಭಜ್ಯಮಾನಾಂಗೋ ಮುಹುರ್ಗ್ಲಾನಿಮವಾಪ ಹ ॥ ೨೦ ॥

ಸ ಶ್ಯೇನವೇಗ ಉತ್ಪತ್ಯ ಮುಷ್ಟೀಕೃತ್ಯ ಕರಾವುಭೌ ।
ಭಗವಂತಂ ವಾಸುದೇವಂ ಕ್ರುದ್ಧೋ ವಕ್ಷಸ್ಯಬಾಧತ ॥ ೨೧ ॥

ನಾಚಲತ್ತತ್ಪ್ರಹಾರೇಣ ಮಾಲಾಹತ ಇವ ದ್ವಿಪಃ ।
ಬಾಹ್ವೋರ್ನಿಗೃಹ್ಯ ಚಾಣೂರಂ ಬಹುಶೋ ಭ್ರಾಮಯನ್ ಹರಿಃ
॥ ೨೨ ॥

ಭೂಪೃಷ್ಠೇ ಪೋಥಯಾಮಾಸ ತರಸಾ ಕ್ಷೀಣಜೀವಿತಮ್ ।
ವಿಸ್ರಸ್ತಾಕಲ್ಪಕೇಶಸ್ರಗಿಂದ್ರಧ್ವಜ ಇವಾಪತತ್
॥ ೨೩ ॥

ತಥೈವ ಮುಷ್ಟಿಕಃ ಪೂರ್ವಂ ಸ್ವಮುಷ್ಟ್ಯಾಭಿಹತೇನ ವೈ ।
ಬಲಭದ್ರೇಣ ಬಲಿನಾ ತಲೇನಾಭಿಹತೋ ಭೃಶಮ್
॥ ೨೪ ॥

ಪ್ರವೇಪಿತಃ ಸ ರುಧಿರಮುದ್ವಮನ್ ಮುಖತೋಽರ್ದಿತಃ ।
ವ್ಯಸುಃ ಪಪಾತೋರ್ವ್ಯುಪಸ್ಥೇ ವಾತಾಹತ ಇವಾಂಘ್ರಿಪಃ
॥ ೨೫ ॥

ತತಃ ಕೂಟಮನುಪ್ರಾಪ್ತಂ ರಾಮಃ ಪ್ರಹರತಾಂ ವರಃ ।
ಅವಧೀಲ್ಲೀಲಯಾ ರಾಜನ್ ಸಾವಜ್ಞಂ ವಾಮಮುಷ್ಟಿನಾ
॥ ೨೬ ॥

ತರ್ಹ್ಯೇವ ಹಿ ಶಲಃ ಕೃಷ್ಣಪದಾಪಹತಶೀರ್ಷಕಃ ।
ದ್ವಿಧಾ ವಿದೀರ್ಣಸ್ತೋಶಲಕ ಉಭಾವಪಿ ನಿಪೇತತುಃ
॥ ೨೭ ॥

ಚಾಣೂರೇ ಮುಷ್ಟಿಕೇ ಕೂಟೇ ಶಲೇ ತೋಶಲಕೇ ಹತೇ ।
ಶೇಷಾಃ ಪ್ರದುದ್ರುವುರ್ಮಲ್ಲಾಃ ಸರ್ವೇ ಪ್ರಾಣಪರೀಪ್ಸವಃ
॥ ೨೮ ॥

ಗೋಪಾನ್ ವಯಸ್ಯಾನಾಕೃಷ್ಯ ತೈಃ ಸಂಸೃಜ್ಯ ವಿಜಹ್ರತುಃ ।
ವಾದ್ಯಮಾನೇಷು ತೂರ್ಯೇಷು ವಲ್ಗಂತೌ ರುತನೂಪುರೌ
॥ ೨೯ ॥

ಜನಾಃ ಪ್ರಜಹೃಷುಃ ಸರ್ವೇ ಕರ್ಮಣಾ ರಾಮಕೃಷ್ಣಯೋಃ ।
ಋತೇ ಕಂಸಂ ವಿಪ್ರಮುಖ್ಯಾಃ ಸಾಧವಃ ಸಾಧು ಸಾಧ್ವಿತಿ
॥ ೩೦ ॥

ಹತೇಷು ಮಲ್ಲವರ್ಯೇಷು ವಿದ್ರುತೇಷು ಚ ಭೋಜರಾಟ್ ।
ನ್ಯವಾರಯತ್ಸ್ವತೂರ್ಯಾಣಿ ವಾಕ್ಯಂ ಚೇದಮುವಾಚ ಹ
॥ ೩೧ ॥

ನಿಃಸಾರಯತ ದುರ್ವೃತ್ತೌ ವಸುದೇವಾತ್ಮಜೌ ಪುರಾತ್ ।
ಧನಂ ಹರತ ಗೋಪಾನಾಂ ನಂದಂ ಬಧ್ನೀತ ದುರ್ಮತಿಮ್
॥ ೩೨ ॥

ಗಿರಿ-ಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿಬಿಟ್ಟನು. ಪರೀಕ್ಷಿತನೆ! ಚಾಣೂರನ ಪ್ರಾಣಗಳಾದರೋ ತಿರುಗಿಸುವಾಗಲೇ ಹೊರಟು ಹೋಗಿದ್ದವು. ಅವನ ವೇಷಭೂಷಣಗಳೆಲ್ಲ ಅಸ್ತವ್ಯಸ್ತವಾಗಿ, ಕೆದರಿದ ಕೂದಲುಗಳಿಂದ ಇಂದ್ರಧ್ವಜ (ಇಂದ್ರನ ಪೂಜೆಗಾಗಿ ನಿಲ್ಲಿಸಿದ್ದ ದೊಡ್ಡ ಬಾವುಟ)ದಂತೆ ಭೂಮಿಗೆ ಬಿದ್ದನು.॥೨೨-೨೩॥ ಹೀಗೆಯೇ ಮುಷ್ಟಿಕನೂ ಬಲರಾಮನಿಗೆ ಒಂದು ಗುದ್ದು ಗುದ್ದಿದನು. ಆಗ ಮಹಾಬಲಿಯಾದ ಬಲರಾಮನು ಅವನಿಗೆ ಜೋರಾಗಿ ಒಂದು ಏಟನ್ನು ಕೊಟ್ಟನು. ॥ ೨೪ ॥ ಆ ಏಟಿನಿಂದ ಮುಷ್ಟಿಕನು ನಡುಗುತ್ತಾ ಬಿರುಗಾಳಿಗೆ ಉರುಳುವ ಮರದಂತೆ ಅತ್ಯಂತ ಪೀಡಿತನಾಗಿ ರಕ್ತವನ್ನು ಕಾರುತ್ತಾ, ಪ್ರಾಣಹೀನನಾಗಿ ನೆಲಕ್ಕೆ ಕುಸಿದು ಬಿದ್ದನು. ॥ ೨೫ ॥ ಎಲೈ ರಾಜನೇ! ಅನಂತರ ಕೂಟನೆಂಬ ಜಟ್ಟಿಯು ಯೋಧರಲ್ಲಿ ಶ್ರೇಷ್ಠನಾದ ಭಗವಾನ್ ಬಲರಾಮನನ್ನು ಇದಿರಿಸಲೋಸುಗ ಬರುತ್ತಲೇ ಕೇವಲ ವಿನೋದದಿಂದಲೇ ಬಲರಾಮನು ನಿರ್ಲಕ್ಷಪೂರ್ವಕವಾಗಿ ಎಡಗೈಯ ಮುಷ್ಟಿಯಿಂದ ಅವನನ್ನು ಕೊಂದು ಹಾಕಿದನು. ॥ ೨೬ ॥ ಅದೇ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನು ಕಾಲಿನ ಒದೆಯಿಂದಲೇ ಶಲನೆಂಬ ಜಟ್ಟಿಯ ರುಂಡ-ಮುಂಡಗಳನ್ನು ಬೇರ್ಪಡಿಸಿದನು. ತೋಶಲನೆಂಬ ಜಟ್ಟಿಯನ್ನು ಹುಲ್ಲನ್ನು ಸಿಗಿದು ಹಾಕುವಂತೆ ಸೀಳಿ ಎರಡು ತುಂಡುಗಳಾಗಿಸಿದನು. ಹೀಗೆ ಇಬ್ಬರೂ ಮಲ್ಲರೂ ಧರಾಶಾಯಿಯಾದರು. ॥ ೨೭ ॥ ಚಾಣೂರ, ಮುಷ್ಟಿಕ, ಕೂಟ, ಶಲ, ತೋಶಲ ಎಂಬ ಐದುಮಂದಿ ಜಟ್ಟಿಗಳು ಸತ್ತುಹೋದಾಗ ಉಳಿದ ಜಟ್ಟಿಗಳು ಪ್ರಾಣಗಳನ್ನು ಉಳಿಸಿಕೊಳ್ಳಲೋಸುಗ ಕಾಲಿಗೆ ಬುದ್ಧಿ ಹೇಳಿದರು. ॥ ೨೮ ॥ ಅವರೆಲ್ಲರೂ ಓಡಿಹೋದ ಬಳಿಕ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರು ತಮ್ಮ ಸಮವಯಸ್ಕ ಗೊಲ್ಲ ಬಾಲಕರನ್ನು ಎಳೆದೆಳೆದು ತಂದು ಅವರೊಂದಿಗೆ ಕುಸ್ತಿಯಾಡುತ್ತಾ, ಕುಣಿ-ಕುಣಿದು ಭೇರಿ-ನಗಾರಿಗಳ ಧ್ವನಿಯೊಂದಿಗೆ ನೂಪುರಗಳ ನಿನಾದವನ್ನು ಸೇರಿಸುತ್ತಾ ಮಲ್ಲ- ಕ್ರೀಡೆಯಾಡತೊಡಗಿದರು. ॥ ೨೯ ॥

ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರ ಈ ಅದ್ಭುತ ಲೀಲೆಯನ್ನು ನೋಡಿದ ಪ್ರೇಕ್ಷಕರಿಗೆಲ್ಲ ಅತ್ಯಂತ ಆನಂದವಾಯಿತು. ಶ್ರೇಷ್ಠ ಬ್ರಾಹ್ಮಣರೂ, ಸತ್ಪುರುಷರೂ ಸಾಧು! ಸಾಧು! ಭಲೇ! ಎಂದು ಹೇಳುತ್ತಾ ಪ್ರಶಂಸಿಸತೊಡಗಿದರು. ಆದರೆ ಕಂಸನಿಗೆ ಮಾತ್ರ ಇದರಿಂದ ಅತೀವ ದುಃಖವಾಗಿ ಕೆರಳಿ ಹೋದನು. ॥ ೩೦ ॥ ಅವನ ಮುಖ್ಯ-ಮುಖ್ಯರಾದ ಮಲ್ಲರು ಸತ್ತುಹೋಗಿ, ಉಳಿದವರೆಲ್ಲರೂ ಓಡಿಹೋದಾಗ ಭೋಜರಾಜನಾದ ಕಂಸನು ವಾದ್ಯವಾದನಗಳನ್ನು ನಿಲ್ಲಿಸಿಬಿಟ್ಟನು. ಕೋಪೋದ್ರಿಕ್ತನಾಗಿ ತನ್ನ ಸೇವಕರಿಗೆ ಹೀಗೆ ಆಜ್ಞಾಪಿಸಿದನು. ॥ ೩೧ ॥ ಕೆಟ್ಟನಡತೆಯುಳ್ಳ ವಸುದೇವನ ಈ ಇಬ್ಬರೂ ಮಕ್ಕಳನ್ನು ನಗರದಿಂದ ಹೊರಗಟ್ಟಿರಿ. ಈ ಗೋಪರಲ್ಲಿ ಇರುವ ಹಣವೆಲ್ಲವನ್ನೂ ಕಸಿದುಕೊಳ್ಳಿರಿ. ದುರ್ಬುದ್ಧಿಯಾದ ನಂದನನ್ನು ಸೆರೆಹಿಡಿಯಿರಿ. ॥ ೩೨ ॥

ವಸುದೇವಸ್ತು ದುರ್ಮೇಧಾ ಹನ್ಯತಾಮಾಶ್ವಸತ್ತಮಃ ।
ಉಗ್ರಸೇನಃ ಪಿತಾ ಚಾಪಿ ಸಾನುಗಃ ಪರಪಕ್ಷಗಃ
॥ ೩೩ ॥

ಏವಂ ವಿಕತ್ಥಮಾನೇ ವೈ ಕಂಸೇ ಪ್ರಕುಪಿತೋಽವ್ಯಯಃ ।
ಲಘಿಮ್ನೋತ್ಪತ್ಯ ತರಸಾ ಮಂಚ ಮುತ್ತುಂಗಮಾರುಹತ್
॥ ೩೪ ॥

ತಮಾವಿಶಂತಮಾಲೋಕ್ಯ ಮೃತ್ಯುಮಾತ್ಮನ ಆಸನಾತ್ ।
ಮನಸ್ವೀ ಸಹಸೋತ್ಥಾಯ ಜಗೃಹೇ ಸೋಽಸಿಚರ್ಮಣೀ
॥ ೩೫ ॥

ತಂ ಖಡ್ಗಪಾಣಿಂ ವಿಚರಂತಮಾಶು
ಶ್ಯೇನಂ ಯಥಾ ದಕ್ಷಿಣಸವ್ಯಮಂಬರೇ ।
ಸಮಗ್ರಹೀದ್ದುರ್ವಿಷಹೋಗ್ರತೇಜಾ
ಯಥೋರಗಂ ತಾರ್ಕ್ಷ್ಯಸುತಃ ಪ್ರಸಹ್ಯ ॥ ೩೬ ॥

ಪ್ರಗೃಹ್ಯ ಕೇಶೇಷು ಚಲತ್ಕಿರೀಟಂ
ನಿಪಾತ್ಯ ರಂಗೋಪರಿ ತುಂಗಮಂಚಾತ್ ।
ತಸ್ಯೋಪರಿಷ್ಟಾತ್ ಸ್ವಯಮಬ್ಜನಾಭಃ
ಪಪಾತ ವಿಶ್ವಾಶ್ರಯ ಆತ್ಮತಂತ್ರಃ ॥ ೩೭ ॥

ತಂ ಸಂಪರೇತಂ ವಿಚಕರ್ಷ ಭೂಮೌ
ಹರಿರ್ಯಥೇಭಂ ಜಗತೋ ವಿಪಶ್ಯತಃ ।
ಹಾಹೇತಿ ಶಬ್ದಃ ಸುಮಹಾಂಸ್ತದಾಭೂ-
ದುದೀರಿತಃ ಸರ್ವಜನೈರ್ನರೇಂದ್ರ ॥ ೩೮ ॥

ಸ ನಿತ್ಯದೋದ್ವಿಗ್ನಧಿಯಾ ತಮೀಶ್ವರಂ
ಪಿಬನ್ ವದನ್ ವಾ ವಿಚರನ್ ಸ್ವಪನ್ ಶ್ವಸನ್ ।
ದದರ್ಶ ಚಕ್ರಾಯುಧಮಗ್ರತೋ ಯ-
ಸ್ತದೇವ ರೂಪಂ ದುರವಾಪಮಾಪ ॥ ೩೯ ॥

ತಸ್ಯಾನುಜಾ ಭ್ರಾತರೋಽಷ್ಟೌ ಕಂಕನ್ಯಗ್ರೋಧಕಾದಯಃ ।
ಅಭ್ಯಧಾವನ್ನಭಿಕ್ರುದ್ಧಾ ಭ್ರಾತುರ್ನಿರ್ವೇಶಕಾರಿಣಃ
॥ ೪೦ ॥

ತಥಾತಿರಭಸಾಂಸ್ತಾಂಸ್ತು ಸಂಯತ್ತಾನ್ ರೋಹಿಣೀಸುತಃ ।
ಅಹನ್ ಪರಿಘಮುದ್ಯಮ್ಯ ಪಶೂನಿವ ಮೃಗಾಧಿಪಃ
॥ ೪೧ ॥

ಬಹಳ ಅಯೋಗ್ಯನಾದ ಕೆಟ್ಟಬುದ್ಧಿಯುಳ್ಳ ವಸುದೇವನನ್ನು ಈಗಲೇ ಶೀಘ್ರವಾಗಿ ಕೊಂದುಹಾಕಿರಿ. ನಮ್ಮ ತಂದೆಯಾದರೂ ಶತ್ರುಪಕ್ಷಕ್ಕೆ ಸೇರಿದವನಾದ್ದರಿಂದ ಅನುಯಾಯಿಗಳ ಸಹಿತ ಉಗ್ರಸೇನನನ್ನು ಮುಗಿಸಿಬಿಡಿರಿ. ॥ ೩೩ ॥ ಕಂಸನು ಹೀಗೆ ಬಡ-ಬಡಿಸುತ್ತಿರುವಾಗ ಅವಿನಾಶಿಯಾದ ಶ್ರೀಕೃಷ್ಣನು ಕುಪಿತನಾಗಿ ಅತ್ಯಂತ ವೇಗದಿಂದ ಛಂಗನೆ ಹಾರಿ ಕಂಸನು ಕುಳಿತಿದ್ದ ಎತ್ತರವಾದ ವೇದಿಕೆಯ ಮೇಲೆ ನಿಂತುಕೊಂಡನು. ॥ ೩೪ ॥ ತನ್ನ ಮೃತ್ಯುರೂಪನಾದ ಶ್ರೀಕೃಷ್ಣನು ತನ್ನ ಬಳಿಗೆ ಬಂದಿರುವುದನ್ನು ನೋಡಿದ ಮನಸ್ವೀಯಾದ ಕಂಸನು ಥಟ್ಟನೇ ಸಿಂಹಾಸನದಿಂದ ಎದ್ದು ಕತ್ತಿ ಗುರಾಣಿಗಳನ್ನು ಎತ್ತಿಕೊಂಡನು. ॥ ೩೫ ॥ ಕತ್ತಿಗುರಾಣಿಗಳನ್ನು ಹಿಡಿದಿದ್ದ ಕಂಸನು ಶ್ರೀಕೃಷ್ಣನನ್ನು ಪ್ರಹರಿಸಲು ವರಸೆಗಳಿಂದ ಖಡ್ಗವನ್ನು ಝಳಪಿಸುತ್ತಾ ಆಕಾಶದಲ್ಲಿ ಹಾರುವ ಗಿಡುಗನಂತೆ ಎಡಕ್ಕೂ ಬಲಕ್ಕೂ ನೆಗೆಯುತ್ತಿದ್ದನು. ಆದರೆ ಯಾರಿಂದಲೂ ಸಹಿಸಲ ಶಕ್ಯವಾದ ಭಯಂಕರವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಶ್ರೀಕೃಷ್ಣನು ಗರುಡನು ಹಾವನ್ನು ಹಿಡಿಯುವಂತೆ ಖಡ್ಗಪಾಣಿಯಾದ ಕಂಸನನ್ನು ಬಲಪೂರ್ವಕಾಗಿ ಹಿಡಿದುಕೊಂಡನು. ॥ ೩೬ ॥ ಹಿಡಿದಾಗಲೇ ಕಂಸನ ಕಿರೀಟವು ಬಿದ್ದುಹೋಯಿತು. ಶ್ರೀಕೃಷ್ಣನು ಅವನ ಮುಡಿಯನ್ನು ಹಿಡಿದೆಳೆದು ಎತ್ತರವಾದ ಮಂಚದಿಂದ ರಂಗಭೂಮಿಯ ಮೇಲೆ ಬೀಳಿಸಿದನು. ಮರುಕ್ಷಣದಲ್ಲೇ ವಿಶ್ವಕ್ಕೆ ಪರಮಾಶ್ರಯನಾದ, ಸರ್ವತಂತ್ರ ಸ್ವತಂತ್ರನಾದ ಭಗವಾನ್ ಶ್ರೀಕೃಷ್ಣನು ಅವನ ಮೇಲೆ ಛಂಗನೆ ಹಾರಿದನು. ॥ ೩೭ ॥ ಶ್ರೀಕೃಷ್ಣನು ಕಂಸನ ಮೇಲೆ ಬೀಳುತ್ತಲೇ ಅವನ ಪ್ರಾಣಪಕ್ಷಿಯು ಹಾರಿಹೋಯಿತು. ಸಿಂಹವು ಆನೆಯನ್ನು ಸೆಳೆದಾಡುವಂತೆ ಎಲ್ಲರೂ ನೋಡುತ್ತಿರುವಂತೆ ಶ್ರೀಕೃಷ್ಣನು ಕಂಸನ ಮೃತ ಶರೀರವನ್ನು ಸೆಳೆದಾಡಿದನು. ರಾಜೇಂದ್ರ! ಆ ಸಮಯದಲ್ಲಿ ಎಲ್ಲರ ಬಾಯಿಂದ ಅಯ್ಯೋ! ಅಯ್ಯೋ! ಎಂಬ ಗಟ್ಟಿಯಾದ ಧ್ವನಿಗಳು ಕೇಳಿಬರುತ್ತಿದ್ದವು. ॥ ೩೮ ॥ ಕಂಸನು ನಿರಂತರವಾಗಿ ಉದ್ವಿಗ್ನನಾಗಿ ಭಯದಿಂದ ಶ್ರೀಕೃಷ್ಣನನ್ನೇ ಚಿಂತಿಸುತ್ತಿದ್ದನು. ಅವನು ಉಂಬಾಗ ತಿಂಬಾಗ, ನಡೆದಾಡುವಾಗ, ಮಾತನಾಡುವಾಗ, ಉಸಿರಾಡುವಾಗಲೂ ತನ್ನೆದುರಿಗೆ ಚಕ್ರಧಾರಿಯಾದ ಶ್ರೀಕೃಷ್ಣನನ್ನೇ ನೋಡುತ್ತಿದ್ದನು. ಈ ನಿತ್ಯನಿರಂತರ ಚಿಂತನೆಯ ಫಲವಾಗಿ ದೊಡ್ಡ-ದೊಡ್ಡ ತಪಸ್ವಿಗಳಾದ ಯೋಗಿಗಳಿಗೂ ಕಠಿಣವಾದ ಭಗವಂತನ ಸಾರೂಪ್ಯ ಮುಕ್ತಿಯು ಅವನಿಗೆ ಲಭಿಸಿತು. ॥ ೩೯ ॥

ಕಂಸನು ಅಸುನೀಗುತ್ತಲೇ ಅವನ ತಮ್ಮಂದಿರಾದ ಕಂಕ, ನ್ಯಗ್ರೋಧ ಮೊದಲಾದ ಎಂಟು ಜನರು ತಮ್ಮ ಅಣ್ಣನನ್ನು ಕೊಂದ ಸೇಡು ತೀರಿಸಿಕೊಳ್ಳಲು ಕ್ರೋಧೋನ್ಮತ್ತರಾಗಿ ಶ್ರೀಕೃಷ್ಣ ಬಲರಾಮರ ಕಡೆಗೆ ನುಗ್ಗಿ ಬಂದರು. ॥ ೪೦ ॥ ಕಂಸನ ಸೋದರರು ಅತ್ಯಂತ ವೇಗವಾಗಿ ಯುದ್ಧಕ್ಕೆ ಸಿದ್ಧರಾಗಿ ಓಡಿ ಬರುತ್ತಿರುವುದನ್ನು ನೋಡಿದ ಬಲರಾಮನು ಪರಿಘವನ್ನೆತ್ತಿಕೊಂಡು ಸಿಂಹವು ಪಶುಗಳನ್ನು ಕೊಂದು ಹಾಕುವಂತೆ ಕ್ಷಣಮಾತ್ರದಲ್ಲಿ ಅವರನ್ನು ಸಂಹರಿಸಿ ಬಿಟ್ಟನು. ॥ ೪೧ ॥

ನೇದುರ್ದುಂದುಭಯೋ ವ್ಯೋಮ್ನಿ ಬ್ರಹ್ಮೇಶಾದ್ಯಾ ವಿಭೂತಯಃ।
ಪುಷ್ಪೈಃ ಕಿರಂತಸ್ತಂ ಪ್ರೀತಾಃ ಶಶಂಸುರ್ನನೃತುಃ ಸ್ತ್ರಿಯಃ
॥ ೪೨ ॥

ತೇಷಾಂ ಸ್ತ್ರಿಯೋ ಮಹಾರಾಜ ಸುಹೃನ್ಮರಣದುಃಖಿತಾಃ।
ತತ್ರಾಭೀಯುರ್ವಿನಿಘ್ನಂತ್ಯಃ ಶೀರ್ಷಾಣ್ಯಶ್ರುವಿಲೋಚನಾಃ
॥ ೪೩ ॥

ಶಯಾನಾನ್ ವೀರಶಯ್ಯಾಯಾಂ ಪತೀನಾಲಿಂಗ್ಯ ಶೋಚತೀಃ।
ವಿಲೇಪುಃ ಸುಸ್ವರಂ ನಾರ್ಯೋ ವಿಸೃಜಂತ್ಯೋ ಮುಹುಃ ಶುಚಃ
॥ ೪೪ ॥

ಹಾ ನಾಥ ಪ್ರಿಯ ಧರ್ಮಜ್ಞ ಕರುಣಾನಾಥವತ್ಸಲ।
ತ್ವಯಾ ಹತೇನ ನಿಹತಾ ವಯಂ ತೇ ಸಗೃಹಪ್ರಜಾಃ
॥ ೪೫ ॥

ತ್ವಯಾ ವಿರಹಿತಾ ಪತ್ಯಾ ಪುರೀಯಂ ಪುರುಷರ್ಷಭ।
ನ ಶೋಭತೇ ವಯಮಿವ ನಿವೃತ್ತೋತ್ಸವಮಂಗಲಾ
॥ ೪೬ ॥

ಅನಾಗಸಾಂ ತ್ವಂ ಭೂತಾನಾಂ
ಕೃತವಾನ್ ದ್ರೋಹಮುಲ್ಬಣಮ್ ।
ತೇನೇಮಾಂ ಭೋ ದಶಾಂ ನೀತೋ
ಭೂತಧ್ರುಕ್ ಕೋ ಲಭೇತ ಶಮ್ ॥ ೪೭ ॥

ಸರ್ವೇಷಾಮಿಹ ಭೂತಾನಾಮೇಷ ಹಿ ಪ್ರಭವಾಪ್ಯಯಃ।
ಗೋಪ್ತಾ ಚ ತದವಧ್ಯಾಯೀ ನ ಕ್ವಚಿತ್ ಸುಖಮೇಧತೇ
॥ ೪೮ ॥

*ಶ್ರೀಶುಕ ಉವಾಚ*

ರಾಜಯೋಷಿತ ಆಶ್ವಾಸ್ಯ ಭಗವಾನ್‌ಲೋಕಭಾವನಃ।
ಯಾಮಾಹುರ್ಲೌಕಿಕೀಂ ಸಂಸ್ಥಾಂ ಹತಾನಾಂ ಸಮಕಾರಯತ್
॥ ೪೯ ॥

ಮಾತರಂ ಪಿತರಂ ಚೈವ ಮೋಚಯಿತ್ವಾಥ ಬಂಧನಾತ್ ।
ಕೃಷ್ಣರಾಮೌ ವವಂದಾತೇ ಶಿರಸಾಽಽಸ್ಪೃಶ್ಯ ಪಾದಯೋಃ
॥ ೫೦ ॥

ದೇವಕೀ ವಸುದೇವಶ್ಚ ವಿಜ್ಞಾಯ ಜಗದೀಶ್ವರೌ।
ಕೃತಸಂವಂದನೌ ಪುತ್ರೌ ಸಸ್ವಜಾತೇ ನ ಶಂಕಿತೌ
॥ ೫೧ ॥

ಆ ಸಮಯದಲ್ಲಿ ಆಕಾಶದಲ್ಲಿ ದುಂದುಭಿಗಳು ಮೊಳಗಿದವು. ಭಗವದ್ವಿಭೂತಿಗಳಾದ ಬ್ರಹ್ಮ ರುದ್ರರೇ ಮೊದಲಾದ ದೇವತೆಗಳು ಆನಂದತುಂದಿಲರಾಗಿ ರಾಮ-ಕೃಷ್ಣರ ಮೇಲೆ ಹೂಗಳ ಮಳೆಯನ್ನು ಗರೆಯುತ್ತಾ ಸ್ತುತಿಸತೊಡಗಿದರು. ಅಪ್ಸರೆಯರು ನೃತ್ಯವಾಡತೊಡಗಿದರು.॥ ೪೨ ॥

ಪರೀಕ್ಷಿತಮಹಾರಾಜ! ಕಂಸನ ಮತ್ತು ಅವನ ಸಹೋದರರ ಮಡದಿಯರು ಮತ್ತು ಅವರ ನಿಕಟ ಸಂಬಂಧಿಗಳು ಕಂಸನ ಹಾಗೂ ಆತನ ಸಹೋದರರ ಮೃತ್ಯುವಿನಿಂದಾಗಿ ಅತ್ಯಂತ ದುಃಖಿತರಾದರು. ಅವರೆಲ್ಲರೂ ತಲೆಗಳನ್ನು ಚಚ್ಚಿಕೊಂಡು, ಕಣ್ಣೀರು ಸುರಿಸುತ್ತಾ ಅಲ್ಲಿಗೆ ಬಂದರು. ॥ ೪೩ ॥ ವೀರಶಯ್ಯೆಯಲ್ಲಿ ಮಲಗಿದ್ದ ತಮ್ಮ ಪತಿಗಳನ್ನು ಅಪ್ಪಿಕೊಂಡು ಅವರು ಶೋಕಗ್ರಸ್ತರಾಗಿ ಪದೇ ಪದೇ ಕಣ್ಣೀರು ಸುರಿಸುತ್ತಾ, ಗಟ್ಟಿಯಾಗಿ ವಿಲಾಪಿಸ ತೊಡಗಿದರು. ॥ ೪೪ ॥ ಹೇ ನಾಥನೇ! ಪ್ರಿಯನೇ! ಧರ್ಮಜ್ಞನೇ! ಕರುಣಾಮಯನೇ! ಅನಾಥ ವತ್ಸಲನೇ! ನಿನ್ನ ಮೃತ್ಯುವಿನಿಂದಾಗಿ ನಾವೆಲ್ಲರೂ ಸತ್ತಂತೆಯೇ ಆದೆವು. ನಮ್ಮ ಮನೆಗಳು ಹಾಳಾಗಿ ಹೋದುವು. ನಮ್ಮ ಸಂತಾನಗಳು ಅನಾಥವಾದುವು. ॥ ೪೫ ॥ ಪುರುಷಶ್ರೇಷ್ಠನೇ! ಈ ಪಟ್ಟಣಕ್ಕೆ ನೀನೇ ಒಡೆಯನಾಗಿದ್ದೆ. ನಿನ್ನ ಅಗಲುವಿಕೆಯಿಂದ ನಮ್ಮಂತೆಯೇ ಈ ಪಟ್ಟಣವು ಶೋಭಿಸುತ್ತಿಲ್ಲ. ಇಲ್ಲಿ ಉತ್ಸವಗಳೂ, ಮಂಗಳಕಾರ್ಯಗಳೂ ನಿಂತು ಹೋಗಿವೆ. ॥ ೪೬ ॥ ಸ್ವಾಮಿಯೇ! ನೀನು ನಿರಪರಾಧಿಯಾದ ಪ್ರಾಣಿಗಳಿಗೆ ಘೋರವಾದ ದ್ರೋಹವನ್ನೆಸಗಿದೆ. ಆದುದರಿಂದಲೇ ನಿನಗೆ ಇಂತಹ ದುರವಸ್ಥೆಯು ಪ್ರಾಪ್ತವಾಯಿತು. ಪ್ರಾಣಿಗಳಿಗೆ ದ್ರೋಹವನ್ನೆಸಗಿದ ಯಾರು ತಾನೇ ಸುಖವನ್ನು ಹೊಂದುವನು? ॥ ೪೭ ॥ ಈ ಭಗವಾನ್ ಶ್ರೀಕೃಷ್ಣನು ಜಗತ್ತಿನ ಸಮಸ್ತ ಪ್ರಾಣಿಗಳ ಉತ್ಪತ್ತಿ ಪ್ರಳಯಕ್ಕೆ ಆಧಾರನಾಗಿದ್ದಾನೆ. ರಕ್ಷಕನೂ ಆಗಿರುವನು. ಇವನಿಗೆ ಕೆಡುಕನ್ನು ಬಯಸುವವನು, ತಿರಸ್ಕರಿಸುವವನು ಎಂದಿಗೂ ಸುಖಿಯಾಗಿರಲಾರನು. ॥ ೪೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಸಮಸ್ತ ಲೋಕಗಳಿಗೂ ಜೀವನದಾತನಾದ ಭಗವಂತನು ರಾಜಮಹಿಷಿಯರಿಗೆ ಧೈರ್ಯತುಂಬಿ, ಸಾಂತ್ವನ ನೀಡಿದನು. ಮತ್ತೆ ಲೋಕರೀತಿಯಂತೆ ಮರಣಹೊಂದಿದವರಿಗೆ ಮಾಡಬೇಕಾದ ಕ್ರಿಯಾ-ಕರ್ಮಗಳನ್ನು ಮಾಡಿಸಿದನು. ॥ ೪೯ ॥ ಅನಂತರ ಭಗವಾನ್ ಶ್ರೀಕೃಷ್ಣ-ಬಲರಾಮರು ಸೆರೆಮನೆಗೆ ಹೋಗಿ ತಮ್ಮ ತಂದೆ-ತಾಯಿಯರನ್ನು ಬಂಧನದಿಂದ ಬಿಡುಗಡೆ ಮಾಡಿದರು ಹಾಗೂ ಅವರ ಪಾದಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದರು. ॥ ೫೦ ॥ ಆದರೆ ತಮ್ಮ ಪುತ್ರರು ನಮಸ್ಕರಿಸಿದರೂ ವಸುದೇವ-ದೇವಕಿಯರು ಅವರನ್ನು ಜಗದೀಶ್ವರರೇ ಎಂದು ತಿಳಿದು ಅವರನ್ನು ಆಲಿಂಗಿಸಿಕೊಳ್ಳಲಿಲ್ಲ. ಈ ಜಗದೀಶ್ವರರನ್ನು ನಾವು ಪುತ್ರರೆಂದು ಹೇಗೆ ತಿಳಿಯಲಿ ಎಂಬ ಸಂದೇಹ ಉಂಟಾಯಿತು. ॥ ೫೧ ॥

*ನಲವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಕಂಸವಧೋ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ॥ ೪೪ ॥

# ನಲವತ್ತೈದನೆಯ ಅಧ್ಯಾಯ

## ಬಲರಾಮ-ಕೃಷ್ಣರ ಉಪನಯನ ಮತ್ತು ಗುರುಕುಲ ಪ್ರವೇಶ

ಶ್ರೀಶುಕ ಉವಾಚ

ಪಿತರಾವುಪಲಬ್ಧಾರ್ಥೌ ವಿದಿತ್ವಾ ಪುರುಷೋತ್ತಮಃ ।
ಮಾ ಭೂದಿತಿ ನಿಜಾಂ ಮಾಯಾಂ ತತಾನ ಜನಮೋಹಿನೀಮ್ ॥ ೧ ॥

ಉವಾಚ ಪಿತರಾವೇತ್ಯ ಸಾಗ್ರಜಃ ಸಾತ್ವತರ್ಷಭಃ ।
ಪ್ರಶ್ರಯಾವನತಃ ಪ್ರೀಣನ್ನಂಬ ತಾತೇತಿ ಸಾದರಮ್ ॥ ೨ ॥

ನಾಸ್ಮತ್ತೋ ಯುವಯೋಸ್ತಾತ ನಿತ್ಯೋತ್ಕಂಠಿತಯೋರಪಿ ।
ಬಾಲ್ಯಪೌಗಂಡಕೈಶೋರಾಃ ಪುತ್ರಾಭ್ಯಾಮಭವನ್ ಕ್ವಚಿತ್ ॥ ೩ ॥

ನ ಲಬ್ಧೋ ದೈವಹತಯೋರ್ವಾಸೋ ನೌ ಭವದಂತಿಕೇ ।
ಯಾಂ ಬಾಲಾಃ ಪಿತೃಗೇಹಸ್ಥಾ ವಿಂದಂತೇ ಲಾಲಿತಾ ಮುದಮ್ ॥ ೪ ॥

ಸರ್ವಾರ್ಥಸಂಭವೋ ದೇಹೋ ಜನಿತಃ ಪೋಷಿತೋ ಯತಃ ।
ನ ತಯೋರ್ಯಾತಿ ನಿರ್ವೇಶಂ ಪಿತ್ರೋರ್ಮರ್ತ್ಯಃ ಶತಾಯುಷಾ ॥ ೫ ॥

ಯಸ್ತಯೋರಾತ್ಮಜಃ ಕಲ್ಪ ಆತ್ಮನಾ ಚ ಧನೇನ ಚ ।
ವೃತ್ತಿಂ ನ ದದ್ಯಾತ್ತಂ ಪ್ರೇತ್ಯ ಸ್ವಮಾಂಸಂ ಖಾದಯಂತಿ ಹಿ ॥ ೬ ॥

ಮಾತರಂ ಪಿತರಂ ವೃದ್ಧಂ ಭಾರ್ಯಾಂ ಸಾಧ್ವೀಂ ಸುತಂ ಶಿಶುಮ್ ।
ಗುರುಂ ವಿಪ್ರಂ ಪ್ರಪನ್ನಂ ಚ ಕಲ್ಪೋಽಬಿಭ್ರಚ್ಛ್ವಸನ್ ಮೃತಃ ॥ ೭ ॥

ತನ್ನಾವಕಲ್ಪಯೋಃ ಕಂಸಾನ್ನಿತ್ಯಮುದ್ವಿಗ್ನಚೇತಸೋಃ ।
ಮೋಘಮೇತೇ ವ್ಯತಿಕ್ರಾಂತಾ ದಿವಸಾ ವಾಮನರ್ಚತೋಃ ॥ ೮ ॥

ತತ್ ಕ್ಷಂತುಮರ್ಹಥಸ್ತಾತ ಮಾತರ್ನೌ ಪರತಂತ್ರಯೋಃ ।
ಅಕುರ್ವತೋರ್ವಾಂ ಶುಶ್ರೂಷಾಂ ಕ್ಲಿಷ್ಟಯೋರ್ದುರ್ಹೃದಾ ಭೃಶಮ್ ॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ತಂದೆ-ತಾಯಿಯರಿಗೆ ನನ್ನ ಐಶ್ವರ್ಯದ, ಭಗವದ್ಭಾವದ ಜ್ಞಾನವುಂಟಾಗಿದೆ ಎಂದು ತಿಳಿದ ಭಗವಾನ್ ಶ್ರೀಕೃಷ್ಣನು ಹೀಗಾಗಬಾರದು, ಇದರಿಂದ ಪುತ್ರ ಸ್ನೇಹವನ್ನು ಪಡೆಯಲಾರದೆಂದು ಯೋಚಿಸಿ ಜನರನ್ನು ವಿಮೋಹಗೊಳಿಸುವ ತನ್ನ ಮಾಯೆಯನ್ನು ಅವರ ಮೇಲೆ ಬೀಸಿದನು. ॥ ೧ ॥ ಸಾತ್ವತ ಶ್ರೇಷ್ಠನಾದ ಶ್ರೀಕೃಷ್ಣನು ಬಲರಾಮನೊಡನೆ ತನ್ನ ತಂದೆ-ತಾಯಿಗಳ ಬಳಿಗೆ ಹೋಗಿ ಆದರದಿಂದ ವಿನಯಪೂರ್ವಕವಾಗಿ ಅವರಿಗೆ ತಲೆಬಾಗಿ ಅಮ್ಮಾ! ಅಪ್ಪಾ! ಎಂದು ಕರೆಯುತ್ತಾ, ಅವರನ್ನು ಸಂತೋಷಪಡಿಸಿ ಹೀಗೆ ಹೇಳತೊಡಗಿದನು. ॥ ೨ ॥ ಅಮ್ಮಾ! ಅಪ್ಪಾ! ನಾವಿಬ್ಬರೂ ನಿಮ್ಮ ಮಕ್ಕಳಾಗಿದ್ದೇವೆ. ನೀವು ನಮ್ಮನ್ನು ನೋಡಲು ಸದಾ ಉತ್ಸುಕರಾಗಿದ್ದರೂ ನಮ್ಮ ಬಾಲ್ಯ, ಪೌಗಂಡ, ಕಿಶೋರ ಅವಸ್ಥೆಗಳ ದರ್ಶನಸುಖವನ್ನು ನಾವು ನಿಮಗೆ ಕೊಡಲಾಗಲಿಲ್ಲ. ॥ ೩ ॥ ದುರ್ದೈವವಶದಿಂದ ನಿಮ್ಮ ಜೊತೆಯಲ್ಲಿರುವ ಸೌಭಾಗ್ಯವು ನಮಗೆ ದೊರೆಯಲಿಲ್ಲ. ಈ ಕಾರಣದಿಂದಾಗಿ ಬಾಲಕರು ತಂದೆ-ತಾಯಿಯರ ಬಳಿ ಇರುತ್ತಾ ಅನುಭವಿಸುವ ಲಾಲನೆ-ಪಾಲನೆಯ ಸುಖವು ನಮಗಿಲ್ಲವಾಯಿತು. ॥ ೪ ॥ ಧರ್ಮಾರ್ಥ-ಕಾಮ ಮೋಕ್ಷಗಳೆಂಬ ಸಕಲ ಪುರುಷಾರ್ಥಗಳಿಗೂ ಸಾಧನಭೂತವಾದ ಈ ದೇಹವು ಯಾರಿಂದ ಹುಟ್ಟಿತೋ ಹಾಗೂ ಪೋಷಿಸಲ್ಪಟ್ಟಿತೋ ಅಂತಹ ತಂದೆ-ತಾಯಿಗಳಿಬ್ಬರ ಋಣವನ್ನು ನೂರು ವರ್ಷಗಳ ಸೇವೆಯಿಂದಲೂ ಮನುಷ್ಯನಾದವನು ತೀರಿಸಲಾರನು. ॥ ೫ ॥ ಯಾವ ಪುತ್ರನು ಸಮರ್ಥನಾಗಿದ್ದರೂ ತನ್ನ ತಂದೆ-ತಾಯಿಗಳ ಸೇವೆಯನ್ನು ಶರೀರದಿಂದಾಗಲೀ, ಧನದಿಂದಾಗಲೀ ಮಾಡುವುದಿಲ್ಲವೋ ಅವನು ಸತ್ತಮೇಲೆ ಯಮದೂತರು ಅವನ ಶರೀರದ ಮಾಂಸವನ್ನೇ ಅವನಿಗೆ ತಿನ್ನಿಸುವರು. ॥ ೬ ॥ ಸಮರ್ಥನಾಗಿದ್ದರೂ ವೃದ್ಧರಾದ ತಂದೆ-ತಾಯಿಯರನ್ನು, ಸಾಧ್ವಿಯಾದ ಪತ್ನಿಯನ್ನು, ಬಾಲಕರನ್ನು, ಎಳೆ ಮಕ್ಕಳನ್ನು, ಗುರುಗಳನ್ನು, ಬ್ರಾಹ್ಮಣರು ಮತ್ತು ಶರಣಾಗತರನ್ನು ರಕ್ಷಿಸಿ-ಪೋಷಿಸದವನು ಬದುಕಿದ್ದರೂ ಸತ್ತಂತೆಯೇ ಸರಿ. ॥ ೭ ॥ ಅಪ್ಪಾ! ಕಂಸನ ಭಯದಿಂದ ಉದ್ವಿಗ್ನವಾದ ಮನಸ್ಸಿನಿಂದ ಕೂಡಿದ್ದ ನಾವು ನಿಮ್ಮ ಸೇವೆ ಮಾಡಲು ಸಮರ್ಥರಾಗಲಿಲ್ಲ. ಈ ಕಾರಣದಿಂದಲೇ ಇಷ್ಟು ದಿವಸಗಳೂ ತಮ್ಮ ಸೇವೆಮಾಡದೆ ವ್ಯರ್ಥವಾಗಿ ಕಳೆದುಹೋದುವು. ॥ ೮ ॥ ಜನನಿ-ಜನಕರೇ! ನೀವಿಬ್ಬರೂ ನಮ್ಮನ್ನು ಕ್ಷಮಿಸಿ ಬಿಡಿರಿ. ಅಯ್ಯೋ! ದುಷ್ಟನಾದ ಕಂಸನು ನಿಮಗೆ ಎಷ್ಟೊಂದು ಕಷ್ಟ ಕೊಟ್ಟನು. ಆದರೆ ಪರತಂತ್ರರಾಗಿದ್ದ ಕಾರಣ ತಮ್ಮ ಸೇವೆಯನ್ನು ನಮ್ಮಿಂದ ಮಾಡಲಾಗಲಿಲ್ಲ. ॥ ೯ ॥

*ಶ್ರೀಶುಕ ಉವಾಚ*

ಇತಿ ಮಾಯಾಮನುಷ್ಯಸ್ಯ ಹರೇರ್ವಿಶ್ವಾತ್ಮನೋ ಗಿರಾ ।
ಮೋಹಿತಾವಂಕಮಾರೋಪ್ಯ ಪರಿಷ್ವಜ್ಯಾಪತುರ್ಮುದಮ್
॥ ೧೦ ॥

ಸಿಂಚಂತಾವಶ್ರುಧಾರಾಭಿಃ ಸ್ನೇಹಪಾಶೇನ ಚಾವೃತೌ ।
ನ ಕಿಂಚಿದೂಚತೂ ರಾಜನ್ ಬಾಷ್ಪಕಂಠೌ ವಿಮೋಹಿತೌ
॥ ೧೧ ॥

ಏವಮಾಶ್ವಾಸ್ಯ ಪಿತರೌ ಭಗವಾನ್ ದೇವಕೀಸುತಃ ।
ಮಾತಾಮಹಂ ತೂಗ್ರಸೇನಂ ಯದೂನಾಮಕರೋನ್ನೃಪಮ್
॥ ೧೨ ॥

ಆಹ ಚಾಸ್ಮಾನ್ ಮಹಾರಾಜ ಪ್ರಜಾಶ್ಚಾಜ್ಞಪ್ತುಮರ್ಹಸಿ ।
ಯಯಾತಿಶಾಪಾದ್ಯದುಭಿರ್ನಾಸಿತವ್ಯಂ ನೃಪಾಸನೇ
॥ ೧೩ ॥

ಮಯಿ ಭೃತ್ಯ ಉಪಾಸೀನೇ ಭವತೋ ವಿಬುಧಾದಯಃ ।
ಬಲಿಂ ಹರಂತ್ಯವನತಾಃ ಕಿಮುತಾನ್ಯೇ ನರಾಧಿಪಾಃ
॥ ೧೪ ॥

ಸರ್ವಾನ್‌ಸ್ವಾನ್ ಜ್ಞಾತಿಸಂಬಂಧಾನ್
ದಿಗ್ಭ್ಯಃ ಕಂಸಭಯಾಕುಲಾನ್ ।
ಯದುವೃಷ್ಣ್ಯಂಧಕಮಧು-
ದಾಶಾರ್ಹಕುಕುರಾದಿಕಾನ್ ॥ ೧೫ ॥

ಸಭಾಜಿತಾನ್ ಸಮಾಶ್ವಾಸ್ಯ ವಿದೇಶಾವಾಸಕರ್ಶಿತಾನ್ ।
ನ್ಯವಾಸಯತ್ಸ್ವಗೇಹೇಷು ವಿತ್ತೈಃ ಸಂತರ್ಪ್ಯ ವಿಶ್ವಕೃತ್
॥ ೧೬ ॥

ಕೃಷ್ಣಸಂಕರ್ಷಣಭುಜೈರ್ಗುಪ್ತಾ ಲಬ್ಧಮನೋರಥಾಃ ।
ಗೃಹೇಷು ರೇಮಿರೇ ಸಿದ್ಧಾಃ ಕೃಷ್ಣರಾಮಗತಜ್ವರಾಃ
॥ ೧೭ ॥

ವೀಕ್ಷಂತೋಽಹರಹಃ ಪ್ರೀತಾ ಮುಕುಂದವದನಾಂಬುಜಮ್ ।
ನಿತ್ಯಂ ಪ್ರಮುದಿತಂ ಶ್ರೀಮತ್ಸದಯಸ್ಮಿತವೀಕ್ಷಣಮ್
॥ ೧೮ ॥

ತತ್ರ ಪ್ರವಯಸೋಽಪ್ಯಾಸನ್
ಯುವಾನೋಽತಿಬಲೌಜಸಃ ।
ಪಿಬಂತೋಽಕ್ಷೈರ್ಮುಕುಂದಸ್ಯ
ಮುಖಾಂಬುಜಸುಧಾಂ ಮುಹುಃ ॥ ೧೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿದ್ರಾಜನೇ!** ತನ್ನ ಲೀಲೆಯಿಂದ ಮನುಷ್ಯನಾಗಿದ್ದ ವಿಶ್ವಾತ್ಮಾ ಶ್ರೀಹರಿಯ ಈ ಮಾತುಗಳಿಂದ ಮೋಹಿತರಾದ ವಸುದೇವ-ದೇವಕಿಯರು ಅವರನ್ನು ತೊಡೆಯಲ್ಲೆತ್ತಿಕೊಂಡು ಗಾಢವಾಗಿ ಆಲಿಂಗಿಸಿ ಪರಮಾನಂದವನ್ನು ಪಡೆದರು. ॥ ೧೦ ॥ ರಾಜನೇ! ಸ್ನೇಹಪಾಶದಲ್ಲಿ ಬಂಧಿತರಾದ ವಸುದೇವ-ದೇವಕಿಯರು ಮೋಹಿತರಾಗಿ ಆನಂದ ಬಾಷ್ಪಗಳಿಂದ ಅವರಿಗೆ ಅಭಿಷೇಕ ಮಾಡಿದರು. ಕಣ್ಣೀರು ಸುರಿಯುತ್ತಿದ್ದ ಕಂಠವು ಉಮ್ಮಳಿಸಿ ಬಂದು ಮಾತನಾಡಲು ಸಾಧ್ಯವಾಗಲಿಲ್ಲ. ॥ ೧೧ ॥

ದೇವಕೀನಂದನನಾದ ಭಗವಾನ್ ಶ್ರೀಕೃಷ್ಣನು ಹೀಗೆ ತಂದೆ ತಾಯಿಯರನ್ನು ಸಂತೈಸಿ, ತನ್ನ ತಾತನಾದ ಉಗ್ರಸೇನನನ್ನು ಯಾದವರಿಗೆ ರಾಜನನ್ನಾಗಿ ಮಾಡಿದನು. ॥ ೧೨ ॥ ಮತ್ತೆ ಹೇಳಿದನು - ಮಹಾರಾಜ! ನಾವು ನಿಮ್ಮ ಪ್ರಜೆಯಾಗಿದ್ದೇವೆ. ನೀನು ನಮಗೆ ಯಾವ ಕಾರ್ಯಮಾಡಬೇಕೆಂಬುದನ್ನು ಆಜ್ಞಾಪಿಸು. ಯಯಾತಿಯ ಶಾಪದ ಕಾರಣದಿಂದ ಯದುವಂಶೀಯರು ರಾಜಸಿಂಹಾಸನದಲ್ಲಿ ಕುಳಿತುಕೊಳ್ಳಬಾರದು. (ಆದರೂ ನನ್ನ ಇಚ್ಛೆಯಂತೆ ನಿನ್ನನ್ನು ರಾಜನನ್ನಾಗಿಸಿದ್ದೇನೆ. ಇದರಿಂದ ನಿನಗೆ ಯಾವ ದೋಷವೂ ಉಂಟಾಗಲಾರದು). ॥ ೧೩ ॥ ನಾನು ಸೇವಕನಾಗಿ ನಿಮ್ಮ ಸೇವೆ ಮಾಡುತ್ತಿರುವವರೆಗೆ ದೊಡ್ಡ-ದೊಡ್ಡ ದೇವತೆಗಳೂ ತಲೆತಗ್ಗಿಸಿ ನಿಮಗೆ ಕಪ್ಪ-ಕಾಣಿಕೆಯನ್ನು ಕೊಡುವರು. ಹಾಗಿರುವಾಗ ಬೇರೆ ರಾಜರ ಬಗ್ಗೆ ಹೇಳುವುದೇನಿದೆ? ॥ ೧೪ ॥ ಸಮಸ್ತ ವಿಶ್ವದ ವಿಧಾತನಾದ ಭಗವಾನ್ ಶ್ರೀಕೃಷ್ಣನು - ಕಂಸನ ಭಯದಿಂದ ವ್ಯಾಕುಲರಾಗಿ ಎಲ್ಲೆಲ್ಲೋ ಓಡಿಹೋಗಿದ್ದ ಯದು, ವೃಷ್ಣಿ, ಅಂಧಕ, ಮಧು, ದಾಶಾರ್ಹ ಮತ್ತು ಕುಕುರ ಮುಂತಾದ ವಂಶೀಯರಾದ ಸಮಸ್ತ ಸ್ವಜಾತೀಯ ಸಂಬಂಧಿಗಳನ್ನು ಹುಡುಕಿ-ಹುಡುಕಿ ಕರೆತಂದನು. ಭಗವಂತನು ಅವರೆಲ್ಲರನ್ನೂ ಸಾಂತ್ವನನೀಡಿ, ಸತ್ಕಾರಮಾಡಿ, ಅವರಿಗೆ ಹೇರಳ ಧನ-ಸಂಪತ್ತನ್ನು ಕೊಟ್ಟು ತೃಪ್ತಿಪಡಿಸಿ ತಮ್ಮ-ತಮ್ಮ ಮನೆಗಳಲ್ಲಿ ನೆಲೆಸುವಂತೆ ಮಾಡಿದನು. ॥ ೧೫-೧೬ ॥ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರ ಭುಜಬಲದಿಂದ ಸಮಸ್ತ ಯದುವಂಶೀಯರು ಸುರಕ್ಷಿತರಾಗಿದ್ದರು. ಅವನ ಕೃಪೆಯಿಂದ ಅವರಿಗೆ ಯಾವುದೇ ವಿಧದ ವ್ಯಥೆಯಿರಲಿಲ್ಲ, ದುಃಖವಿರಲಿಲ್ಲ. ಅವರೆಲ್ಲರೂ ಕೃತಾರ್ಥರಾಗಿ ತಮ್ಮ ಮನೆಗಳಲ್ಲಿ ಆನಂದದಿಂದ ಇರುತ್ತಿದ್ದರು. ॥ ೧೭ ॥ ಭಗವಾನ್ ಶ್ರೀಕೃಷ್ಣನ ವದನಾರವಿಂದವು ಆನಂದದ ಸದನವಾಗಿತ್ತು. ಅದು ನಿತ್ಯವೂ ಪ್ರಫುಲ್ಲಿತವಾಗಿದ್ದು ಎಂದೂ ಬಾಡದಿರುವ ಕಮಲವಾಗಿದೆ. ಅದರ ಸೌಂದರ್ಯವು ಅಪಾರವಾಗಿದೆ. ಮಂದಹಾಸ ಮತ್ತು ಕುಡಿನೋಟಗಳು ಮುಕುಂದನ ವದನದಲ್ಲಿ ಸದಾಕಾಲ ಕುಣಿಯುತ್ತಿದ್ದವು. ಯದುವಂಶೀಯರು ಪ್ರತಿದಿನವೂ ಅದರ ದರ್ಶನ ಮಾಡುತ್ತಾ ಆನಂದಮಗ್ನರಾಗಿ ಇರುತ್ತಿದ್ದರು. ॥ ೧೮ ॥ ಮಥುರೆಯ ವೃದ್ಧರೂ ಕೂಡ ಯುವಕರಂತೆ ಅತ್ಯಂತ ಬಲಿಷ್ಠರಾಗಿ ಉತ್ಸಾಹಿಗಳಾಗಿದ್ದರು. ಏಕೆಂದರೆ, ಅವರು ತಮ್ಮ ಕಣ್ಣುಗಳೆಂಬ ದೊನ್ನೆಗಳಿಂದ ಪದೇ-ಪದೇ ಭಗವಂತನ ಮುಖಾರವಿಂದದ ಅಮೃತಮಯ ಮಕರಂದವನ್ನು ಪಾನಮಾಡುತ್ತಾ ಇದ್ದರು. ॥ ೧೯ ॥

ಅಥ ನಂದಂ ಸಮಾಸಾದ್ಯ ಭಗವಾನ್ ದೇವಕೀಸುತಃ ।
ಸಂಕರ್ಷಣಶ್ಚ ರಾಜೇಂದ್ರ ಪರಿಷ್ವಜ್ಯೇದಮೂಚತುಃ
॥ ೨೦ ॥

ಪಿತರ್ಯುವಾಭ್ಯಾಂ ಸ್ನಿಗ್ಧಾಭ್ಯಾಂ ಪೋಷಿತೌ ಲಾಲಿತೌ ಭೃಶಮ್ ।
ಪಿತ್ರೋರಭ್ಯಧಿಕಾ ಪ್ರೀತಿರಾತ್ಮಜೇಷ್ವಾತ್ಮನೋಽಪಿ ಹಿ
॥ ೨೧ ॥

ಸ ಪಿತಾ ಸಾ ಚ ಜನನೀ ಯೌ ಪುಷ್ಣೀತಾಂ ಸ್ವಪುತ್ರವತ್ ।
ಶಿಶೂನ್ ಬಂಧುಭಿರುತ್ಸೃಷ್ಟಾನಕಲ್ಪೈಃ ಪೋಷರಕ್ಷಣೇ
॥ ೨೨ ॥

ಯಾತ ಯೂಯಂ ವ್ರಜಂ ತಾತ
ವಯಂ ಚ ಸ್ನೇಹದುಃಖಿತಾನ್ ।
ಜ್ಞಾತೀನ್ ವೋ ದ್ರಷ್ಟುಮೇಷ್ಯಾಮೋ
ವಿಧಾಯ ಸುಹೃದಾಂ ಸುಖಮ್ ॥ ೨೩ ॥

ಏವಂ ಸಾಂತ್ವಯ್ಯ ಭಗವಾನ್ ನಂದಂ ಸವ್ರಜಮಚ್ಯುತಃ ।
ವಾಸೋಽಲಂಕಾರಕುಪ್ಯಾದ್ಯೈರರ್ಹಯಾಮಾಸ ಸಾದರಮ್
॥ ೨೪ ॥

ಇತ್ಯುಕ್ತಸ್ತೌ ಪರಿಷ್ವಜ್ಯ ನಂದಃ ಪ್ರಣಯವಿಹ್ವಲಃ ।
ಪೂರಯನ್ನಶ್ರುಭಿರ್ನೇತ್ರೇ ಸಹ ಗೋಪೈರ್ವ್ರಜಂ ಯಯೌ
॥ ೨೫ ॥

ಅಥ ಶೂರಸುತೋ ರಾಜನ್ ಪುತ್ರಯೋಃ ಸಮಕಾರಯತ್ ।
ಪುರೋಧಸಾ ಬ್ರಾಹ್ಮಣೈಶ್ಚ ಯಥಾವದ್ದ್ವಿಜಸಂಸ್ಕೃತಿಮ್
॥ ೨೬ ॥

ತೇಭ್ಯೋಽದಾದ್ದಕ್ಷಿಣಾ ಗಾವೋ ರುಕ್ಮಮಾಲಾಃ ಸ್ವಲಂಕೃತಾಃ ।
ಸ್ವಲಂಕೃತೇಭ್ಯಃ ಸಂಪೂಜ್ಯ ಸವತ್ಸಾಃ ಕ್ಷೌಮಮಾಲಿನೀಃ
॥ ೨೭ ॥

ಯಾಃ ಕೃಷ್ಣರಾಮಜನ್ಮರ್ಕ್ಷೇ ಮನೋದತ್ತಾ ಮಹಾಮತಿಃ ।
ತಾಶ್ಚಾದದಾದನುಸ್ಮೃತ್ಯ ಕಂಸೇನಾಧರ್ಮತೋ ಹೃತಾಃ
॥ ೨೮ ॥

ತತಶ್ಚ ಲಬ್ಧಸಂಸ್ಕಾರೌ ದ್ವಿಜತ್ವಂ ಪ್ರಾಪ್ಯ ಸುವ್ರತೌ ।
ಗರ್ಗಾದ್ಯದುಕುಲಾಚಾರ್ಯಾದ್ಗಾಯತ್ರಂ ವ್ರತಮಾಸ್ಥಿತೌ
॥ ೨೯ ॥

ಪ್ರಭವೌ ಸರ್ವವಿದ್ಯಾನಾಂ ಸರ್ವಜ್ಞೌ ಜಗದೀಶ್ವರೌ ।
ನಾನ್ಯಸಿದ್ಧಾಮಲಜ್ಞಾನಂ ಗೂಹಮಾನೌ ನರೇಹಿತೈಃ
॥ ೩೦ ॥

ಪರೀಕ್ಷಿದ್ರಾಜನೇ! ದೇವಕೀನಂದನ ಭಗವಾನ್ ಶ್ರೀಕೃಷ್ಣನು ಮತ್ತು ಬಲರಾಮರಿಬ್ಬರೂ ನಂದರಾಜನ ಬಳಿಗೆ ಬಂದು ಅವರನ್ನು ಅಪ್ಪಿಕೊಂಡು ಅವರಲ್ಲಿ ಹೀಗೆಂದರು. ॥ ೨೦ ॥ ಮಾತಾ ಪಿತೃಗಳೇ! ಪ್ರೇಮಹೃದಯರಾದ ನೀವಿಬ್ಬರೂ ನಮ್ಮನ್ನು ಅಕ್ಕರೆಯಿಂದ ಲಾಲಿಸಿ ಪೋಷಿಸಿರುವಿರಿ. ತಂದೆ-ತಾಯಿಗಳಿಗೆ ತಮ್ಮ ಪ್ರಾಣಗಳಿಗಿಂತಲೂ ಅಧಿಕವಾಗಿ ತಮ್ಮ ಮಕ್ಕಳಲ್ಲಿ ಪ್ರೀತಿ ಇರುತ್ತದೆ. ॥ ೨೧ ॥ ಪಾಲನೆ ರಕ್ಷಣೆಗಳಲ್ಲಿ ಅಸಮರ್ಥರಾದ ಬಂಧುಗಳಿಂದ ಪರಿತ್ಯಜಿಸಲ್ಪಟ್ಟ ಮಕ್ಕಳನ್ನು ತಮ್ಮ ಮಕ್ಕಳಂತೆಯೇ ಭಾವಿಸಿ ರಕ್ಷಿಸುವವರೇ ನಿಜವಾದ ತಾಯಿ-ತಂದೆಯರು. ॥ ೨೨ ॥ ಅಪ್ಪಾ! ಈಗ ನೀವೆಲ್ಲರೂ ಗೋಕುಲಕ್ಕೆ ಹೋಗಿರಿ. ನಾವಿಲ್ಲದೆ ವಾತ್ಸಲ್ಯದಿಂದಾಗಿ ನಿಮಗೆ ಬಹಳ ದುಃಖವಾಗುವುದರಲ್ಲಿ ಸಂದೇಹವೇ ಇಲ್ಲ. ಇಲ್ಲಿಯ ಸುಹೃದ್-ಸಂಬಂಧಿಗಳನ್ನು ಸುಖವಾಗಿರುವಂತೆ ಮಾಡಿ, ನಾವು ನಿಮ್ಮನ್ನು ಭೆಟ್ಟಿಯಾಗಲು ಆದಷ್ಟು ಬೇಗನೇ ಬರುವೆವು. ॥ ೨೩ ॥ ಭಗವಾನ್ ಶ್ರೀಕೃಷ್ಣನು ನಂದಗೋಪನೇ ಮೊದಲಾದ ವ್ರಜವಾಸಿಗಳನ್ನು ಹೀಗೆ ಸಾಂತ್ವನಗೊಳಿಸಿ, ಬಹಳ ಆದರದಿಂದ ವಸ್ತ್ರಾಭೂಷಣಗಳನ್ನು, ಅನೇಕ ಪಾತ್ರೆ-ಪಗಡಿಗಳನ್ನು ಕೊಟ್ಟು ಅವರನ್ನು ಸತ್ಕರಿಸಿದನು. ॥ ೨೪ ॥ ಭಗವಂತನ ಮಾತನ್ನು ಕೇಳಿ ನಂದರಾಜನು ಪ್ರೇಮದಿಂದ ವಿಹ್ವಲನಾಗಿ ಇಬ್ಬರೂ ಸಹೋದರರನ್ನು ಅಪ್ಪಿಕೊಂಡು, ಕಣ್ಣುಗಳಿಂದ ನೀರನ್ನು ಸುರಿಸುತ್ತಾ ಗೋಪಾಲಕರೊಂದಿಗೆ ವ್ರಜಕ್ಕೆ ಪ್ರಯಾಣಮಾಡಿದನು. ॥ ೨೫ ॥

ಎಲೈ ರಾಜೇಂದ್ರನೇ! ಇದಾದ ಬಳಿಕ ವಸುದೇವನು ಕುಲಪುರೋಹಿತರಾದ ಗರ್ಗಾಚಾರ್ಯರಿಂದ ಹಾಗೂ ಇತರ ಬ್ರಾಹ್ಮಣರಿಂದ ಇಬ್ಬರೂ ಪುತ್ರರಿಗೆ ವಿಧಿವತ್ತಾಗಿ ದ್ವಿಜಾತಿಗೆ ಸಮುಚಿತವಾದ ಉಪನಯನ ಸಂಸ್ಕಾರವನ್ನು ಮಾಡಿಸಿದನು. ॥ ೨೬ ॥ ವಸುದೇವನು ವಿವಿಧ ಪ್ರಕಾರವಾಗಿ ವಸ್ತ್ರಾಭೂಷಣಗಳಿಂದ ಬ್ರಾಹ್ಮಣರನ್ನು ಸತ್ಕರಿಸಿ, ಅವರಿಗೆ ಬಹಳ ದಕ್ಷಿಣೆಯೊಂದಿಗೆ ಸುವರ್ಣಮಾಲೆಗಳಿಂದ ಸಮಲಂಕೃತವಾದ, ಅನೇಕ ಭೂಷಣಗಳಿಂದ ಮತ್ತು ರೇಷ್ಮೆವಸ್ತ್ರಗಳಿಂದ ಅಲಂಕರಿಸಿದ ಅನೇಕ ಸವತ್ಸಗೋವುಗಳನ್ನು ದಾನಮಾಡಿದನು. ॥ ೨೭ ॥ ಮಹಾಮತಿಯಾದ ವಸುದೇವನು ಭಗವಾನ್ ಶ್ರೀಕೃಷ್ಣ- ಬಲರಾಮರ ಜನ್ಮನಕ್ಷತ್ರದಂದು - ಮೊದಲು ಕಂಸನಿಂದ ಅನ್ಯಾಯದಿಂದ ಕಸಿದುಕೊಳ್ಳಲ್ಪಟ್ಟ ಮೊದಲೇ ಮಾನಸಿಕವಾಗಿ ದಾನಮಾಡಿದ್ದ ಗೋವುಗಳನ್ನು ಈಗ ಬ್ರಾಹ್ಮಣರಿಗೆ ಪ್ರತ್ಯಕ್ಷವಾಗಿ ದಾನ ಮಾಡಿದನು. ॥ ೨೮ ॥ ಈ ಪ್ರಕಾರ ಯದುವಂಶದ ಪುರೋಹಿತರಾದ ಗರ್ಗಾಚಾರ್ಯರು ಸಂಸ್ಕಾರವನ್ನು ಮಾಡಿಸಿ ಬಲರಾಮ ಶ್ರೀಕೃಷ್ಣರು ದ್ವಿಜರಾದರು. ಅವರ ಬ್ರಹ್ಮಚರ್ಯವ್ರತವಾದರೋ ಅಖಂಡವಾಗಿಯೇ ಇತ್ತು. ಈಗ ಅವರು ಗಾಯತ್ರಿ ಪೂರ್ವಕ ಅಧ್ಯಯನ ಮಾಡಲು ಅದನ್ನು ನಿಯಮಿತವಾಗಿ ಸ್ವೀಕರಿಸಿದರು. ॥ ೨೯ ॥ ಜಗತ್ತಿನ ಏಕಮಾತ್ರ ಸ್ವಾಮಿಗಳೂ, ಸರ್ವಜ್ಞರೂ ಆದ ಶ್ರೀಕೃಷ್ಣ-ಬಲರಾಮರಿಂದಲೇ ಎಲ್ಲ ವಿದ್ಯೆಗಳು ಉದ್ಭವಿಸಿವೆ. ಅವರ ನಿರ್ಮಲಜ್ಞಾನವು ಸ್ವತಃಸಿದ್ಧವಾದುದು. ಹೀಗಿದ್ದರೂ ಅವರು ಮನುಷ್ಯರಂತೆ ಲೀಲೆಯನ್ನು ತೋರಿ ಅದನ್ನು ಅಡಗಿಸಿ ಇಟ್ಟಿದ್ದರು. ॥ ೩೦ ॥

ಅಥೋ ಗುರುಕುಲೇ ವಾಸಮಿಚ್ಛಂತಾವುಪಜಗ್ಮತುಃ ।
ಕಾಶ್ಯಂ ಸಾಂದೀಪನಿಂ ನಾಮ ಹ್ಯವಂತೀಪುರವಾಸಿನಮ್ ॥ ೩೧ ॥

ಯಥೋಪಸಾದ್ಯ ತೌ ದಾಂತೌ ಗುರೌ ವೃತ್ತಿಮನಿಂದಿತಾಮ್ ।
ಗ್ರಾಹಯಂತಾವುಪೇತೌ ಸ್ಮ ಭಕ್ತ್ಯಾ ದೇವಮಿವಾದೃತೌ ॥ ೩೨ ॥

ತಯೋರ್ದ್ವಿಜವರಸ್ತುಷ್ಟಃ ಶುದ್ಧಭಾವಾನುವೃತ್ತಿಭಿಃ ।
ಪ್ರೋವಾಚ ವೇದಾನಖಿಲಾನ್ ಸಾಂಗೋಪನಿಷದೋ ಗುರುಃ ॥ ೩೩ ॥

ಸರಹಸ್ಯಂ ಧನುರ್ವೇದಂ ಧರ್ಮಾನ್ ನ್ಯಾಯಪಥಾಂಸ್ತಥಾ ।
ತಥಾ ಚಾನ್ವೀಕ್ಷಿಕೀಂ ವಿದ್ಯಾಂ ರಾಜನೀತಿಂ ಚ ಷಡ್ವಿಧಾಮ್ ॥ ೩೪ ॥

ಸರ್ವಂ ನರವರಶ್ರೇಷ್ಠೌ ಸರ್ವವಿದ್ಯಾಪ್ರವರ್ತಕೌ ।
ಸಕೃನ್ನಿಗದಮಾತ್ರೇಣ ತೌ ಸಂಜಗೃಹತುರ್ನೃಪ ॥ ೩೫ ॥

ಅಹೋರಾತ್ರೈಶ್ಚತುಃಷಷ್ಟ್ಯಾ ಸಂಯತ್ತೌ ತಾವತೀಃ ಕಲಾಃ ।
ಗುರುದಕ್ಷಿಣಯಾಽಽಚಾರ್ಯಂ ಛಂದಯಾಮಾಸತುರ್ನೃಪ ॥ ೩೬ ॥

ದ್ವಿಜಸ್ತಯೋಸ್ತಂ ಮಹಿಮಾನಮದ್ಭುತಂ
ಸಂಲಕ್ಷ್ಯ ರಾಜನ್ನತಿಮಾನುಷೀಂ ಮತಿಮ್ ।
ಸಂಮಂತ್ರ್ಯ ಪತ್ನ್ಯಾ ಸ ಮಹಾರ್ಣವೇ ಮೃತಂ
ಬಾಲಂ ಪ್ರಭಾಸೇ ವರಯಾಂಬಭೂವ ಹ ॥ ೩೭ ॥

ತಥೇತ್ಯಥಾರುಹ್ಯ ಮಹಾರಥೌ ರಥಂ
ಪ್ರಭಾಸಮಾಸಾದ್ಯ ದುರಂತವಿಕ್ರಮೌ ।
ವೇಲಾಮುಪವ್ರಜ್ಯ ನಿಷೀದತುಃ ಕ್ಷಣಂ
ಸಿಂಧುರ್ವಿದಿತ್ವಾರ್ಹಣಮಾಹರತ್ತಯೋಃ ॥ ೩೮ ॥

ಈಗ ಅವರಿಬ್ಬರೂ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಬೇಕೆಂಬ ಇಚ್ಛೆಯಿಂದ ಅವಂತೀಪುರ (ಉಜ್ಜಯಿನಿ)ದಲ್ಲಿ ವಾಸಿಸುತ್ತಿದ್ದ ಕಾಶ್ಯಪಗೋತ್ರಿಯನಾದ ಸಾಂದೀಪನೀ ಮುನಿಯ ಬಳಿಗೆ ಹೋದರು. ॥ ೩೧ ॥ ಸೋದರರಿಬ್ಬರೂ ವಿಧಿಪೂರ್ವಕವಾಗಿ ಗುರುಗಳ ಬಳಿಯಲ್ಲಿ ವಾಸಿಸತೊಡಗಿದರು. ಆಗ ಅವರು ಬಹಿರಿಂದ್ರಿಯಗಳನ್ನು ನಿಗ್ರಹಿಸಿದ್ದರು. ಗುರುಗಳ ವಿಷಯದಲ್ಲಿ ನಿರ್ದುಷ್ಟವಾದ ವ್ಯವಹಾರವುಳ್ಳವರಾಗಿದ್ದರು. ಭಗವಾನ್ ಶ್ರೀಕೃಷ್ಣ ಬಲರಾಮರು ಗುರುಗಳ ಸೇವೆ ಹೇಗೆ ಮಾಡಬೇಕೆಂಬ ಆದರ್ಶವನ್ನು ಜನರ ಮುಂದಿಡುತ್ತಾ ಅತ್ಯಂತ ಭಕ್ತಿಯಿಂದ ಇಷ್ಟದೇವರಂತೆ ಗುರುಗಳ ಸೇವೆ ಮಾಡತೊಡಗಿದರು. ॥ ೩೨ ॥ ಶಿಷ್ಯರ ಶುದ್ಧ ಭಾವದಿಂದ ಕೂಡಿದ ಸೇವೆಯಿಂದ ಸಂತೃಪ್ತರಾದ ಬ್ರಾಹ್ಮಣಶ್ರೇಷ್ಠರಾದ ಸಾಂದೀಪನೀ ಗುರುಗಳು ಇಬ್ಬರೂ ಸೋದರರಿಗೆ ಶಿಕ್ಷಾ, ವ್ಯಾಕರಣಾದಿ ಆರು ಅಂಗಗಳೂ, ಉಪನಿಷತ್ತು ಸೇರಿ ನಾಲ್ಕೂ ವೇದಗಳನ್ನು ಉಪದೇಶಿಸಿದರು. ॥ ೩೩ ॥ ಇಷ್ಟು ಮಾತ್ರವಲ್ಲದೆ ಮಂತ್ರಗಳ ರಹಸ್ಯದಿಂದ ಕೂಡಿದ ಧನುರ್ವೇದವನ್ನೂ, ಮನುಸ್ಮೃತಿಯೇ ಮೊದಲಾದ ಧರ್ಮಶಾಸ್ತ್ರಗಳನ್ನೂ, ವೇದಾರ್ಥಗಳನ್ನು ನಿರೂಪಿಸುವ ಮೀಮಾಂಸವೇ ಮೊದಲಾದ ಶಾಸ್ತ್ರಗಳನ್ನು, ನ್ಯಾಯ (ತರ್ಕ) ಶಾಸ್ತ್ರವನ್ನು ಉಪದೇಶಿಸಿದರು. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ ಮತ್ತು ಆಶ್ರಯಗಳೆಂಬ ಆರು ವಿಧವಾದ ರಾಜನೀತಿಯನ್ನು ಕಲಿಸಿಕೊಟ್ಟರು. ॥ ೩೪ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣ-ಬಲರಾಮರೇ ಸಮಸ್ತ ವಿದ್ಯೆಗಳ ಪ್ರವರ್ತಕರು. ಆದ್ದರಿಂದ ಅವರು ಬೇರೆಯವರಿಂದ ಕಲಿಯಬೇಕಾದುದೇನೂ ಇರಲಿಲ್ಲ. ಆದರೂ ಮನುಷ್ಯರಂತೆ ವ್ಯವಹರಿಸುತ್ತಿದ್ದ ಅವರು ಏಕಸಂಧಿಗ್ರಾಹಿಗಳಾಗಿ ಸಮಸ್ತ ವಿದ್ಯೆಗಳನ್ನು ಕಲಿತುಕೊಂಡರು. ॥ ೩೫ ॥ ಪ್ರಯತ್ನಶೀಲರಾದ ರಾಮಕೃಷ್ಣರು ಅರವತ್ತುನಾಲ್ಕು ಕಲೆಗಳನ್ನು ಕೇವಲ ಅರವತ್ತನಾಲ್ಕು ದಿವಸಗಳಲ್ಲಿ ಕಲಿತುಕೊಂಡರು. ಹೀಗೆ ಅಧ್ಯಯನವು ಮುಗಿದಾಗ ಅವರು ಸಾಂದೀಪನೀ ಗುರುಗಳಲ್ಲಿ - 'ತಾವು ಇಚ್ಛಿಸುವ ಗುರುದಕ್ಷಿಣೆಯನ್ನು ನಮ್ಮಿಂದ ಪಡೆಯಿರಿ' ಎಂದು ಪ್ರಾರ್ಥಿಸಿಕೊಂಡರು. ॥ ೩೬ ॥

ಪರೀಕ್ಷಿತನೇ! ಸಾಂದೀಪನೀ ಮುನಿಗಳು ಶ್ರೀಕೃಷ್ಣ-ಬಲರಾಮರ ಅದ್ಭುತ ಮಹಿಮೆಯನ್ನೂ, ಅಲೌಕಿಕ ಬುದ್ಧಿಮತ್ತೆಯನ್ನೂ ಆಗಲೇ ತಿಳಿದುಕೊಂಡಿದ್ದರು. ಅವರು ತಮ್ಮ ಪತ್ನಿಯಲ್ಲಿ ಸಮಾಲೋಚನೆಮಾಡಿ, ಶಿಷ್ಯರಲ್ಲಿ - 'ಪ್ರಭಾಸ ಕ್ಷೇತ್ರದಲ್ಲಿ ನಮ್ಮ ಏಕಮಾತ್ರ ಪುತ್ರನು ಸಮುದ್ರದಲ್ಲಿ ಮುಳುಗಿ ಸತ್ತುಹೋಗಿದ್ದಾನು. ಅವನನ್ನು ನೀವು ತಂದುಕೊಡಬೇಕು' ಅದೇ ಗುರುದಕ್ಷಿಣೆಯಾಗುವುದು ಎಂದು ನುಡಿದರು. ॥ ೩೭ ॥ ಅನಂತ ಪರಾಕ್ರಮಶಾಲಿಗಳು, ಮಹಾರಥಿಕರೂ ಆದ ಶ್ರೀಕೃಷ್ಣ-ಬಲರಾಮರು 'ಹಾಗೆಯೇ ಆಗಲಿ' ಎಂದು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ರಥವನ್ನು ಹತ್ತಿ ಪ್ರಭಾಸಕ್ಷೇತ್ರಕ್ಕೆ ಹೋದರು. ಅವರು ಸಮುದ್ರತೀರಕ್ಕೆ ಹೋಗಿ ಕ್ಷಣಕಾಲ ಕುಳಿತುಕೊಂಡರು. ಇವರು ಸಾಕ್ಷಾತ್ ಪರಮೇಶ್ವರರಾಗಿದ್ದಾರೆ ಎಂದು ಅರಿತ ಸಮುದ್ರರಾಜನು ಅನೇಕ ವಿಧದ ಪೂಜಾಸಾಮಗ್ರಿಗಳನ್ನೆತ್ತಿಕೊಂಡು ಮನುಷ್ಯರೂಪದಿಂದ ಅವರ ಬಳಿಗೆ ಆಗಮಿಸಿದನು. ॥ ೩೮ ॥

ತಮಾಹ ಭಗವಾನಾಶು ಗುರುಪುತ್ರಃ ಪ್ರದೀಯತಾಮ್ ।
ಯೋಽಸಾವಿಹ ತ್ವಯಾ ಗ್ರಸ್ತೋ ಬಾಲಕೋ ಮಹತೋರ್ಮಿಣಾ
॥ ೩೯ ॥

*ಸಮುದ್ರ ಉವಾಚ*

ನೈವಾಹಾರ್ಷಮಹಂ ದೇವ ದೈತ್ಯಃ ಪಂಚಜನೋ ಮಹಾನ್ ।
ಅಂತರ್ಜಲಚರಃ ಕೃಷ್ಣ ಶಂಖರೂಪಧರೋಽಸುರಃ
॥ ೪೦ ॥

ಆಸ್ತೇ ತೇನಾಹೃತೋ ನೂನಂ ತಚ್ಛ್ರುತ್ವಾ ಸತ್ವರಂ ಪ್ರಭುಃ ।
ಜಲಮಾವಿಶ್ಯ ತಂ ಹತ್ವಾ ನಾಪಶ್ಯದುದರೇಽರ್ಭಕಮ್
॥ ೪೧ ॥

ತದಂಗಪ್ರಭವಂ ಶಂಖಮಾದಾಯ ರಥಮಾಗಮತ್ ।
ತತಃ ಸಂಯಮನೀಂ ನಾಮ ಯಮಸ್ಯ ದಯಿತಾಂ ಪುರೀಮ್
॥ ೪೨ ॥

ಗತ್ವಾ ಜನಾರ್ದನಃ ಶಂಖಂ ಪ್ರದಧ್ಮೌ ಸಹಲಾಯುಧಃ ।
ಶಂಖನಿರ್ಹ್ರಾದಮಾಕರ್ಣ್ಯ ಪ್ರಜಾಸಂಯಮನೋ ಯಮಃ
॥ ೪೩ ॥

ತಯೋಃ ಸಪರ್ಯಾಂ ಮಹತೀಂ ಚಕ್ರೇ ಭಕ್ತ್ಯುಪಬೃಂಹಿತಾಮ್ ।
ಉವಾಚಾವನತಃ ಕೃಷ್ಣಂ ಸರ್ವಭೂತಾಶಯಾಲಯಮ್ ।
ಲೀಲಾಮನುಷ್ಯ ಹೇ ವಿಷ್ಣೋ ಯುವಯೋಃ ಕರವಾಮ ಕಿಮ್
॥ ೪೪ ॥

*ಶ್ರೀಭಗವಾನುವಾಚ*

ಗುರುಪುತ್ರಮಿಹಾನೀತಂ ನಿಜಕರ್ಮನಿಬಂಧನಮ್ ।
ಆನಯಸ್ವ ಮಹಾರಾಜ ಮಚ್ಛಾಸನಪುರಸ್ಕೃತಃ
॥ ೪೫ ॥

ತಥೇತಿ ತೇನೋಪಾನೀತಂ ಗುರುಪುತ್ರಂ ಯದೂತ್ತಮೌ ।
ದತ್ತ್ವಾ ಸ್ವಗುರವೇ ಭೂಯೋ ವೃಣೀಷ್ವೇತಿ ತಮೂಚತುಃ
॥ ೪೬ ॥

*ಗುರುರುವಾಚ*

ಸಮ್ಯಕ್ ಸಂಪಾದಿತೋ ವತ್ಸ ಭವದ್ಭ್ಯಾಂ ಗುರುನಿಷ್ಕ್ರಯಃ ।
ಕೋ ನು ಯುಷ್ಮದ್ವಿಧಗುರೋಃ ಕಾಮಾನಾಮವಶಿಷ್ಯತೇ
॥ ೪೭ ॥

ಗಚ್ಛತಂ ಸ್ವಗೃಹಂ ವೀರೌ ಕೀರ್ತಿರ್ವಾಮಸ್ತು ಪಾವನೀ ।
ಛಂದಾಂಸ್ಯಯಾತಯಾಮಾನಿ ಭವಂತ್ವಿಹ ಪರತ್ರ ಚ
॥ ೪೮ ॥

ಭಗವಂತನು ಸಮುದ್ರದ ಬಳಿ ಇಂತೆಂದನು - ಓ ಸಮುದ್ರರಾಜನೇ! ಈ ಹಿಂದೆ ನೀನು ನಿನ್ನ ದೊಡ್ಡ-ದೊಡ್ಡ ತೆರೆಗಳ ಮೂಲಕ ನುಂಗಿಬಿಟ್ಟಿರುವ ನಮ್ಮ ಗುರುಪುತ್ರನನ್ನು ಶೀಘ್ರವಾಗಿ ತಂದೊಪ್ಪಿಸಿಬಿಡು. ॥ ೩೯ ॥

**ಸಮುದ್ರರಾಜನು ಹೇಳುತ್ತಾನೆ** - ದೇವಾಧಿದೇವನಾದ ಶ್ರೀಕೃಷ್ಣಸ್ವಾಮಿಯೇ ! ನಾನು ಆ ಬಾಲಕನನ್ನು ಸೆಳೆದುಕೊಂಡು ಹೋಗಿಲ್ಲ, ನನ್ನ ಜಲದಲ್ಲಿ ಪಂಚಜನನೆಂಬ ಒಬ್ಬ ದೈತ್ಯಜಾತಿಯ ಮಹಾಸುರನು ಶಂಖರೂಪದಿಂದ ಇರುವನು. ಖಂಡಿತವಾಗಿ ಅವನೇ ಆ ಬಾಲಕನನ್ನು ಕದ್ದುಕೊಂಡು ಹೋಗಿರಬೇಕು. ॥ ೪೦ ॥ ಸಮುದ್ರರಾಜನ ಮಾತನ್ನು ಕೇಳುತ್ತಲೇ ಭಗವಂತನು ಸಮುದ್ರ ವನ್ನು ಹೊಕ್ಕು ಶಂಖಾಸುರನನ್ನು ಸಂಹರಿಸಿದನು. ಆದರೆ ಗುರು ಪುತ್ರನು ಅವನ ಹೊಟ್ಟೆಯಲ್ಲಿ ಇರಲೇ ಇಲ್ಲ. ॥ ೪೧ ॥ ಆಗ ಅವನ ಶರೀರದಲ್ಲಿದ್ದ ಶಂಖವನ್ನು ಎತ್ತಿಕೊಂಡು ಬಂದು ಭಗವಂತನು ಬಲರಾಮನೊಡನೆ ಯಮರಾಜನ ಪರಮಪ್ರಿಯವಾದ ಸಂಯಮನೀಪುರಕ್ಕೆ ಹೋಗಿ ತನ್ನ ಶಂಖವನ್ನು ಊದಿದನು. ಶಂಖಧ್ವನಿಯನ್ನು ಕೇಳುತ್ತಲೇ ಸಮಸ್ತ ಪ್ರಜೆಗಳ ಶಾಸಕನಾದ ಯಮಧರ್ಮನು ಅವರನ್ನು ಆದರದಿಂದ ಸ್ವಾಗತಿಸಿ, ಭಕ್ತಿಭಾವ ದಿಂದ ವಿಧಿವತ್ತಾಗಿ ಅವರ ಮಹಾಪೂಜೆಯನ್ನು ಮಾಡಿದನು. ಅವನು ವಿನಮ್ರನಾಗಿ ತಲೆಯನ್ನು ತಗ್ಗಿಸಿ ಸಮಸ್ತ ಪ್ರಾಣಿಗಳ ಹೃದಯಗಳಲ್ಲಿ ವಿರಾಜಿಸುತ್ತಿರುವ ಸಚ್ಚಿದಾನಂದ ಸ್ವರೂಪನಾದ ಭಗವಾನ್ ಶ್ರೀಕೃಷ್ಣನಲ್ಲಿ ಪ್ರಾರ್ಥಿಸಿಕೊಂಡನು - ಲೀಲಾಮಾನುಷ ವಿಗ್ರಹರಾದ ಸರ್ವವ್ಯಾಪಕ ಪರಮೇಶ್ವರರೇ! ನಾನು ನಿಮ್ಮಿಬ್ಬರ ಯಾವ ಸೇವೆಯನ್ನು ಮಾಡಲಿ ? ॥ ೪೨-೪೪ ॥

**ಶ್ರೀಭಗವಂತನು ಹೇಳಿದನು** - ಯಮಧರ್ಮನೇ! ಅವನ ಕರ್ಮಬಂಧಕ್ಕೆ ಅನುಸಾರವಾಗಿ ನಮ್ಮ ಗುರುಪುತ್ರನು ಇಲ್ಲಿಗೆ ತರಲ್ಪಟ್ಟಿದ್ದಾನೆ. ಈಗ ನೀನು ಅವನ ಕರ್ಮದ ಕಡೆಗೆ ಲಕ್ಷ್ಯಕೊಡದೆ ನನ್ನ ಆಜ್ಞೆಯನ್ನು ಪುರಸ್ಕರಿಸಿ ಅವನನ್ನು ನನ್ನ ಬಳಿಗೆ ಕರೆದುಕೊಂಡು ಬಾ. ॥ ೪೫ ॥ ಯಮರಾಜನು 'ಹಾಗೆಯೇ ಆಗಲಿ' ಎಂದು ಹೇಳಿ ಭಗವಂತನ ಆದೇಶದಂತೆ ಅವನ ಗುರುಪುತ್ರನನ್ನು ತಂದು ಕೊಟ್ಟನು. ಆಗ ಯದುವಂಶ ಶಿರೋಮಣಿ ಶ್ರೀಕೃಷ್ಣನು ಮತ್ತು ಬಲರಾಮನು ಆ ಬಾಲಕನನ್ನು ಕರೆದುಕೊಂಡು ಉಜ್ಜಯಿನಿಗೆ ಹಿಂದಿರುಗಿ ತಮ್ಮ ಗುರುಗಳಿಗೆ ಅವನನ್ನು ಒಪ್ಪಿಸಿ - 'ಇನ್ನೇನಾದರೂ ತಾವು ಬಯಸುವಿರಾದರೆ ಕೇಳಿಕೊಳ್ಳಿರಿ' ಎಂದು ವಿನಂತಿಸಿ ಕೊಂಡರು. ॥ ೪೬ ॥

**ಗುರುಗಳೆಂದರು** - ವತ್ಸರಿರಾ ! ನೀವಿಬ್ಬರೂ ಅನುಪಮವಾದ ಗುರುದಕ್ಷಿಣೆಯನ್ನೇ ಕೊಟ್ಟಿರುವಿರಿ. ಮತ್ತೇನನ್ನು ನಾನು ಕೇಳಲಿ ? ನಿಮ್ಮಂತಹ ಪುರುಷೋತ್ತಮರನ್ನು ಶಿಷ್ಯರಾಗಿ ಹೊಂದಿರುವಾಗ ಈಡೇರಲಾಗದ ಮನೋರಥವು ಯಾವುದು ತಾನೇ ಉಳಿ ದೀತು ? ॥ ೪೭ ॥ ವೀರರೇ! ಈಗ ನೀವಿಬ್ಬರೂ ಮನೆಗೆ ಹೋಗಿರಿ. ಲೋಕಗಳನ್ನೇ ಪಾವನಗೊಳಿಸುವ ಕೀರ್ತಿಯು ನಿಮ ಗುಂಟಾಗಲಿ. ನೀವು ಇಲ್ಲಿ ಕಲಿತಿರುವ ವಿದ್ಯೆಯು ಇಹಲೋಕ ದಲ್ಲಿಯೂ, ಪರಲೋಕದಲ್ಲಿಯೂ ನಿತ್ಯನೂತನವಾಗಿದ್ದು ಎಂದಿಗೂ ವಿಸ್ಮೃತಿಯಾಗದಿರಲಿ. ॥ ೪೮ ॥

ಗುರುಣೈವಮನುಜ್ಞಾತೌ ರಥೇನಾನಿಲರಂಹಸಾ ।
ಆಯಾತೌ ಸ್ವಪುರಂ ತಾತ ಪರ್ಜನ್ಯನಿನದೇನ ವೈ
॥ ೪೯ ॥

ಪ್ರಿಯ ಪರೀಕ್ಷಿತ! ಮತ್ತೆ ಗುರುಗಳಿಂದ ಅನುಮತಿಯನ್ನು ಪಡೆದು, ವಾಯುವೇಗದಿಂದ ಚಲಿಸುವ, ಮೇಘದಂತಹ ಶಬ್ದವುಳ್ಳ ರಥದಲ್ಲಿ ಕುಳಿತುಕೊಂಡು ಸೋದರರಿಬ್ಬರೂ ಮಥುರೆಗೆ ಮರಳಿದರು. ॥ ೪೯॥ ಶ್ರೀಕೃಷ್ಣ-ಬಲರಾಮರನ್ನು ಅನೇಕ ದಿವಸಗಳಿಂದ ಕಾಣದೇ ಇರುವ ಮಥುರಾಪಟ್ಟಣದ ಪ್ರಜೆಗಳು ಅತ್ಯಂತ ದುಃಖಿತರಾಗಿದ್ದರು. ಬಲರಾಮ-ಶ್ರೀಕೃಷ್ಣರು ಬಂದಿರುವುದನ್ನು ನೋಡಿದ ಅವರೆಲ್ಲರೂ ಕಳೆದುಹೋದ ಧನವು ಮರಳಿ ದೊರಕಿದಂತೆ ಪರಮಾನಂದದಲ್ಲಿ ಮುಳುಗಿ ಹೋದರು. ॥ ೫೦ ॥

ಸಮನಂದನ್ ಪ್ರಜಾಃ ಸರ್ವಾ ದೃಷ್ಟ್ವಾ ರಾಮಜನಾರ್ದನೌ ।
ಅಪಶ್ಯಂತ್ಯೋ ಬಹ್ವಹಾನಿ ನಷ್ಟಲಬ್ಧಧನಾ ಇವ
॥ ೫೦ ॥

ನಲವತ್ತೈದನೆಯ ಅಧ್ಯಾಯವು ಮುಗಿಯಿತು. ॥ ೪೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಗುರುಪುತ್ರಾನಯನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ ॥ ೪೫ ॥

# ನಲವತ್ತಾರನೆಯ ಅಧ್ಯಾಯ

## ಉದ್ಧವನ ವ್ರಜಯಾತ್ರೆ

ಶ್ರೀಶುಕ ಉವಾಚ

ವೃಷ್ಣೀನಾಂ ಪ್ರವರೋ ಮಂತ್ರೀ ಕೃಷ್ಣಸ್ಯ ದಯಿತಃ ಸಖಾ ।
ಶಿಷ್ಯೋ ಬೃಹಸ್ಪತೇಃ ಸಾಕ್ಷಾದುದ್ಧವೋ ಬುದ್ಧಿಸತ್ತಮಃ
॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಉದ್ಧವನು ವೃಷ್ಣಿವಂಶೀಯರಲ್ಲಿ ಪ್ರಧಾನ ಪುರುಷನಾಗಿದ್ದನು. ಬೃಹಸ್ಪತಿಯ ಸಾಕ್ಷಾತ್ ಶಿಷ್ಯನಾಗಿದ್ದ ಅವನು ಪರಮ ಬುದ್ಧಿಶಾಲಿಯಾಗಿದ್ದನು. ಮಿಗಿಲಾಗಿ ಶ್ರೀಕೃಷ್ಣನ ಮಂತ್ರಿಯೂ ಪ್ರಿಯಸಖನೂ ಆಗಿದ್ದನು. ॥ ೧ ॥ ಒಂದು ದಿನ ಶರಣಾಗತರ ಸಮಸ್ತ ದುಃಖಗಳನ್ನು ಪರಿಹರಿಸುವ ಶ್ರೀಕೃಷ್ಣನು ತನ್ನ ಪ್ರಿಯಭಕ್ತನೂ, ಏಕಾಂತ ಪ್ರೇಮಿಯೂ ಆದ ಉದ್ಧವನ ಕೈಯನ್ನು ಹಿಡಿದುಕೊಂಡು ಈ ಮಾತನ್ನು ಹೇಳಿದನು. ॥ ೨ ॥ ಸೌಮ್ಯಸ್ವಭಾವದ ಉದ್ಧವನೇ! ನೀನೀಗಲೇ ಗೋಕುಲಕ್ಕೆ ಹೋಗು. ಅಲ್ಲಿರುವ ನನ್ನ ತಂದೆ-ತಾಯಿಗಳಾದ ನಂದ-ಯಶೋದೆಯರನ್ನು ನನ್ನ ಸಂಬಂಧವಾದ ಮಾತುಗಳಿಂದ ಆನಂದಗೊಳಿಸು. ಗೋಪಿಯರು ನನ್ನ ವಿರಹವ್ಯಾಧಿಯಿಂದ ದುಃಖಿತರಾಗಿರುವರು. ಅವರಿಗೆ ನನ್ನ ಸಂದೇಶವನ್ನು ಹೇಳಿ ಆ ವೇದನೆಯಿಂದ ಮುಕ್ತಗೊಳಿಸು. ॥ ೩ ॥ ಪ್ರಿಯ ಉದ್ಧವನೇ! ಗೋಪಿಕೆಯರ ಮನಸ್ಸು ನಿತ್ಯ-ನಿರಂತರವಾಗಿ ನನ್ನಲ್ಲೇ ತೊಡಗಿರುತ್ತದೆ. ಅವರ ಪ್ರಾಣ, ಜೀವನ, ಸರ್ವಸ್ವವೂ ನಾನೇ ಆಗಿರುವೆನು. ನನಗಾಗಿ ಅವರು ತಮ್ಮ ಪತಿ-ಪುತ್ರರೇ ಮೊದಲಾದ ಜ್ಞಾತಿ-ಬಂಧುಗಳನ್ನು ತೊರೆದು ಬಿಟ್ಟಿದ್ದಾರೆ. ನನ್ನನ್ನೇ ಅವರು ಪ್ರಿಯತಮನೆಂದೂ, ಸರ್ವಶ್ರೇಷ್ಠನಾದ ತಮ್ಮ ಆತ್ಮಸ್ವರೂಪನೆಂದೇ ತಮ್ಮ ಸಂಪೂರ್ಣ ಮನಸ್ಸಿನಿಂದ ಭಾವಿಸಿಕೊಂಡು ಬಿಟ್ಟಿದ್ದಾರೆ. ಯಾರು ನನ್ನ ಸಲುವಾಗಿ ಲೌಕಿಕ ಮತ್ತು ಪಾರಲೌಕಿಕ ಧರ್ಮವನ್ನು ಬಿಟ್ಟುಬಿಟ್ಟಿರುವರೋ ಅವರ ಭರಣ-ಪೋಷಣೆಗಳನ್ನು ನಾನೇ ಮಾಡುತ್ತೇನೆ. ಇದು ನನ್ನ ವ್ರತವಾಗಿದೆ. ॥ ೪ ॥

ತಮಾಹ ಭಗವಾನ್ ಪ್ರೇಷ್ಠಂ ಭಕ್ತಮೇಕಾಂತಿನಂ ಕ್ವಚಿತ್ ।
ಗೃಹೀತ್ವಾ ಪಾಣಿನಾ ಪಾಣಿಂ ಪ್ರಪನ್ನಾರ್ತಿಹರೋ ಹರಿಃ
॥ ೨ ॥

ಗಚ್ಛೋದ್ಧವ ವ್ರಜಂ ಸೌಮ್ಯ ಪಿತ್ರೋರ್ನೌ ಪ್ರೀತಿಮಾವಹ ।
ಗೋಪೀನಾಂ ಮದ್ವಿಯೋಗಾಧಿಂ ಮತ್ಸಂದೇಶೈರ್ವಿಮೋಚಯ
॥ ೩ ॥

ತಾ ಮನ್ಮನಸ್ಕಾ ಮತ್ಪ್ರಾಣಾ ಮದರ್ಥೇ ತ್ಯಕ್ತದೈಹಿಕಾಃ ।
ಮಾಮೇವ ದಯಿತಂ ಪ್ರೇಷ್ಠಮಾತ್ಮಾನಂ ಮನಸಾ ಗತಾಃ ।
ಯೇ ತ್ಯಕ್ತಲೋಕಧರ್ಮಾಶ್ಚ ಮದರ್ಥೇ ತಾನ್ ಬಿಭರ್ಮ್ಯಹಮ್
॥ ೪ ॥

ಮಯಿ ತಾಃ ಪ್ರೇಯಸಾಂ ಪ್ರೇಷ್ಠೇ ದೂರಸ್ಥೇ ಗೋಕುಲಸ್ತ್ರಿಯಃ ।
ಸ್ಮರಂತ್ಯೋಽಂಗ ವಿಮುಹ್ಯಂತಿ ವಿರಹೌತ್ಕಂಠ್ಯವಿಹ್ವಲಾಃ
॥ ೫ ॥

ಧಾರಯಂತ್ಯತಿಕೃಚ್ಛ್ರೇಣ ಪ್ರಾಯಃ ಪ್ರಾಣಾನ್ ಕಥಂಚನ ।
ಪ್ರತ್ಯಾಗಮನಸಂದೇಶೈರ್ಬಲ್ಲವ್ಯೋ ಮೇ ಮದಾತ್ಮಿಕಾಃ
॥ ೬ ॥

ಶ್ರೀಶುಕ ಉವಾಚ

ಇತ್ಯುಕ್ತ ಉದ್ಧವೋ ರಾಜನ್ ಸಂದೇಶಂ ಭರ್ತುರಾದೃತಃ ।
ಆದಾಯ ರಥಮಾರುಹ್ಯ ಪ್ರಯಯೌ ನಂದಗೋಕುಲಮ್
॥ ೭ ॥

ಪ್ರಾಪ್ತೋ ನಂದವ್ರಜಂ ಶ್ರೀಮಾನ್ ನಿಮ್ಲೋಚತಿ ವಿಭಾವಸೌ ।
ಛನ್ನಯಾನಃ ಪ್ರವಿಶತಾಂ ಪಶೂನಾಂ ಖುರರೇಣುಭಿಃ
॥ ೮ ॥

ವಾಸಿತಾರ್ಥೇಽಭಿಯುಧ್ಯದ್ಭಿರ್ನಾದಿತಂ ಶುಷ್ಮಿಭಿರ್ವೃಷೈಃ ।
ಧಾವಂತೀಭಿಶ್ಚ ವಾಸ್ರಾಭಿರೂಧೋಭಾರೈಃ ಸ್ವವತ್ಸಕಾನ್
॥ ೯ ॥

ಇತಸ್ತತೋ ವಿಲಂಘದ್ಭಿರ್ಗೋವತ್ಸೈರ್ಮಂಡಿತಂ ಸಿತೈಃ ।
ಗೋದೋಹಶಬ್ದಾಭಿರವಂ ವೇಣೂನಾಂ ನಿಃಸ್ವನೇನ ಚ
॥ ೧೦ ॥

ಗಾಯಂತೀಭಿಶ್ಚ ಕರ್ಮಾಣಿ ಶುಭಾನಿ ಬಲಕೃಷ್ಣಯೋಃ ।
ಸ್ವಲಂಕೃತಾಭಿರ್ಗೋಪೀಭಿರ್ಗೋಪೈಶ್ಚ ಸುವಿರಾಜಿತಮ್
॥ ೧೧ ॥

ಅಗ್ನ್ಯರ್ಕಾತಿಥಿಗೋವಿಪ್ರಪಿತೃದೇವಾರ್ಚನಾನ್ವಿತೈಃ ।
ಧೂಪದೀಪೈಶ್ಚ ಮಾಲ್ಯೈಶ್ಚ ಗೋಪಾವಾಸೈರ್ಮನೋರಮಮ್
॥ ೧೨ ॥

ಉದ್ಧವನೇ ! ನಾನು ಆ ಗೋಪಿಯರ ಪರಮ ಪ್ರಿಯತಮನಾಗಿರುವೆನು. ನಾನು ಇಲ್ಲಿಗೆ ಬಂದನಂತರ ಅವರು ನನ್ನನ್ನು ಬಹಳ ದೂರದಲ್ಲಿರುವನೆಂದು ಭಾವಿಸಿ, ನನ್ನನ್ನು ಯಾವಾಗಲೂ ಸ್ಮರಿಸುತ್ತಾ ವಿಮೋಹಗೊಳ್ಳುತ್ತಾರೆ. ಕೆಲವೊಮ್ಮೆ ಮೂರ್ಛಿತರೂ ಆಗುತ್ತಾರೆ. ವಿರಹವೇದನೆಯಿಂದ ದುಃಖಿತೆಯರಾದ ಅವರು ತಮಗೆ ಇಷ್ಟನಾದ ನನ್ನನ್ನು ಹೊಂದಲು ತವಕಪಡುತ್ತಿರುವರು. ॥ ೫ ॥ ನನ್ನ ಪ್ರೇಯಸಿಯರಾದ ಗೋಪಿಯರು ಇದುವರೆಗೆ ಬಹಳ ಕಷ್ಟದಿಂದ ಮತ್ತು ಪ್ರಯತ್ನದಿಂದ ತಮ್ಮ ಪ್ರಾಣಗಳನ್ನು ಉಳಿಸಿಕೊಂಡಿರುವರು. 'ನಾನು ಪುನಃ ನಿಮ್ಮಲ್ಲಿಗೆ ಬರುವೆನು' ಎಂಬ ನನ್ನ ಇದೊಂದು ಸಂದೇಶವೇ ಅವರಿಗೆ ಜೀವನಾಧಾರವಾಗಿದೆ. ಉದ್ಧವನೇ ! ಇನ್ನೇನು ಹೇಳಲಿ ? ನಾನು. ನಾನೇ ಅವರ ಆತ್ಮನಾಗಿರುವೆನು. ಅವರು ನಿತ್ಯ-ನಿರಂತರ ನನ್ನಲ್ಲಿಯೆ ತನ್ಮಯರಾಗಿ ಇರುತ್ತಾರೆ. ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನ ಈ ಮಾತನ್ನು ಕೇಳಿದಾಗ ಉದ್ಧವನು ಅತ್ಯಂತ ಆದರದಿಂದ ತನ್ನ ಸ್ವಾಮಿಯ ಸಂದೇಶವನ್ನು ಹೊತ್ತುಕೊಂಡು ರಥದಲ್ಲಿ ಕುಳಿತು ನಂದಗೋಕುಲದ ಕಡೆಗೆ ಹೊರಟನು. ॥ ೭ ॥ ಭಾಗ್ಯಶಾಲಿಯಾದ ಉದ್ಧವನು ಸೂರ್ಯಾಸ್ತಕ್ಕೆ ಸರಿಯಾಗಿ ನಂದಗೋಕುಲಕ್ಕೆ ತಲುಪಿದನು. ಆ ಸಮಯದಲ್ಲಿ ಹಸುಗಳು ಕಾಡಿನಿಂದ ಮರಳುತ್ತಿದ್ದವು. ಅವರ ಗೊರಸುಗಳಿಂದ ಎದ್ದ ಧೂಳಿಯು ಉದ್ಧವನ ರಥವನ್ನು ಮುಚ್ಚಿಬಿಟ್ಟಿತು. ॥ ೮ ॥ ಗೋವುಗಳನ್ನು ಸಂಪರ್ಕಿಸಲು ಕೊಬ್ಬಿದ ಹೋರಿಗಳು ತಮ್ಮ-ತಮ್ಮಲ್ಲಿಯೇ ಸ್ಪರ್ಧಿಸುತ್ತಿದ್ದವು. ಅವುಗಳ ಗರ್ಜನೆಯು ವ್ರಜದಲ್ಲೆಲ್ಲ ಪ್ರತಿಧ್ವನಿಸುತ್ತಿತ್ತು. ಸ್ವಲ್ಪ ದಿವಸಗಳ ಹಿಂದೆ ಈಯ್ದ ಹಸುಗಳು ತಮ್ಮ ಕೆಚ್ಚಲುಗಳು ಭಾರವಾಗಿದ್ದರೂ ಲೆಕ್ಕಿಸದೆ ತಮ್ಮ-ತಮ್ಮ ಕರುಗಳ ಕಡೆಗೆ ನಾಗಲೋಟದಿಂದ ಓಡಿಹೋಗುತ್ತಿದ್ದವು. ॥ ೯ ॥ ಅತ್ತಲಿತ್ತ ನೆಗೆ-ನೆಗೆದುಕೊಂಡು ಓಡಾಡುತ್ತಿದ್ದ ಬಿಳಿಯ ಕರುಗಳಿಂದ ಗೋಕುಲವು ಸಮಲಂಕೃತವಾಗಿತ್ತು. ವೇಣುನಾದದೊಡನೆ ಹಸುಗಳು ಹಾಲನ್ನು ಕರೆಯುವ 'ಘರ್-ಘರ್' ಶಬ್ದವು ಕೇಳಿ ಬರುತ್ತಿದ್ದು ಕಿವಿಗಳಿಗೆ ಆಪ್ಯಾಯಮಾನವಾಗಿದ್ದಿತು. ॥ ೧೦ ॥ ವಸ್ತ್ರಾಭರಣಗಳಿಂದ ಸಮಲಂಕೃತರಾಗಿ ಬಲರಾಮ-ಶ್ರೀಕೃಷ್ಣರ ಮಂಗಲಮಯ ಚರಿತ್ರೆಗಳನ್ನು ಹಾಡುತ್ತಿದ್ದ ಗೋಪಿಯರಿಂದ ಮತ್ತು ಗೋಪಾಲಕರಿಂದಲೂ ಗೋಕುಲದ ಶೋಭೆಯು ಇನ್ನೂ ಹೆಚ್ಚಿತ್ತು. ॥ ೧೧ ॥ ಗೋಪಾಲರ ಮನೆಗಳಲ್ಲಿ ಅಗ್ನಿ, ಸೂರ್ಯ, ಅತಿಥಿ, ಗೋವು, ಬ್ರಾಹ್ಮಣ ಮತ್ತು ದೇವತೆ-ಪಿತೃಗಳ ಪೂಜೆಗಳು ಯಥಾವಿಧಿಯಾಗಿ ನಡೆದಿತ್ತು. ಧೂಪಗಳ ಸುವಾಸನೆಯು ಸರ್ವತ್ರ ಹರಡಿತ್ತು. ದೀಪಗಳು ಬೆಳಗುತ್ತಿದ್ದವು. ಅವರ ಮನೆಗಳನ್ನು ಪುಷ್ಪಗಳಿಂದ ಅಲಂಕರಿಸಿದ್ದರು. ಇಂತಹ ಮನೋಹರವಾದ ಮನೆಗಳಿಂದ ಇಡೀ ಗೋಕುಲವು ಇನ್ನೂ ಹೆಚ್ಚಾಗಿಯೇ ಶೋಭಿಸುತ್ತಿತ್ತು. ॥ ೧೨ ॥

ಸರ್ವತಃ ಪುಷ್ಪಿತವನಂ ದ್ವಿಜಾಲಿಕುಲನಾದಿತಮ್ ।
ಹಂಸಕಾರಂಡವಾಕೀರ್ಣೈಃ ಪದ್ಮಷಂಡೈಶ್ಚ ಮಂಡಿತಮ್ ॥ ೧೩ ॥

ತಮಾಗತಂ ಸಮಾಗಮ್ಯ ಕೃಷ್ಣಸ್ಯಾನುಚರಂ ಪ್ರಿಯಮ್ ।
ನಂದಃ ಪ್ರೀತಃ ಪರಿಷ್ವಜ್ಯ ವಾಸುದೇವಧಿಯಾರ್ಚಯತ್ ॥ ೧೪ ॥

ಭೋಜಿತಂ ಪರಮಾನ್ನೇನ ಸಂವಿಷ್ಟಂ ಕಶಿಪೌ ಸುಖಮ್ ।
ಗತಶ್ರಮಂ ಪರ್ಯಪೃಚ್ಛತ್ ಪಾದಸಂವಾಹನಾದಿಭಿಃ ॥ ೧೫ ॥

ಕಚ್ಚಿದಂಗ ಮಹಾಭಾಗ ಸಖಾ ನಃ ಶೂರನಂದನಃ ।
ಆಸ್ತೇ ಕುಶಲ್ಯಪತ್ಯಾದ್ಯೈರ್ಯುಕ್ತೋ ಮುಕ್ತಃ ಸುಹೃದ್ವ್ರತಃ ॥ ೧೬ ॥

ದಿಷ್ಟ್ಯಾ ಕಂಸೋ ಹತಃ ಪಾಪಃ ಸಾನುಗಃ ಸ್ವೇನ ಪಾಪ್ಮನಾ ।
ಸಾಧೂನಾಂ ಧರ್ಮಶೀಲಾನಾಂ ಯದೂನಾಂ ದ್ವೇಷ್ಟಿ ಯಃ ಸದಾ ॥ ೧೭ ॥

ಅಪಿ ಸ್ಮರತಿ ನಃ ಕೃಷ್ಣೋ ಮಾತರಂ ಸುಹೃದಃ ಸಖೀನ್ ।
ಗೋಪಾನ್ ವ್ರಜಂ ಚಾತ್ಮನಾಥಂ ಗಾವೋ ವೃಂದಾವನಂ ಗಿರಿಮ್ ॥ ೧೮ ॥

ಅಪ್ಯಾಯಾಸ್ಯತಿ ಗೋವಿಂದಃ ಸ್ವಜನಾನ್ ಸಕೃದೀಕ್ಷಿತುಮ್ ।
ತರ್ಹಿ ದ್ರಕ್ಷ್ಯಾಮ ತದ್ವಕ್ತ್ರಂ ಸುನಸಂ ಸುಸ್ಮಿತೇಕ್ಷಣಮ್ ॥ ೧೯ ॥

ದಾವಾಗ್ನೇರ್ವಾತವರ್ಷಾಚ್ಚ ವೃಷಸರ್ಪಾಚ್ಚ ರಕ್ಷಿತಾಃ ।
ದುರತ್ಯಯೇಭ್ಯೋ ಮೃತ್ಯುಭ್ಯಃ ಕೃಷ್ಣೇನ ಸುಮಹಾತ್ಮನಾ ॥ ೨೦ ॥

ಸ್ಮರತಾಂ ಕೃಷ್ಣವೀರ್ಯಾಣಿ ಲೀಲಾಪಾಂಗನಿರೀಕ್ಷಿತಮ್ ।
ಹಸಿತಂ ಭಾಷಿತಂ ಚಾಂಗ ಸರ್ವಾ ನಃ ಶಿಥಿಲಾಃ ಕ್ರಿಯಾಃ ॥ ೨೧ ॥

ಗೋಕುಲದ ನಾಲ್ಕು ಕಡೆಗಳಲ್ಲಿಯೂ ದುಂಬಿಗಳಿಂದ ಝೇಂಕರಿಸಲ್ಪಟ್ಟ ಹೂದೋಟಗಳಿದ್ದು ಅಲ್ಲಿ ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತಿದ್ದವು. ಕಮಲದ ದಂಟುಗಳಿಂದ ಸಮಲಂಕೃತವಾದ ಹಾಗೂ ಹಂಸ-ಕಾರಂಡವ ಪಕ್ಷಿಗಳಿಂದ ವ್ಯಾಪ್ತವಾದ ಸುಂದರ ಸರೋವರಗಳಿಂದಲೂ ಕೂಡಿದ್ದು ಗೋಕುಲವು ಅತ್ಯಂತ ಶೋಭಾಯಮಾನವಾಗಿತ್ತು. ॥ ೧೩ ॥

ಶ್ರೀಕೃಷ್ಣನ ಅನುಚರನೂ, ಅವನಿಗೆ ಅತ್ಯಂತ ಪ್ರಿಯನೂ ಆದ ಉದ್ಧವನು ಗೋಕುಲಕ್ಕೆ ಬಂದೊಡನೆ ನಂದಗೋಪನು ಮುಂದಾಗಿ ಹೋಗಿ ಅವನನ್ನು ವಾಸುದೇವನೇ ಬಂದಿರುವನೆಂದು ಭಾವಿಸಿ ಅತ್ಯಂತ ಪ್ರೀತಿಯಿಂದ ಆಲಿಂಗಿಸಿಕೊಂಡು ಸುಮ್ಮಾನಿಸಿದನು. ॥ ೧೪ ॥ ಪಾಯಸಾದಿಗಳಿಂದ ಕೂಡಿದ ಭೋಜನವನ್ನು ಮಾಡಿಸಿದನು. ಬಳಿಕ ಉದ್ಧವನು ಮೆತ್ತೆಯಮೇಲೆ ಕುಳಿತುಕೊಂಡಾಗ ಸೇವಕರು ಕೈಕಾಲುಗಳನ್ನು ಒತ್ತಿ, ಗಾಳಿಯನ್ನು ಬೀಸಿ ಆಯಾಸವನ್ನು ಪರಿಹರಿಸಿದರು. ॥ ೧೫ ॥ ಆಗ ನಂದಗೋಪನು ಅವನನ್ನು ಪ್ರಶ್ನಿಸಿದನು – ಪರಮಭಾಗ್ಯಶಾಲಿಯಾದ ಉದ್ಧವನೇ! ನನಗೆ ಗೆಳೆಯನಾದ ವಸುದೇವನು ಸೆರೆಮನೆಯಿಂದ ಬಿಡುಗಡೆ ಹೊಂದಿ, ತನ್ನ ಆತ್ಮೀಯರಾದ ಸ್ವಜನರಿಂದಲೂ ಭಾರ್ಯಾಪುತ್ರರಿಂದಲೂ ಕೂಡಿ ಕುಶಲಿಯಾಗಿರುವನಲ್ಲವೇ? ॥ ೧೬ ॥ ಪಾಪಿಯಾದ ಕಂಸನು ತನ್ನ ಪಾಪದ ಫಲಸ್ವರೂಪವಾಗಿ ಅನುಯಾಯಿಗಳೊಂದಿಗೆ ಮರಣ ಹೊಂದಿದನು. ಇದು ಮಹಾಸೌಭಾಗ್ಯದ ವಿಷಯವೇ ಆಗಿದೆ. ಏಕೆಂದರೆ, ಸ್ವಭಾವದಿಂದಲೇ ಧಾರ್ಮಿಕರೂ ಸಾಧುಗಳೂ ಆದ ಯದುವಂಶಿಯರನ್ನು ಅವನು ಸದಾ ದ್ವೇಷಿಸುತ್ತಿದ್ದನು. ॥ ೧೭ ॥ ಆದಿರಲಿ, ಉದ್ಧವನೇ! ಶ್ರೀಕೃಷ್ಣನು ಎಂದಾದರೂ ನಮ್ಮಗಳನ್ನು ನೆನೆದುಕೊಳ್ಳುವನೇ? ಇವಳು ಅವನ ತಾಯಿಯಾಗಿದ್ದಾಳೆ. ಇವರು ಸ್ವಜನ-ಸಂಬಂಧಿಗಳು. ಸ್ನೇಹಿತರಾದ ಗೋಪರಿದ್ದಾರೆ. ಅವನನ್ನೇ ತನ್ನ ಸ್ವಾಮಿಯೆಂದೂ, ಸರ್ವಸ್ವವೆಂದೂ ಭಾವಿಸುವ ಈ ವ್ರಜವಿದೆ. ಅವನು ಪ್ರೀತಿಸುತ್ತಿದ್ದ ಗೋವುಗಳಿವೆ. ಅವನು ವಿಹರಿಸಿದ ವೃಂದಾವನ ಮತ್ತು ಈ ಗೋವರ್ಧನವಿದೆ. ಇವುಗಳನ್ನು ಎಂದಾದರೂ ಸ್ಮರಿಸುತ್ತಿರುವನೇ? ॥ ೧೮ ॥ ಉದ್ಧವಾ! ತನ್ನ ಸುಹೃದ್-ಬಂಧುಗಳನ್ನು ನೋಡಲು ನಮ್ಮ ಗೋವಿಂದನು ಒಮ್ಮೆಯಾದರೂ ಬರುವನೇ? ಎಂಬುದನ್ನಾದರೂ ಹೇಳು. ಅವನು ಇಲ್ಲಿಗೆ ಬಂದರೆ ನಾವು ಅವನ ನೀಳವಾದ ಮೂಗು, ಮಧುರವಾದ ಹಾಸ್ಯ ಮತ್ತು ಕುಡಿನೋಟದಿಂದ ಕೂಡಿದ ಮುಖಕಮಲವನ್ನಾದರೂ ನೋಡುವೆವು. ॥ ೧೯ ॥ ಉದ್ಧವನೇ! ಶ್ರೀಕೃಷ್ಣನ ಹೃದಯ ಉದಾರವಾಗಿದೆ. ಅವನ ಶಕ್ತಿ ಅನಂತವಾಗಿದೆ. ಅವನು ದಾವಾಗ್ನಿಯಿಂದ, ಬಿರುಗಾಳಿ-ಮಳೆಯಿಂದ, ವೃಷಾಸುರ ಮತ್ತು ಅಜಗರಾದಿ ನಿವಾರಿಸಲು ಸಾಧ್ಯವಲ್ಲದ ಮೃತ್ಯುವಿನ ನಿಮಿತ್ತಗಳಿಂದ ನಮ್ಮನ್ನು ಒಮ್ಮೆಯಲ್ಲ, ಅನೇಕ ಬಾರಿ ರಕ್ಷಿಸಿರುವನು. ॥ ೨೦ ॥ ಉದ್ಧವಾ! ನಾವು ಶ್ರೀಕೃಷ್ಣನ ವಿಚಿತ್ರ ಚರಿತ್ರಗಳನ್ನು, ಅವನ ವಿಲಾಸಪೂರ್ಣವಾದ ಕುಡಿನೋಟವನ್ನು, ಉನ್ಮುಕ್ತವಾದ ನಗುವನ್ನು, ಮಧುರವಾದ ಮಾತುಗಳನ್ನು ಸ್ಮರಿಸುತ್ತಾ ಇರುತ್ತೇವೆ. ಈಗ ನಮ್ಮಿಂದ ಯಾವುದೇ ಕೆಲಸ ಕಾರ್ಯಗಳು ನಡೆಯದಷ್ಟು ಅವನ ಸ್ಮರಣೆಯಲ್ಲೇ ತನ್ಮಯರಾಗಿರುತ್ತೇವೆ. ॥ ೨೧ ॥

ಸರಿಚ್ಛೈಲವನೋದ್ದೇಶಾನ್ ಮುಕುಂದಪದಭೂಷಿತಾನ್ ।
ಆಕ್ರೀಡಾನೀಕ್ಷಮಾಣಾನಾಂ ಮನೋ ಯಾತಿ ತದಾತ್ಮತಾಮ್ ॥ ೨೨ ॥

ಮನ್ಯೇ ಕೃಷ್ಣಂ ಚ ರಾಮಂ ಚ ಪ್ರಾಪ್ತಾವಿಹ ಸುರೋತ್ತಮೌ ।
ಸುರಾಣಾಂ ಮಹದರ್ಥಾಯ ಗರ್ಗಸ್ಯ ವಚನಂ ಯಥಾ ॥ ೨೩ ॥

ಕಂಸಂ ನಾಗಾಯುತಪ್ರಾಣಂ ಮಲ್ಲೌ ಗಜಪತಿಂ ತಥಾ ।
ಅವಧಿಷ್ಟಾಂ ಲೀಲಯೈವ ಪಶೂನಿವ ಮೃಗಾಧಿಪಃ ॥ ೨೪ ॥

ತಾಲತ್ರಯಂ ಮಹಾಸಾರಂ ಧನುರ್ಯಷ್ಟಿಮಿವೇಭರಾಟ್ ।
ಬಭಂಜೈಕೇನ ಹಸ್ತೇನ ಸಪ್ತಾಹಮದಧಾದ್ಗಿರಿಮ್ ॥ ೨೫ ॥

ಪ್ರಲಂಬೋ ಧೇನುಕೋಽರಿಷ್ಟಸ್ತೃಣಾವರ್ತೋ ಬಕಾದಯಃ ।
ದೈತ್ಯಾಃ ಸುರಾಸುರಜಿತೋ ಹತಾ ಯೇನೇಹ ಲೀಲಯಾ ॥ ೨೬ ॥

ಶ್ರೀಶುಕ ಉವಾಚ

ಇತಿ ಸಂಸ್ಮೃತ್ಯ ಸಂಸ್ಮೃತ್ಯ ನಂದಃ ಕೃಷ್ಣಾನುರಕ್ತಧೀಃ ।
ಅತ್ಯುತ್ಕಂಠೋಽಭವತ್ತೂಷ್ಣೀಂ ಪ್ರೇಮಪ್ರಸರವಿಹ್ವಲಃ ॥ ೨೭ ॥

ಯಶೋದಾ ವರ್ಣ್ಯಮಾನಾನಿ ಪುತ್ರಸ್ಯ ಚರಿತಾನಿ ಚ ।
ಶೃಣ್ವಂತ್ಯಶ್ರೂಣ್ಯವಾಸ್ರಾಕ್ಷೀತ್ಸ್ನೇಹಸ್ನುತಪಯೋಧರಾ ॥ ೨೮ ॥

ತಯೋರಿತ್ಥಂ ಭಗವತಿ ಕೃಷ್ಣೇ ನಂದಯಶೋದಯೋಃ ।
ವೀಕ್ಷ್ಯಾನುರಾಗಂ ಪರಮಂ ನಂದಮಾಹೋದ್ಧವೋ ಮುದಾ ॥ ೨೯ ॥

ಉದ್ಧವ ಉವಾಚ

ಯುವಾಂ ಶ್ಲಾಘ್ಯತಮೌ ನೂನಂ ದೇಹಿನಾಮಿಹ ಮಾನದ ।
ನಾರಾಯಣೇಽಖಿಲಗುರೌ ಯತ್ಕೃತಾ ಮತಿರೀದೃಶೀ ॥ ೩೦ ॥

ಶ್ರೀಕೃಷ್ಣನು ಜಲಕ್ರೀಡೆಯಾಡಿದ ಈ ನದಿಯನ್ನು ನೋಡುವಾಗ, ತನ್ನ ಒಂದೇ ಕೈಯಿಂದ ಎತ್ತಿದ ಗಿರಿರಾಜ ಗೋವರ್ಧನವನ್ನೂ, ಅವನು ಗೋವುಗಳನ್ನು ಮೇಯಿಸುತ್ತಾ, ಕೊಳಲನ್ನು ನುಡಿಸುತ್ತಾ ವಿಹರಿಸಿದ ಈ ವೃಂದಾವನವನ್ನು, ಅವನು ತನ್ನ ಸ್ನೇಹಿತರೊಂದಿಗೆ ಅನೇಕ ವಿಧದ ಆಟವಾಡುತ್ತಿದ್ದ ಸ್ಥಳಗಳನ್ನು ನೋಡುವಾಗ, ಇನ್ನೂ ಅಳಿಯದೇ ಇರುವ ಅವನ ಪದಚಿಹ್ನೆಯನ್ನು ನೋಡಿದಾಗ ನಮ್ಮ ಮನಸ್ಸು ಶ್ರೀಕೃಷ್ಣಮಯವಾಗಿ ಹೋಗುತ್ತದೆ. ॥ ೨೨ ॥ ದೇವಶ್ರೇಷ್ಠರಾದ ಶ್ರೀಕೃಷ್ಣ-ಬಲರಾಮರು ದೇವತೆಗಳ ಪ್ರಯೋಜನ ಸಿದ್ಧಿಗಾಗಿ ಇಲ್ಲಿ ಅವತರಿಸಿರುವರೆಂದು ನಾನು ಭಾವಿಸುತ್ತೇನೆ. ಗರ್ಗಾಚಾರ್ಯರೂ ಇದನ್ನು ನಮಗೆ ಹೀಗೆಯೇ ಹೇಳಿದ್ದರು. ॥ ೨೩ ॥ ಹತ್ತು ಸಾವಿರ ಆನೆಗಳ ಬಲವುಳ್ಳ ಕಂಸನನ್ನು, ಅಜೇಯರೆನಿಸಿದ್ದ ಮುಷ್ಟಿಕ-ಚಾಣೂರ ಮಲ್ಲರನ್ನು, ಕುವಲಯಾಪೀಡಗಜವನ್ನು ಇವರಿಬ್ಬರೂ ಸೇರಿ ಸಿಂಹವು ಕ್ಷುದ್ರಪಶುಗಳನ್ನು ಕೊಲ್ಲುವಂತೆ ಆಟವಾಡುತ್ತಲೇ ಸಂಹರಿಸಿದರು. ॥ ೨೪ ॥ ಮೂರು ತಾಳೆಮರಗಳಷ್ಟು ಉದ್ದವಾದ, ಅತ್ಯಂತ ದೃಢವಾಗಿದ್ದ ಮಹಾಧನುಸ್ಸನ್ನು ಗಜರಾಜನು ಕೋಲನ್ನು ಅಥವಾ ಕಬ್ಬಿನ ಜಲ್ಲೆಯನ್ನು ಮುರಿದು ಹಾಕುವಂತೆ ಶ್ರೀಕೃಷ್ಣನು ಮುರಿದು ಹಾಕಿದನು. ಒಂದೇ ಕೈಯಲ್ಲಿ ಗೋವರ್ಧನ ಪರ್ವತವನ್ನು ಏಳು ದಿವಸಗಳವರೆಗೆ ಹಿಡಿದೆತ್ತಿ ನಿಂತಿದ್ದನು. ॥ ೨೫ ॥ ಸಮಸ್ತ ದೇವತೆಗಳನ್ನೂ, ಅಸುರರನ್ನೂ ಜಯಿಸಿದ ಪ್ರಲಂಬ, ಧೇನುಕ, ಅರಿಷ್ಟಾಸುರ, ತೃಣಾವರ್ತ, ಬಕ ಮುಂತಾದ ದೊಡ್ಡ ದೊಡ್ಡ ದೈತ್ಯರನ್ನು ನಮ್ಮೆಲ್ಲರ ಸಮಕ್ಷಮದಲ್ಲಿ ಆಡುತ್ತಾಡುತ್ತಲೇ ಶ್ರೀಕೃಷ್ಣನು ಸಂಹರಿಸಿಬಿಟ್ಟಿದ್ದನು. ॥ ೨೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಶ್ರೀಕೃಷ್ಣನಲ್ಲಿಯೇ ಅನುರಕ್ತವಾದ ಮನಸ್ಸಿನಿಂದ ಕೂಡಿದ್ದ ನಂದಗೋಪನು ಹೀಗೆ ಶ್ರೀಕೃಷ್ಣನ ಬಾಲಲೀಲೆಗಳೆಲ್ಲವನ್ನು ಒಂದಾದ ಮೇಲೊಂದರಂತೆ ಸ್ಮರಿಸುತ್ತಾ ಪ್ರೇಮಾವೇಶದಿಂದ ಗದ್ಗದನಾಗಿ ಮುಂದೆ ಮಾತನಾಡಲಾಗದೆ ಸುಮ್ಮನಾದನು. ಅವನಿಗೆ ಶ್ರೀಕೃಷ್ಣನನ್ನು ನೋಡಬೇಕೆಂಬ ಕಾತುರವು ಹೆಚ್ಚಾಗಿ ಬಿಟ್ಟಿತು. ॥ ೨೭ ॥ ಯಶೋದಾದೇವಿಯೂ ನಂದನು ವರ್ಣಿಸುತ್ತಿದ್ದ ತನ್ನ ಬಾಲಮುಕುಂದನ ಚರಿತ್ರೆಗಳನ್ನು ಕೇಳುತ್ತಾ ಆನಂದಬಾಷ್ಪಗಳನ್ನು ಧಾರಾಕಾರವಾಗಿ ಸುರಿಸುತ್ತಿದ್ದಳು. ಪುತ್ರ ಸ್ನೇಹದ ಸ್ಮರಣೆಯಿಂದಾಗಿ ಅವಳ ಸ್ತನಗಳಿಂದ ಹಾಲು ಸ್ರವಿಸತೊಡಗಿತು. ॥ ೨೮ ॥ ನಂದ-ಯಶೋದೆಯರ ಹೃದಯದಲ್ಲಿ ಶ್ರೀಕೃಷ್ಣನ ಕುರಿತಾದ ಇರುವ ಅಗಾಧ ಅನುರಾಗವನ್ನು ನೋಡಿ ಉದ್ಧವನು ಆನಂದಮಗ್ನನಾದನು ಹಾಗೂ ಅವರಲ್ಲಿ ಹೇಳತೊಡಗಿದನು. ॥ ೨೯ ॥

**ಉದ್ಧವನು ಹೇಳುತ್ತಾನೆ** – ಸನ್ಮಾನ್ಯ ನಂದಗೋಪನೇ! ನೀವಿಬ್ಬರೂ ದೇಹಧಾರಿಗಳಲ್ಲೆ ಅತ್ಯಂತ ಶ್ಲಾಘ್ಯತಮರಾಗಿರುವಿರಿ. ಅಖಿಲಲೋಕಗುರುವಾದ ಶ್ರೀಮನ್ನಾರಾಯಣನಲ್ಲಿ ನಿಮಗೆ ಈ ವಿಧವಾದ ಪುತ್ರವಾತ್ಸಲ್ಯವಿರುವುದಲ್ಲವೇ ? ॥ ೩೦ ॥

ಏತೌ ಹಿ ವಿಶ್ವಸ್ಯ ಚ ಬೀಜಯೋನೀ
ರಾಮೋ ಮುಕುಂದಃ ಪುರುಷಃ ಪ್ರಧಾನಮ್ ।
ಅನ್ವೀಯ ಭೂತೇಷು ವಿಲಕ್ಷಣಸ್ಯ
ಜ್ಞಾನಸ್ಯ ಚೇಶಾತ ಇಮೌ ಪುರಾಣೌ ॥ ೩೧ ॥

ಯಸ್ಮಿಂಜನಃ ಪ್ರಾಣವಿಯೋಗಕಾಲೇ
ಕ್ಷಣಂ ಸಮಾವೇಶ್ಯ ಮನೋವಿಶುದ್ಧಮ್ ।
ನಿರ್ಹೃತ್ಯ ಕರ್ಮಾಶಯಮಾಶು ಯಾತಿ
ಪರಾಂ ಗತಿಂ ಬ್ರಹ್ಮಮಯೋಽರ್ಕವರ್ಣಃ ॥ ೩೨ ॥

ತಸ್ಮಿನ್ ಭವಂತಾವಖಿಲಾತ್ಮಹೇತೌ
ನಾರಾಯಣೇ ಕಾರಣಮರ್ತ್ಯಮೂರ್ತೌ ।
ಭಾವಂ ವಿಧತ್ತಾಂ ನಿತರಾಂ ಮಹಾತ್ಮನ್
ಕಿಂ ವಾವಶಿಷ್ಟಂ ಯುವಯೋಃ ಸುಕೃತ್ಯಮ್ ॥ ೩೩ ॥

ಆಗಮಿಷ್ಯತ್ಯದೀರ್ಘೇಣ ಕಾಲೇನ ವ್ರಜಮಚ್ಯುತಃ ।
ಪ್ರಿಯಂ ವಿಧಾಸ್ಯತೇ ಪಿತ್ರೋರ್ಭಗವಾನ್ ಸಾತ್ವತಾಂ ಪತಿಃ ॥ ೩೪ ॥

ಹತ್ವಾ ಕಂಸಂ ರಂಗಮಧ್ಯೇ ಪ್ರತೀಪಂ ಸರ್ವಸಾತ್ವತಾಮ್ ।
ಯದಾಹ ವಃ ಸಮಾಗತ್ಯ ಕೃಷ್ಣಃ ಸತ್ಯಂ ಕರೋತಿ ತತ್ ॥ ೩೫ ॥

ಮಾ ಖಿದ್ಯತಂ ಮಹಾಭಾಗೌ ದ್ರಕ್ಷ್ಯಥಃ ಕೃಷ್ಣಮಂತಿಕೇ ।
ಅಂತರ್ಹೃದಿ ಸ ಭೂತಾನಾಮಾಸ್ತೇ ಜ್ಯೋತಿರಿವೈಧಸಿ ॥ ೩೬ ॥

ನ ಹ್ಯಸ್ಯಾಸ್ತಿ ಪ್ರಿಯಃ ಕಶ್ಚಿನ್ನಾಪ್ರಿಯೋ ವಾಸ್ತ್ಯಮಾನಿನಃ ।
ನೋತ್ತಮೋ ನಾಧಮೋ ನಾಪಿ ಸಮಾನಸ್ಯಾಸಮೋಽಪಿ ವಾ ॥ ೩೭ ॥

ನ ಮಾತಾ ನ ಪಿತಾ ತಸ್ಯ ನ ಭಾರ್ಯಾ ನ ಸುತಾದಯಃ ।
ನಾತ್ಮೀಯೋ ನ ಪರಶ್ಚಾಪಿ ನ ದೇಹೋ ಜನ್ಮ ಏವ ಚ ॥ ೩೮ ॥

ನ ಚಾಸ್ಯ ಕರ್ಮ ವಾ ಲೋಕೇ ಸದಸನ್ಮಿಶ್ರಯೋನಿಷು ।
ಕ್ರೀಡಾರ್ಥಃ ಸೋಽಪಿ ಸಾಧೂನಾಂ ಪರಿತ್ರಾಣಾಯ ಕಲ್ಪತೇ ॥ ೩೯ ॥

ನಂದರಾಜಾ! ನಿನ್ನ ಮಕ್ಕಳಾದ ಬಲರಾಮ-ಶ್ರೀಕೃಷ್ಣರು ಸಾಮಾನ್ಯರಲ್ಲ, ಪುರಾಣ ಪುರುಷರು. ಅವರು ಈ ಅಖಂಡ ವಿಶ್ವಕ್ಕೆ ಉಪಾದಾನ ಕಾರಣರೂ, ನಿಮಿತ್ತಕಾರಣರೂ ಆಗಿರುತ್ತಾರೆ. ಭಗವಾನ್ ಶ್ರೀಕೃಷ್ಣನು ಪುರುಷನಾದರೆ ಬಲರಾಮನು ಪ್ರಧಾನ (ಪ್ರಕೃತಿ)ನಾಗಿದ್ದಾನೆ. ಇವರಿಬ್ಬರೇ ಸಮಸ್ತ ಪ್ರಾಣಿಗಳಲ್ಲಿ ಪ್ರವೇಶಿಸಿ ಅವರಿಗೆ ಜೀವನದಾನವನ್ನು ಕೊಟ್ಟು ಅವರಲ್ಲಿರುವ ಅತ್ಯಂತ ವಿಲಕ್ಷಣವಾದ ಜ್ಞಾನಸ್ವರೂಪ ಜೀವನನ್ನು ನಿಯಂತ್ರಿಸುತ್ತಾರೆ.॥ ೩೧ ॥ ಮರಣಕಾಲದಲ್ಲಿ ತನ್ನ ಶುದ್ಧ ಮನಸ್ಸನ್ನು ಒಂದು ಕ್ಷಣವಾದರೂ ಭಗವಂತನಲ್ಲಿ ತೊಡಗಿಸುವ ಜೀವನು ಸಮಸ್ತ ಕರ್ಮವಾಸನೆಗಳನ್ನು ಕಳೆದುಕೊಂಡು ಸೂರ್ಯನಂತೆ ತೇಜಸ್ವಿಯಾಗಿ, ಬ್ರಹ್ಮಮಯನೂ ಆಗಿ ಪರಮಗತಿಯನ್ನು ಹೊಂದುತ್ತಾನೆ. ॥ ೩೨ ॥ ಭಗವಾನ್ ಶ್ರೀಕೃಷ್ಣನು ಎಲ್ಲರ ಆತ್ಮನೂ, ಪರಮ ಕಾರಣನೂ ಆಗಿದ್ದಾನೆ. ಭಕ್ತರ ಅಭಿಲಾಷೆಗಳನ್ನು ಪೂರ್ಣಗೊಳಿಸಲಿಕ್ಕಾಗಿಯೂ, ಭೂಭಾರವನ್ನು ಇಳಿಸುವುದಕ್ಕಾಗಿಯೂ ಮನುಷ್ಯ ಶರೀರದಿಂದ ಅವತರಿಸಿರುವನು. ಮಹಾತ್ಮರಾದ ದಂಪತಿಗಳೇ! ಆ ಪರಮಾತ್ಮನಲ್ಲಿ ನೀವು ನಿರತಿಶಯವಾದ ಪುತ್ರವಾತ್ಸಲ್ಯವನ್ನು ಹೊಂದಿರುವಿರಿ. ಕೃತ-ಕೃತ್ಯರಾದ ನಿಮ್ಮಿಬ್ಬರಿಗೆ ಇದಲ್ಲದೆ ಬೇರೆಯಾದ ಶುಭಕರ್ಮವು ಯಾವುದು ಬಾಕಿ ಉಳಿದಿರುವುದು? ॥ ೩೩ ॥ ಭಕ್ತವತ್ಸಲನಾದ ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನು ಕೆಲವೇ ದಿವಸಗಳಲ್ಲಿ ವ್ರಜಕ್ಕೆ ಬಂದು, ಮಾತಾ-ಪಿತೃಗಳಾದ ನಿಮ್ಮಿಬ್ಬರನ್ನು ಆನಂದಗೊಳಿಸುವನು. ॥ ೩೪ ॥ ಸಮಸ್ತ ಯದುವಂಶೀಯರ ದ್ರೋಹಿಯಾದ ಕಂಸನನ್ನು ರಂಗಸ್ಥಳದಲ್ಲಿ ಕೊಂದು ನಿಮ್ಮ ಬಳಿಗೆ ಬಂದು - 'ನಾನು ವ್ರಜಕ್ಕೆ ಬರುವೆನು' ಎಂದು ಹೇಳಿದುದನ್ನು ಶ್ರೀಕೃಷ್ಣನು ಸತ್ಯವಾಗಿಸುವನು. ॥ ೩೫ ॥ ಮಹಾಭಾಗ್ಯಶಾಲಿಗಳಾದ ನಂದ ಯಶೋದೆಯರೇ! ದುಃಖಿಸಬೇಡಿರಿ. ಕಟ್ಟಿಗೆಯೊಳಗೆ ಬೆಂಕಿಯಿರುವಂತೆ ಸಮಸ್ತ ಪ್ರಾಣಿಗಳ ಹೃದಯದಲ್ಲಿಯೂ ಇರುವ ಜಗದಾನಂದಕರನಾದ ಶ್ರೀಕೃಷ್ಣನನ್ನು ನೀವು ನಿಮ್ಮ ಸಮೀಪದಲ್ಲಿಯೇ ಕಾಣುವಿರಿ. ॥ ೩೬ ॥ ಅಹಂಕಾರಾದಿ ಮಾಯಾಗುಣಗಳಿಲ್ಲದ ಅವನಿಗೆ ಈ ಲೋಕದಲ್ಲಿ ಪ್ರಿಯನಾದವನೂ, ಅಪ್ರಿಯನಾದವನೂ ಯಾರೂ ಇಲ್ಲ. ಸರ್ವರಲ್ಲಿ ಸಮದೃಷ್ಟಿಯುಳ್ಳ ಅವನಿಗೆ (ಅವನ ದೃಷ್ಟಿಯಲ್ಲಿ) ಉತ್ತಮನೆಂಬುವವನೂ ಇಲ್ಲ; ಅಧಮನೆಂಬುವವನೂ ಇಲ್ಲ; ಅಸಮಾನನೆಂಬುವವನೂ ಇಲ್ಲ. ॥ ೩೭ ॥ ಪರಮ ಪುರುಷನಾದ ಶ್ರೀಕೃಷ್ಣನಿಗೆ ತಂದೆ-ತಾಯಿಯಾಗಲೀ, ಪತ್ನೀ-ಪುತ್ರರಾಗಲೀ, ಆತ್ಮೀಯ-ಪರಕೀಯನಾಗಲೀ ಯಾರೂ ಇಲ್ಲ. ಅಷ್ಟೇ ಅಲ್ಲ ಅವನಿಗೆ ದೇಹವೂ ಇಲ್ಲ, ಜನ್ಮವೂ ಇಲ್ಲ. ॥ ೩೮ ॥ ಅವನಿಗೆ ಈ ಲೋಕದಲ್ಲಿ ಮಾಡಬೇಕಾದ ಯಾವುದೇ ಕರ್ಮವು ಇಲ್ಲ. ಹೀಗಿದ್ದರೂ ಅವನು ಸಾಧುಗಳ ರಕ್ಷಣೆಗಾಗಿಯೂ, ಲೀಲಾವಿನೋದಗಳನ್ನು ಭಕ್ತರಿಗೆ ತೋರಿಸುವ ಸಲುವಾಗಿಯೂ, ದೇವತೆಯೇ ಮೊದಲಾದ ಸಾತ್ತ್ವಿಕ, ಮತ್ಸ್ಯಾದಿ ತಾಮಸ, ಮನುಷ್ಯರೇ ಆದಿ ಮಿಶ್ರಯೋನಿಗಳಲ್ಲಿ ಅವತರಿಸುತ್ತಾನೆ. ॥ ೩೯ ॥

ಸತ್ತ್ವಂ ರಜಸ್ತಮ ಇತಿ ಭಜತೇ ನಿರ್ಗುಣೋ ಗುಣಾನ್ ।
ಕ್ರೀಡನ್ನತೀತೋಽತ್ರ ಗುಣೈಃ ಸೃಜತ್ಯವತಿ ಹಂತ್ಯಜಃ ॥ ೪೦ ॥

ಯಥಾ ಭ್ರಮರಿಕಾದೃಷ್ಟ್ಯಾ ಭ್ರಾಮ್ಯತೀವ ಮಹೀಯತೇ ।
ಚಿತ್ತೇ ಕರ್ತರಿ ತತ್ರಾತ್ಮಾ ಕರ್ತೇವಾಹಂಧಿಯಾ ಸ್ಮೃತಃ ॥ ೪೧ ॥

ಯುವಯೋರೇವ ನೈವಾಯಮಾತ್ಮಜೋ ಭಗವಾನ್ ಹರಿಃ ।
ಸರ್ವೇಷಾಮಾತ್ಮಜೋ ಹ್ಯಾತ್ಮಾ ಪಿತಾ ಮಾತಾ ಸ ಈಶ್ವರಃ ॥ ೪೨ ॥

ದೃಷ್ಟಂ ಶ್ರುತಂ ಭೂತಭವದ್ಭವಿಷ್ಯತ್
ಸ್ಥಾಸ್ನುಶ್ಚರಿಷ್ಣುರ್ಮಹದಲ್ಪಕಂ ಚ ।
ವಿನಾಚ್ಯುತಾದ್ವಸ್ತು ತರಾಂ ನ ವಾಚ್ಯಂ
ಸ ಏವ ಸರ್ವಂ ಪರಮಾರ್ಥಭೂತಃ ॥ ೪೩ ॥

ಏವಂ ನಿಶಾ ಸಾ ಬ್ರುವತೋರ್ವ್ಯತೀತಾ
ನಂದಸ್ಯ ಕೃಷ್ಣಾನುಚರಸ್ಯ ರಾಜನ್ ।
ಗೋಪ್ಯಃ ಸಮುತ್ಥಾಯ ನಿರೂಪ್ಯ ದೀಪಾನ್
ವಾಸ್ತೂನ್ ಸಮಭ್ಯರ್ಚ್ಯ ದಧೀನ್ಯಮಂಥನ್ ॥ ೪೪ ॥

ತಾ ದೀಪದೀಪ್ತೈರ್ಮಣಿಭಿರ್ವಿರೇಜೂ
ರಜ್ಜೂರ್ವಿಕರ್ಷದ್ಭುಜಕಂಕಣಸ್ರಜಃ ।
ಚಲನ್ನಿತಂಬಸ್ತನಹಾರಕುಂಡಲ-
ತ್ವಿಷತ್ಕಪೋಲಾರುಣಕುಂಕುಮಾನನಾಃ ॥ ೪೫ ॥

ಉದ್ಗಾಯತೀನಾಮರವಿಂದಲೋಚನಂ
ವ್ರಜಾಂಗನಾನಾಂ ದಿವಮಸ್ಪೃಶದ್ಧ್ವನಿಃ ।
ದಧ್ನಶ್ಚ ನಿರ್ಮಂಥನಶಬ್ದಮಿಶ್ರಿತೋ
ನಿರಸ್ಯತೇ ಯೇನ ದಿಶಾಮಮಂಗಲಮ್ ॥ ೪೬ ॥

ಭಗವತ್ಯುದಿತೇ ಸೂರ್ಯೇ ನಂದದ್ವಾರಿ ವ್ರಜೌಕಸಃ ।
ದೃಷ್ಟ್ವಾ ರಥಂ ಶಾತಕೌಂಭಂ ಕಸ್ಯಾಯಮಿತಿ ಚಾಬ್ರುವನ್ ॥ ೪೭ ॥

ನಂದರಾಜಾ! ಭಗವಂತನು ಅಪ್ರಾಕೃತನು. ಅವನಲ್ಲಿ ಸತ್ತ್ವ, ರಜ, ತಮಗಳೆಂಬ ಪ್ರಾಕೃತ ಒಂದು ಗುಣವೂ ಇಲ್ಲ. ಹೀಗೆ ಪ್ರಾಕೃತಗುಣರಹಿತನಾಗಿದ್ದರೂ ಕೂಡ ಲೀಲೆಗಾಗಿ ಕ್ರೀಡೆಯ ನ್ನಾಡುತ್ತಾ, ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳನ್ನು ಸ್ವೀಕರಿಸಿ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಾ ಇರುತ್ತಾನೆ. ॥ ೪೦ ॥ ಹುಡುಗರು ಅಪ್ಪಾಲೆ-ತಿಪ್ಪಾಲೆಯಾಡುವಾಗ ಅವರ ಸುತ್ತಲೂ ಇರುವ ಪದಾರ್ಥಗಳು ತಿರುಗುತ್ತಿರುವಂತೆ ಕಂಡು ಬರುತ್ತದೆ. ಆದರೆ ಆ ವಸ್ತುಗಳು ತಿರುಗುತ್ತಿರುವುದಿಲ್ಲ. ಅಂತೆಯೇ ಚಿತ್ತವೇ ಎಲ್ಲವನ್ನೂ ಮಾಡುತ್ತಿರುತ್ತದೆ. ಆದರೆ ಆ ಶುದ್ಧ ಚೈತನ್ಯದಲ್ಲಿ ಅಹಂಬುದ್ಧಿಯು ಉಂಟಾದ ಕಾರಣ ಭ್ರಮೆಯಿಂದ ಆತ್ಮನು ಕರ್ತೃವಿನಂತೆ ತಿಳಿದುಕೊಳ್ಳುತ್ತಾನೆ. ॥ ೪೧ ॥ ನಂದ! ಭಗವಾನ್ ಶ್ರೀಕೃಷ್ಣನು ಕೇವಲ ನಿಮ್ಮಿಬ್ಬರಿಗೆ ಮಾತ್ರವೇ ಪುತ್ರನಾಗಿಲ್ಲ. ಸಮಸ್ತ ಪ್ರಾಣಿಗಳಿಗೂ ಆತ್ಮಸ್ವರೂಪನೂ, ಪುತ್ರನೂ, ತಂದೆ-ತಾಯಿ ಹೀಗೆ ಎಲ್ಲವೂ ಆಗಿದ್ದಾನೆ. ॥ ೪೨ ॥ ನಂದಗೋಪನೇ! ಲೋಕದಲ್ಲಿ ನೋಡುವ, ಕೇಳುವ ವಸ್ತುಗಳಲ್ಲಿ ಭೂತ, ಭವಿಷ್ಯ, ವರ್ತಮಾನಕ್ಕೆ ಸಂಬಂಧಿಸಿರಲಿ, ಸ್ಥಾವರ-ಜಂಗಮವಾಗಿರಲಿ, ಅಲ್ಪವಾಗಿರಲೀ, ಮಹತ್ತಾಗಿರಲೀ, ಅದೆಲ್ಲ ವಸ್ತುಗಳು ಭಗವಾನ್ ಶ್ರೀಕೃಷ್ಣನಿಂದ ಬೇರೆಯಾಗಿವೆ ಎಂದು ಹೇಳಬಾರದು. ನಂದರಾಜ! ಎಲ್ಲ ವಸ್ತು ಗಳಲ್ಲಿಯೂ ಅಚ್ಯುತನಿದ್ದಾನೆ. ಪರಮಾರ್ಥದಲ್ಲಿ ಸರ್ವಸ್ವವೂ ಅವನೇ ಆಗಿದ್ದಾನೆ. ॥ ೪೩ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಸಖನಾದ ಉದ್ಧವನೂ ನಂದಗೋಪನೂ ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಾ ರಾತ್ರಿಯೇ ಕಳೆದುಹೋಯಿತು. ರಾತ್ರಿಯು ಕಳೆದು ಹೋಗುತ್ತಿರುವಾಗಲೇ ಗೋಪಿಯರು ಎದ್ದು ದೀಪವನ್ನು ಹಚ್ಚಿ ವಾಸ್ತುಪುರುಷನನ್ನು ಪೂಜಿಸಿ, ಮನೆಯನ್ನು ಗುಡಿಸಿ, ಸಾರಿಸಿ ಶುದ್ಧಗೊಳಿಸಿ ಮತ್ತೆ ಮೊಸರು ಕಡೆಯಲು ಪ್ರಾರಂಭಿಸಿದರು. ॥ ೪೪ ॥ ಗೋಪಿಕೆಯರು ಧರಿಸಿದ್ದ ಬಳೆಗಳು ಮೊಸರು ಕಡೆಯುವಾಗ ಮೇಲೆ-ಕೆಳಗೆ ಸರಿಯುತ್ತಾ ಸುಂದರವಾಗಿ ಕಾಣುತ್ತಿದ್ದವು. ಅವರ ನಿತಂಬ, ಸ್ತನಗಳು ಮತ್ತು ಕೊರಳಲ್ಲಿನ ಹಾರಗಳು ಕಂಪಿಸುತ್ತಿದ್ದವು. ಕಿವಿಗಳ ಕುಂಡಲಗಳು ಓಲಾಡುತ್ತಾ ಕುಂಕುಮಲೇಪಿತ ಕಪೋಲಗಳ ನಸುಗೆಂಪು ಹೆಚ್ಚಿಸಿದ್ದವು. ಅವರು ಧರಿಸಿದ್ದ ಆಭೂಷಣಗಳ ರತ್ನಗಳು ದೀಪದ ಬೆಳಕಿನಲ್ಲಿ ಹೊಳೆಯುತ್ತಿದ್ದವು. ಹೀಗೆ ಅತ್ಯಂತ ಶೋಭಿತರಾದ ಗೋಪಿಯರು ಮೊಸರನ್ನು ಕಡೆಯು ತ್ತಿದ್ದರು. ॥ ೪೫ ॥ ಆ ಸಮಯದಲ್ಲಿ ಗೋಪಿಯರು ಕಮಲನಯನ ಶ್ರೀಕೃಷ್ಣನ ಮಂಗಲಮಯ ಚರಿತ್ರೆಗಳನ್ನು ಹಾಡುತ್ತಿದ್ದರು. ಅವರ ಆ ಸಂಗೀತವು ಕಡೆಯುವ ಘರ್-ಘರ್ ಶಬ್ದದೊಡನೆ ಬೆರೆತು ಇನ್ನೂ ಅದ್ಭುತವಾಗಿ ಸ್ವರ್ಗಲೋಕದವರೆಗೆ ಮುಟ್ಟಿತು. ಅವರ ಗಾಯನವು ದಶದಿಕ್ಕುಗಳಲ್ಲಿಯೂ ಹರಡಿಕೊಂಡು ಎಲ್ಲ ಅಮಂಗಳಗಳೂ ತೊಡೆದುಹಾಕುತ್ತಿತ್ತು. ॥ ೪೬ ॥

ಭಗವಾನ್ ಸೂರ್ಯನಾರಾಯಣನು ಉದಯಾಚಲಕ್ಕೆ ಬಂದಾಗ ಮನೆಯಿಂದ ಹೊರಗೆ ಬಂದ ವ್ರಜಾಂಗನೆಯರು ನಂದ ಗೋಪನ ಮನೆಯ ಬಾಗಿಲಲ್ಲಿ ನಿಂತಿದ್ದ ಒಂದು ಸ್ವರ್ಣರಥವನ್ನು ನೋಡಿದರು. 'ಇದು ಯಾರ ರಥವಾಗಿರಬಹುದು?' ಎಂದು ತಮ್ಮ-ತಮ್ಮಲ್ಲಿಯೇ ಪ್ರಶ್ನಿಸತೊಡಗಿದರು. ॥ ೪೭ ॥

ಅಕ್ರೂರ ಆಗತಃ ಕಿಂ ವಾ ಯಃ ಕಂಸಸ್ಯಾರ್ಥಸಾಧಕಃ ।
ಯೇನ ನೀತೋ ಮಧುಪುರೀಂ ಕೃಷ್ಣಃ ಕಮಲಲೋಚನಃ
॥ ೪೮ ॥

ಕಿಂ ಸಾಧಯಿಷ್ಯತ್ಯಸ್ಮಾಭಿರ್ಭರ್ತುಃ ಪ್ರೇತಸ್ಯ ನಿಷ್ಕೃತಿಮ್ ।
ಇತಿ ಸ್ತ್ರೀಣಾಂ ವದಂತೀನಾಮುದ್ಧವೋಽಗಾತ್ ಕೃತಾಹ್ನಿಕಃ
॥ ೪೯ ॥

ಒಬ್ಬಳು ಕೇಳಿದಳು – ಕಮಲಲೋಚನನಾದ ಶ್ಯಾಮಸುಂದರನನ್ನು ಮಧುರೆಗೆ ಕರೆದುಕೊಂಡು ಹೋಗಿದ್ದ ಕಂಸನ ಕಾರ್ಯಸಾಧಕನಾದ ಅಕ್ರೂರನೇನಾದರೂ ಪುನಃ ಬಂದಿರುವನೇ! ॥೪೮॥ ಇನ್ನೊಬ್ಬಳು ಕೇಳಿದಳು – ತನ್ನ ಒಡೆಯನಾದ ಕಂಸನ ಪ್ರೇತಕ್ಕೆ ನಮ್ಮಿಂದ ಪಿಂಡಹಾಕಿಸಲೇನಾದರೂ ಬಂದಿರುವನೇ? ಇದಲ್ಲದೆ ಬೇರೆ ಪ್ರಯೋಜನ ಏನಿದ್ದೀತು? ಹೀಗೆ ವ್ರಜವಾಸಿಯರಾದ ಸ್ತ್ರೀಯರು ಮಾತನಾಡಿಕೊಂಡಿರುವಾಗ ಉದ್ಧವನು ತನ್ನ ನಿತ್ಯಕರ್ಮಗಳನ್ನು ಮುಗಿಸಿ ಅಲ್ಲಿಗೆ ಆಗಮಿಸಿದನು. ॥ ೪೯ ॥

ನಲವತ್ತಾರನೆಯ ಅಧ್ಯಾಯವು ಮುಗಿಯಿತು. ॥ ೪೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ನಂದಶೋಕಾಪನಯನಂ ನಾಮ ಷಟ್ ಚತ್ವಾರಿಂಶೋಽಧ್ಯಾಯಃ ॥ ೪೬ ॥

# ನಲವತ್ತೇಳನೆಯ ಅಧ್ಯಾಯ

## ಉದ್ಧವ-ಗೋಪಿಯರ ಮಾತುಕತೆ-ಭ್ರಮರಗೀತೆ

ಶ್ರೀಶುಕ ಉವಾಚ

ತಂ ವೀಕ್ಷ್ಯ ಕೃಷ್ಣಾನುಚರಂ ವ್ರಜಸ್ತ್ರಿಯಃ
ಪ್ರಲಂಬಬಾಹುಂ ನವಕಂಜಲೋಚನಮ್ ।
ಪೀತಾಂಬರಂ ಪುಷ್ಕರಮಾಲಿನಂ ಲಸ-
ನ್ಮುಖಾರವಿಂದಂ ಮಣಿಮೃಷ್ಟಕುಂಡಲಮ್ ॥ ೧ ॥

ಶುಚಿಸ್ಮಿತಾಃ ಕೋಽಯಮಪೀಚ್ಯದರ್ಶನಃ
ಕುತಶ್ಚ ಕಸ್ಯಾಚ್ಯುತವೇಷಭೂಷಣಃ ।
ಇತಿ ಸ್ಮ ಸರ್ವಾಃ ಪರಿವವ್ರುರುತ್ಸುಕಾ-
ಸ್ತಮುತ್ತಮಶ್ಲೋಕಪದಾಂಬುಜಾಶ್ರಯಮ್ ॥ ೨ ॥

ತಂ ಪ್ರಶ್ರಯೇಣಾವನತಾಃ ಸುಸತ್ಕೃತಂ
ಸವ್ರೀಡಹಾಸೇಕ್ಷಣಸೂನೃತಾದಿಭಿಃ ।
ರಹಸ್ಯಪೃಚ್ಛನ್ನುಪವಿಷ್ಟಮಾಸನೇ
ವಿಜ್ಞಾಯ ಸಂದೇಶಹರಂ ರಮಾಪತೇಃ ॥ ೩ ॥

ಜಾನೀಮಸ್ತ್ವಾಂ ಯದುಪತೇಃ ಪಾರ್ಷದಂ ಸಮುಪಾಗತಮ್ ।
ಭರ್ತ್ರೇಹ ಪ್ರೇಷಿತಃ ಪಿತ್ರೋರ್ಭವಾನ್ ಪ್ರಿಯಚಿಕೀರ್ಷಯಾ
॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಶ್ರೀಕೃಷ್ಣಾನುಚರನಾದ ಉದ್ಧವನ ಆಕೃತಿ, ವೇಷ-ಭೂಷಣಗಳಿಂದ ಶ್ರೀಕೃಷ್ಣನಂತೆಯೇ ಇರುವುದನ್ನು ಗೋಪಿಯರು ನೋಡಿದರು. ಅವನಿಗೆ ದೀರ್ಘಬಾಹುಗಳಿದ್ದುವು. ನೂತನ ಕಮಲದ ಎಸಳಿನಂತೆ ಕೋಮಲ ನೇತ್ರಗಳಿದ್ದುವು. ಶರೀರದಲ್ಲಿ ಪೀತಾಂಬರವನ್ನು ಧರಿಸಿದ್ದನು. ಕೊರಳಲ್ಲಿ ಕಮಲಪುಷ್ಪಗಳ ಮಾಲೆಯಿತ್ತು. ಕಿವಿಗಳಲ್ಲಿ ಮಣಿಮಯ ಕುಂಡಲಗಳಿದ್ದು ಮುಖಾರವಿಂದವು ಪ್ರಫುಲ್ಲಿತವಾಗಿತ್ತು. ॥ ೧ ॥ ಮುಗುಳ್ನಗೆಯುಳ್ಳ ಗೋಪಿಯರು ಪರಸ್ಪರ ಮಾತನಾಡಿಕೊಂಡರು. ಈ ಮಹಾನುಭಾವನು ನೋಡಲು ಸುಂದರವಾಗಿದ್ದಾನೆ. ಆದರೆ ಇವನಾರು? ಎಲ್ಲಿಂದ ಬಂದಿರುವನು? ಯಾರ ದೂತನಾಗಿರುವನು? ಇವನು ಶ್ರೀಕೃಷ್ಣನಂತೆಯೇ ವೇಷ-ಭೂಷಣಗಳನ್ನು ಏಕೆ ಧರಿಸಿರುವನು? ಗೋಪಿಯರೆಲ್ಲರೂ ಅವನ ಪರಿಚಯವನ್ನು ಪಡೆಯಲು ಅತ್ಯಂತ ಉತ್ಸುಕರಾಗಿದ್ದರು. ಉತ್ತಮ ಶ್ಲೋಕನಾದ ಶ್ರೀಕೃಷ್ಣನ ಚರಣಕಮಲಗಳನ್ನೇ ಪರಮಾಶ್ರಯವನ್ನಾಗಿ ಹೊಂದಿದ್ದ ಉದ್ಧವನನ್ನು ಸುತ್ತುವರಿದು ನಿಂತುಕೊಂಡರು. ॥ ೨ ॥ ಇವನು ರಮಾರಮಣ ಭಗವಾನ್ ಶ್ರೀಕೃಷ್ಣನ ಸಂದೇಶವನ್ನೆತ್ತಿಕೊಂಡು ಬಂದಿರುವನೆಂದು ತಿಳಿದಾಗ, ಅವರು ವಿನಯದಿಂದ ಬಾಗಿ ಲಜ್ಜೆಯಿಂದ ಕೂಡಿದ ಮಂದಹಾಸದಿಂದ, ಕುಡಿನೋಟದಿಂದ ಹಾಗೂ ಸುಮಧುರವಾದ ಮಾತುಗಳಿಂದ ಉದ್ಧವನನ್ನು ಸತ್ಕರಿಸಿ, ಸುಖಾಸನದಲ್ಲಿ ಕುಳ್ಳಿರಿಸಿ ಏಕಾಂತದಲ್ಲಿ ಅವನ ಬಳಿ ಕೇಳಿದರು. ॥ ೩ ॥ ಉದ್ಧವನೇ! ನೀನು ಯದುನಾಥನ ಪಾರ್ಷದನೆಂದು ನಾವು ತಿಳಿಯುತ್ತೇವೆ. ಅವನ ಸಂದೇಶವನ್ನೇ ಹೊತ್ತು ನೀನು ಇಲ್ಲಿಗೆ ಆಗಮಿಸಿರುವೆ. ನಿನ್ನ ಸ್ವಾಮಿಯಾದ ಶ್ಯಾಮಸುಂದರನು ತನ್ನ ತಂದೆ-ತಾಯಿಯರನ್ನು ಸಂತೋಷಪಡಿಸಲೆಂದು ನಿಮ್ಮನ್ನು ಕಳಿಸಿರುವನಲ್ಲ? ॥ ೪ ॥

ಅನ್ಯಥಾ ಗೋವ್ರಜೇ ತಸ್ಯ ಸ್ಮರಣೀಯಂ ನ ಚಕ್ಷ್ಮಹೇ।
ಸ್ನೇಹಾನುಬಂಧೋ ಬಂಧೂನಾಂ ಮುನೇರಪಿ ಸುದುಸ್ತ್ಯಜಃ
॥ ೫ ॥

ಅನ್ಯೇಷ್ವರ್ಥಕೃತಾ ಮೈತ್ರೀ ಯಾವದರ್ಥವಿಡಂಬನಮ್।
ಪುಂಭಿಃ ಸ್ತ್ರೀಷು ಕೃತಾ ಯದ್ವತ್ಸುಮನಸ್ಸ್ವಿವ ಷಟ್ಪದೈಃ
॥ ೬ ॥

ನಿಸ್ಸ್ವಂ ತ್ಯಜಂತಿ ಗಣಿಕಾ ಅಕಲ್ಪಂ ನೃಪತಿಂ ಪ್ರಜಾಃ।
ಅಧೀತವಿದ್ಯಾ ಆಚಾರ್ಯಮೃತ್ವಿಜೋ ದತ್ತದಕ್ಷಿಣಮ್
॥ ೭ ॥

ಖಗಾ ವೀತಫಲಂ ವೃಕ್ಷಂ ಭುಕ್ತ್ವಾ ಚಾತಿಥಯೋ ಗೃಹಮ್।
ದಗ್ಧಂ ಮೃಗಾಸ್ತಥಾರಣ್ಯಂ ಜಾರೋ ಭುಕ್ತ್ವಾ ರತಾಂ ಸ್ತ್ರಿಯಮ್
॥ ೮ ॥

ಇತಿ ಗೋಪ್ಯೋ ಹಿ ಗೋವಿಂದೇ ಗತವಾಕ್ಕಾಯಮಾನಸಾಃ।
ಕೃಷ್ಣದೂತೇ ವ್ರಜಂ ಯಾತೇ ಉದ್ಧವೇ ತ್ಯಕ್ತಲೌಕಿಕಾಃ
॥ ೯ ॥

ಗಾಯಂತ್ಯಃ ಪ್ರಿಯಕರ್ಮಾಣಿ ರುದತ್ಯಶ್ಚ ಗತಹ್ರಿಯಃ।
ತಸ್ಯ ಸಂಸ್ಮೃತ್ಯ ಸಂಸ್ಮೃತ್ಯ ಯಾನಿ ಕೈಶೋರಬಾಲ್ಯಯೋಃ
॥ ೧೦ ॥

ಕಾಚಿನ್ಮಧುಕರಂ ದೃಷ್ಟ್ವಾ ಧ್ಯಾಯಂತೀ ಕೃಷ್ಣಸಂಗಮಮ್।
ಪ್ರಿಯಪ್ರಸ್ಥಾಪಿತಂ ದೂತಂ ಕಲ್ಪಯಿತ್ವೇದಮಬ್ರವೀತ್
॥ ೧೧ ॥

*ಗೋಪ್ಯುವಾಚ*

ಮಧುಪ ಕಿತವಬಂಧೋ ಮಾ ಸ್ಪೃಶಾಂಘ್ರಿಂ ಸಪತ್ನ್ಯಾಃ
ಕುಚವಿಲುಲಿತಮಾಲಾಕುಂಕುಮಶ್ಮಶ್ರುಭಿರ್ನಃ।
ವಹತು ಮಧುಪತಿಸ್ತನ್ಮಾನಿನೀನಾಂ ಪ್ರಸಾದಂ
ಯದುಸದಸಿ ವಿಡಂಬ್ಯಂ ಯಸ್ಯ ದೂತಸ್ತ್ವಮೀದೃಕ್ ॥ ೧೨ ॥

ಅದರ ಹೊರತಾಗಿ ಈ ಗೊಲ್ಲರಹಳ್ಳಿಯಲ್ಲಿ ಅವನು ಸ್ಮರಿಸಬೇಕಾದ ಬೇರೆಯಾವ ವಸ್ತುವೂ ಕಾಣುವುದಿಲ್ಲ. ತಂದೆ-ತಾಯಿಯರ, ನೆಂಟರಿಷ್ಟರ ಸ್ನೇಹಸಂಬಂಧವನ್ನು ಕಡಿದು ಹಾಕುವುದು ಮಹಾ-ಮಹಾಮುನಿಗಳಿಗೂ ಬಹಳ ಕಷ್ಟವೇ ಸರಿ. ॥ ೫ ॥ ಇತರರೊಡನೆ ಮಾಡುವ ಪ್ರೇಮ-ಸಂಬಂಧದ ನಾಟಕವು ಯಾವುದಾದರೂ ಸ್ವಾರ್ಥಕ್ಕಾಗಿಯೇ ಇರುತ್ತದೆ. ಹೂವುಗಳೊಡನೆ ಭ್ರಮರಗಳ ಮತ್ತು ಸ್ತ್ರೀಯರೊಡನೆ ಪುರುಷರ ಪ್ರೇಮ ಸಂಬಂಧವು ಸ್ವಾರ್ಥದಿಂದಲೇ ಇರುತ್ತದೆ. ॥ ೬ ॥ ತನ್ನ ಬಳಿಗೆ ಬರುವ ವಿಟಪುರುಷರಲ್ಲಿ ಹಣವಿಲ್ಲವೆಂದು ತಿಳಿದಾಗ ವೇಶ್ಯೆಯು ಅವರನ್ನು ತ್ಯಜಿಸಿಬಿಡುತ್ತಾಳೆ. ರಾಜನು ತಮ್ಮನ್ನು ರಕ್ಷಿಸಲಾರನೆಂದು ತಿಳಿದಾಗ ಪ್ರಜೆಗಳು ಅವನನ್ನು ತ್ಯಜಿಸುತ್ತಾರೆ. ಅಧ್ಯಯನ ಮುಗಿದಾದ ಬಳಿಕ ಎಷ್ಟು ಜನ ಶಿಷ್ಯರು ಗುರುವಿನ ಸೇವೆ ಮಾಡುತ್ತಾರೆ? ಯಜ್ಞದ ದಕ್ಷಿಣೆ ದೊರೆತಾಕ್ಷಣ ಋತ್ವಿಜರು ಹೊರಟು ಹೋಗುತ್ತಾರೆ. ॥ ೭ ॥ ವೃಕ್ಷದಲ್ಲಿ ಫಲಗಳು ತೀರಿ ಹೋದಾಗ ಪಕ್ಷಿಗಳು ಹೇಳದೆ ಕೇಳದೆ ಹಾರಿಹೋಗುತ್ತವೆ. ಊಟ ಮಾಡಿದ ಬಳಿಕ ಅತಿಥಿಯು ಗೃಹಸ್ಥನ ಕಡೆಗೆ ನೋಡುತ್ತಾನೆಯೇ? ಕಾಡಿಗೆ ಬೆಂಕಿಬಿದ್ದಾಗ ಮೃಗಗಳು ಓಡಿ ಹೋಗುತ್ತವೆ. ನವಯುವತಿಯಲ್ಲಿ ಎಷ್ಟೇ ಅನುರಾಗವನ್ನು ಹೊಂದಿದ್ದರೂ ಜಾರಪುರುಷರು ಅವಳನ್ನು ಉಪಭೋಗಿಸಿದ ಬಳಿಕ ತಿರುಗಿಯೂ ಅವಳತ್ತ ನೋಡುವುದಿಲ್ಲ. ॥ ೮ ॥ ಪರೀಕ್ಷಿತನೇ! ಹೀಗೆ ಗೋಪಿಯರು ಕೃಷ್ಣದೂತನಾದ ಉದ್ಧವನು ವ್ರಜಕ್ಕೆ ಬಂದಾಗ, ಕೃಷ್ಣನು ತಮ್ಮನ್ನು ಸ್ಮರಿಸಲಿಲ್ಲವೆಂದೇ ಭಾವಿಸಿ ಹೀಗೆಲ್ಲ ಉದ್ಧವನಲ್ಲಿ ದೂರಿದರು. ಆ ಸಮಯದಲ್ಲಿ ಅವರ ಮಾತು, ಮನಸ್ಸು, ಶರೀರಗಳು ಗೋವಿಂದನಲ್ಲೇ ಲೀನವಾಗಿಬಿಟ್ಟಿದ್ದವು. ಬಾಲಮುಕುಂದನ ಬಾಲ್ಯ ಕಿಶೋರಾವಸ್ಥೆಗಳನ್ನು ಅಡಿಗಡಿಗೆ ಸ್ಮರಿಸುತ್ತಾ, ಅವನ ಅತಿಪ್ರಿಯವಾದ ಲೀಲಾಪ್ರಸಂಗಗಳನ್ನು ಹಾಡುತ್ತಾ, ಯಾವ ವಿಧವಾದ ನಾಚಿಕೆಯೂ ಇಲ್ಲದೆ ಅವರೆಲ್ಲರೂ ಉದ್ಧವನ ಮುಂದೆ ಗಳ-ಗಳನೆ ಅತ್ತುಬಿಟ್ಟರು. ॥ ೯-೧೦ ॥ ಆ ಸಮಯದಲ್ಲಿ ಶ್ರೀಕೃಷ್ಣನೊಡನೆ ಸೇರುವಿಕೆಯನ್ನೇ ಬಹಳವಾಗಿ ಚಿಂತಿಸುತ್ತಿದ್ದ ಗೋಪಿಯೊಬ್ಬಳು ತನ್ನ ಬಳಿಗೆ ಹಾರಿಕೊಂಡು ಬಂದ ದುಂಬಿಯನ್ನೇ ಕೃಷ್ಣದೂತನೆಂದು ಭಾವಿಸಿಕೊಂಡು ಆ ದುಂಬಿಯೊಡನೆ ಹೇಳತೊಡಗಿದಳು.॥ ೧೧ ॥

**ಗೋಪಿಯು ಹೇಳಿದಳು** - ಎಲೈ ಮಧುಪನೇ! ನೀನು ಮಹಾ ಕಪಟಿಯಾದ ಮುಕುಂದನ ಸ್ನೇಹಿತನಾದ್ದರಿಂದ ನೀನೂ ಕಪಟಿಯೇ ಆಗಿರುವೆ. ನೀನು ನಮ್ಮ ಕಾಲುಗಳನ್ನು ಮುಟ್ಟಬೇಡ. ನಿನ್ನ ತೋರಿಕೆಯ ವಿನಯವನ್ನು ತೋರಬೇಡ. ನಮ್ಮ ಸವತಿಯರ ಕುಚಗಳ ಸ್ಪರ್ಶದಿಂದ ಕೆಂಪಾದ ನಮ್ಮ ಇನಿಯನ ವನಮಾಲೆಯಿಂದ ನಿನ್ನ ಮೀಸೆಗಳೂ ಕೆಂಪಾಗಿವೆ. ನೀನೂ ಕೂಡ ಯಾವುದೇ ಹೂವಿನೊಂದಿಗೆ ಪ್ರೇಮವಿರಿಸಿಕೊಳ್ಳುವುದಿಲ್ಲ, ಇಲ್ಲಿಂದ ಅಲ್ಲಿಗೆ ಹಾರಾಡುತ್ತಾ ಇರುವೆ. ನಿನ್ನ ಸ್ವಾಮಿಯಂತೆ ನೀನೂ ಆಗಿದ್ದಿಯೆ. ಯಾದವರ ಸಭೆಯಲ್ಲಿ ಪರಿಹಾಸ್ಯಕ್ಕೆ ಕಾರಣವಾಗುವ, ಮಥುರೆಯ ಮಾನಿನಿಯರ ಕುಂಕುಮಪ್ರಸಾದವನ್ನು ಅವನೇ ಇಟ್ಟುಕೊಳ್ಳಲಿ. ಅದು ನಮಗೆ ಬೇಡ. ನಿನ್ನ ಮೂಲಕವಾಗಿ ಆ ಪ್ರಸಾದವನ್ನು ನಮಗೆ ಕಳಿಸುವುದುಬೇಡ. ॥ ೧೨ ॥

ಸಕೃದಧರಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ
ಸುಮನಸ ಇವ ಸದ್ಯಸ್ತತ್ಯಜೇಽಸ್ಮಾನ್ ಭವಾದೃಕ್ ।
ಪರಿಚರತಿ ಕಥಂ ತತ್ಪಾದಪದ್ಮಂ ತು ಪದ್ಮಾ
ಹ್ಯಪಿ ಬತ ಹೃತಚೇತಾ ಉತ್ತಮಶ್ಲೋಕಜಲ್ಪೈಃ ॥ ೧೩ ॥

ಕಿಮಿಹ ಬಹು ಷಡಂಘ್ರೇ ಗಾಯಸಿ ತ್ವಂ ಯದೂನಾ-
ಮಧಿಪತಿಮಗೃಹಾಣಾಮಗ್ರತೋ ನಃ ಪುರಾಣಮ್ ।
ವಿಜಯಸಖಸಖೀನಾಂ ಗೀಯತಾಂ ತತ್ಪ್ರಸಂಗಃ
ಕ್ಷಪಿತಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ ॥ ೧೪ ॥

ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ
ಕಪಟರುಚಿರಹಾಸಭ್ರೂವಿಜೃಂಭಸ್ಯ ಯಾಃ ಸ್ಯುಃ ।
ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ
ಅಪಿ ಚ ಕೃಪಣಪಕ್ಷೇ ಹ್ಯುತ್ತಮಶ್ಲೋಕಶಬ್ದಃ ॥ ೧೫ ॥

ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈ-
ರನುನಯವಿದುಷಸ್ತೇಽಭ್ಯೇತ್ಯ ದೌತ್ಯೈರ್ಮುಕುಂದಾತ್ ।
ಸ್ವಕೃತ ಇಹ ವಿಸೃಷ್ಟಾ ಪತ್ಯಪತ್ಯನ್ಯಲೋಕಾ
ವ್ಯಸೃಜದಕೃತಚೇತಾಃ ಕಿಂ ನು ಸಂಧೇಯಮಸ್ಮಿನ್ ॥ ೧೬ ॥

ಭ್ರಮರವೇ! ನಿನ್ನಂತೆಯೇ ನಿನ್ನ ಆ ಪ್ರಭುವೂ ಶ್ಯಾಮಲ ವರ್ಣನು. ಪುಷ್ಪರಸವನ್ನು ಹೀರಿಕೊಂಡನಂತರ ನೀನು ಮತ್ತೊಂದು ಪುಷ್ಪಕ್ಕೆ ಹಾರಿ ಹೋಗುವಂತೆ ನಿನ್ನ ಸ್ವಾಮಿಯೂ ಮಾಡುತ್ತಾನೆ. ನಿನ್ನ ಆ ಸ್ವಾಮಿಯೂ ನಮಗೆ ಒಂದೇ ಒಂದು ಬಾರಿಗೆ, ನಿಜವಾಗಿ ಒಂದೇ ಒಂದು ಬಾರಿಗೆ ತನ್ನ ಮನಮೋಹಕವಾದ ಮತ್ತುಬರಿಸುವ ಅಧರಾಮೃತವನ್ನು ಕುಡಿಸಿ, ನಿನ್ನ ಹಾಗೆಯೇ ಹಳ್ಳಿಗರಾದ ನಮ್ಮನ್ನು ಪರಿತ್ಯಜಿಸಿ ಪಟ್ಟಣಕ್ಕೆ ಹೊರಟುಹೋದನು. ಇಂತಹವನ ಪಾದ ಕಮಲಗಳ ಸೇವೆಯನ್ನು ಆ ಲಕ್ಷ್ಮೀದೇವಿಯು ಹೇಗೆ ಮಾಡು ವಳೋ ತಿಳಿಯದಾಗಿದೆ. ಅವನ ಕೀರ್ತಿ, ಯಶಸ್ಸು ಚಾಟು ನುಡಿಗಳಿಗೆ ಮನಸೋತು ಅವಳು ಆ ಧೂರ್ತನ ಸೇವೆಯನ್ನು ಮಾಡುತ್ತಿರಬಹುದು. ॥ ೧೩ ॥ ಎಲೈ ಷಟ್ಪದವೇ! ನಾವು ವನವಾಸಿಗಳು. ನಮಗೆ ಮನೆಮಠಗಳೂ ಇಲ್ಲ. ಅಂತಹ ನಮ್ಮ ಮುಂದೆ ನೀನು ಯದುಕುಲ ಶಿರೋಮಣಿಯಾದ ಶ್ರೀಕೃಷ್ಣನ ಗುಣಗಾನವನ್ನೇಕೆ ಮಾಡುತ್ತಿರುವೆ ? ಇದು ನಮಗೆಲ್ಲ ಹಳೆಯ ದಾಗಿ ಹೋಗಿದೆ. ಅವನ ಗುಣ-ಗಣಗಳೆಲ್ಲವನ್ನೂ ನಾವು ಬಲ್ಲೆವು. ನಿನ್ನ ಕುತಂತ್ರವು ನಮ್ಮ ಬಳಿ ನಡೆಯದು. ನೀನು ಇಲ್ಲಿಂದ ಹೊರಟುಹೋಗು. ವಿಜಯವು ಸದಾ ಜೊತೆಯಿರುವ ಶ್ರೀಕೃಷ್ಣನ ಗುಣಗಾನವನ್ನು ಮಧುರಾಪುರವಾಸಿನಿಯರಾದ ಸಖಿಯರ ಮುಂದೆ ಹಾಡು. ಅವರು ಹೊಸಬರು. ಅವರಿಗೆ ಅವನ ಲೀಲೆಗಳು ಇನ್ನೂ ಅಷ್ಟಾಗಿ ತಿಳಿಯವು. ಈ ಸಮಯದಲ್ಲಿ ಅವರು ಅವನಿಗೆ ಪ್ರಿಯರಾಗಿದ್ದಾರೆ. ಅವರ ಹೃದಯದ ಪೀಡೆಯನ್ನು ಅವನು ಪರಿಹರಿಸಿರುವನು. ಅವರು ನಿನ್ನ ಪ್ರಾರ್ಥನೆಯನ್ನು ಸ್ವೀಕರಿಸುವರು. ನಿನ್ನ ಚಾತುರ್ಯದಿಂದ ಸಂತೋಷಗೊಂಡು ಅವರು ನಿನಗೆ ಬೇಕಾದ್ದನ್ನು ಕೊಡುವರು. ॥ ೧೪ ॥ ಎಲೈ ಕಪಟಿಯಾದ ದುಂಬಿಯೇ! ಸ್ವರ್ಗದಲ್ಲಾಗಲೀ, ಪಾತಾಳಲೋಕ ದಲ್ಲಾಗಲೀ, ಮನೋಹರವಾದ ನಗೆ, ಹುಬ್ಬು-ಹಾರಿಸುವುದು, ಕಡೆಗಣ್ಣನೋಟ ಇತ್ಯಾದಿಗಳುಳ್ಳ ಮುಕುಂದನಿಗೆ ವಶವಾಗದಿರುವ ಸ್ತ್ರೀಯರು ಯಾರು ತಾನೇ ಇದ್ದಾರೆ ? ಮಹಾಲಕ್ಷ್ಮಿಯೇ ಯಾರ ಚರಣಕಮಲಗಳನ್ನು ಸದಾ ಸೇವಿಸುವಳೋ ಅಂತಹ ಶ್ಯಾಮ ಸುಂದರನಿಗೆ ನಾವು ಎಷ್ಟು ಮಾತ್ರದವರು. ಆದರೆ ದೀನರ ವಿಷಯ ದಲ್ಲಿ ಅವನಿಗಿರುವ ಪುಣ್ಯಕೀರ್ತಿ ಎಂಬರ್ಥದ ಉತ್ತಮಶ್ಲೋಕ ಶಬ್ದವು ಅನ್ವರ್ಥವಾಗುವುದೇನು ? ॥ ೧೫ ॥ ಭ್ರಮರವೇ! ತಲೆಯಮೇಲಿಟ್ಟಿರುವ ನಿನ್ನ ಪಾದವನ್ನು ತೆಗಿ; ದೂರಸರಿ. ಚಮತ್ಕಾರದ ಮಾತುಗಳನ್ನಾಡಿ ಸಂಧಾನಮಾಡುವುದರಲ್ಲಿ ನೀನು ನಿಪುಣನೆಂದು ನಾವು ಬಲ್ಲೆವು. ಚಮತ್ಕಾರವಾಗಿ ಮಾತನಾಡು ವುದನ್ನು ನೀನು ಶ್ರೀಕೃಷ್ಣನಿಂದಲೇ ಕಲಿತಿರುವೆ ಎಂದೆನಿಸುತ್ತದೆ. ಆದರೆ ನಿನ್ನ ಮಾತುಗಳು ನಮ್ಮಲ್ಲಿ ಪರಿಣಾಮ ಬೀರಲಾರವು. ಏಕೆಂದರೆ, ನಿನ್ನ ಪ್ರಭುವಿಗಾಗಿಯೇ ನಾವು ಪತಿ-ಪುತ್ರರನ್ನು ಬಂಧುಗಳನ್ನು, ಪರಲೋಕಕ್ಕೆ ಸಾಧನವಾದ ಸಮಸ್ತ ಧರ್ಮಗಳನ್ನು ತ್ಯಜಿಸಿದೆವು. ಆದರೆ ಕೃತಜ್ಞತೆಯಿಲ್ಲದ ಅವನು ನಮ್ಮನ್ನು ಬಿಟ್ಟು ಹೊರಟೇಹೋದ. ಅಂತಹವನ ವಿಷಯದಲ್ಲಿ ಮೈತ್ರಿಮಾಡಿ ಕೊಳ್ಳುವುದೇನಿದೆ ? ॥ ೧೬ ॥

ಮೃಗಯುರಿವ ಕಪೀಂದ್ರಂ ವಿವ್ಯಧೇ ಲುಬ್ಧಧರ್ಮಾ
ಸ್ತ್ರಿಯಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯಾನಾಮ್ ।

ಬಲಿಮಪಿ ಬಲಿಮತ್ತ್ವಾವೇಷ್ಟಯದ್ಧ್ವಾಂಕ್ಷವದ್ಯ-
ಸ್ತದಲಮಸಿತಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ॥ ೧೭ ॥

ಯದನುಚರಿತಲೀಲಾಕರ್ಣಪೀಯೂಷವಿಪ್ರುಟ್-
ಸಕೃದದನವಿಧೂತದ್ವಂದ್ವಧರ್ಮಾ ವಿನಷ್ಟಾಃ ।

ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯ ದೀನಾ
ಬಹವ ಇಹ ವಿಹಂಗಾ ಭಿಕ್ಷುಚರ್ಯಾಂ ಚರಂತಿ ॥ ೧೮ ॥

ವಯಮೃತಮಿವ ಜಿಹ್ಮವ್ಯಾಹೃತಂ ಶ್ರದ್ದಧಾನಾಃ
ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ।

ದದೃಶುರಸಕೃದೇತತ್ತನ್ನಖಸ್ಪರ್ಶತೀವ್ರ-
ಸ್ಮರರುಜ ಉಪಮಂತ್ರಿನ್ ಭಣ್ಯತಾಮನ್ಯವಾರ್ತಾ ॥ ೧೯ ॥

ಪ್ರಿಯಸಖ ಪುನರಾಗಾಃ ಪ್ರೇಯಸಾ ಪ್ರೇಷಿತಃ ಕಿಂ
ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ।

ನಯಸಿ ಕಥಮಿಹಾಸ್ಮಾನ್ ದುಸ್ತ್ಯಜದ್ವಂದ್ವಪಾರ್ಶ್ವಂ
ಸತತಮುರಸಿ ಸೌಮ್ಯ ಶ್ರೀರ್ವಧೂಃ ಸಾಕಮಾಸ್ತೇ ॥ ೨೦ ॥

ಭ್ರಮರವೇ ! ನಿನ್ನ ಪ್ರಭುವಿನ ನಿರ್ದಯತೆಯನ್ನು ಎಷ್ಟೊಂದು ವರ್ಣಿಸೋಣ. ಇವನು ಶ್ರೀರಾಮನಾಗಿದ್ದಾಗ ಕಪಿರಾಜನಾದ ವಾಲಿಯನ್ನು ವ್ಯಾಧನಂತೆ ಅಡಗಿಕೊಂಡು ನಿರ್ದಯತೆಯಿಂದ ಕೊಂದುಬಿಟ್ಟಿದ್ದನು. ಅದೇ ಅವತಾರದಲ್ಲಿ ಸ್ತ್ರೀಜಿತನಾದ ಇವನು ಕಾಮಿಸಿಬಂದ ಶೂರ್ಪಣಖಿಯ ಕಿವಿ-ಮೂಗುಗಳನ್ನು ಕತ್ತರಿಸಿ ಅವಳನ್ನು ವಿರೂಪಗೊಳಿಸಿದ್ದನು. ವಾಮನಾವತಾರದಲ್ಲಿ ತಾನೇ ಮಾಡಿದ್ದೇನು ? ವಟುವಿನ ವೇಷದಿಂದ ಬಂದ ಇವನನ್ನು ಬಲಿಚಕ್ರವರ್ತಿಯು ಯಥೋಚಿತವಾಗಿ ಸತ್ಕರಿಸಿದನು. ಬೇಡಿದ್ದನ್ನು ಕೊಟ್ಟುಬಿಟ್ಟನು. ಆದರೆ ಇವನು ಆ ಬಲಿಯನ್ನು ವರುಣ ಪಾಶದಿಂದ ಬಂಧಿಸಿ ಪಾತಾಳಕ್ಕಟ್ಟಿದನು. ಬಲಿಯನ್ನು ಭಕ್ಷಿಸಿದ ಕಾಗೆಯು ಬಲಿಯನ್ನಿತ್ತವನನ್ನೇ ಪರಿವಾರದೊಂದಿಗೆ ಮುತ್ತುವಂತೆ ಅಲ್ಲವೇ ಇದು. ಹೋಗಲಿ ಬಿಡು. ಈ ಕರಿಯನೊಡನೆ ಸ್ನೇಹವೇ ಸಾಕೆನಿಸಿದೆ. ಆದರೂ ಏನು ಮಾಡುವುದು ? ಅವನ ಲೀಲಾ ಪ್ರಸಂಗಗಳನ್ನು ಗಾನಮಾಡದೇ ಇರಲಾಗುವುದಿಲ್ಲ. ॥ ೧೭ ॥ ಶ್ರೀಕೃಷ್ಣನ ಲೀಲಾರೂಪವಾದ ಕರ್ಣಾಮೃತದ ಒಂದು ತೊಟ್ಟನ್ನು ಪಾನ ಮಾಡಿದವರೂ ಕೂಡ ರಾಗ, ದ್ವೇಷ, ಸುಖ-ದುಃಖವೇ ಮೊದಲಾದ ದ್ವಂದ್ವಗಳಿಂದ ಬಿಡುಗಡೆ ಹೊಂದುವರು. ದಯನೀಯವಾದ ಸಂಸಾರವನ್ನೂ, ಮನೆ-ಮಠಗಳನ್ನು ತೊರೆದು ಅತ್ಯಂತ ದೀನರಾಗಿ ಸಂಗ್ರಹ-ಪರಿಗ್ರಹಗಳನ್ನು ಮಾಡದೆ ಪ್ರಾಣ ಧಾರಣೆಗೆ ಬೇಕಾದಷ್ಟು ಮಾತ್ರವೇ ಆಹಾರವನ್ನು ಸೇವಿಸುವ ಪಕ್ಷಿಗಳಂತೆ – ಈ ವೃಂದಾವನದಲ್ಲಿ ಬಹುಮಂದಿ ಭಿಕ್ಷಾಟನೆಯಿಂದ ಜೀವಿಸುತ್ತಿದ್ದಾರೆ. ಹೀಗಿದ್ದರೂ ಶ್ರೀಕೃಷ್ಣನ ಲೀಲಾಕಥೆಗಳನ್ನು ಬಿಡಲಿಕ್ಕಾಗುವುದಿಲ್ಲ. ನಮ್ಮ ಅವಸ್ಥೆಯೂ ಹೀಗೆ ಆಗಿದೆ. ॥ ೧೮ ॥ ಶ್ರೀಕೃಷ್ಣನ ಉಪಮಂತ್ರಿಯೇ ! ಕೃಷ್ಣಸಾರಮೃಗದ ಪತ್ನಿಯರಾದ ಹೆಣ್ಣು ಜಿಂಕೆಗಳು ವ್ಯಾಧನ ಸುಮಧುರ ಸಂಗೀತಕ್ಕೆ ಮರುಳಾಗಿ ಅವನು ಬೀಸಿದ ಬಲೆಯಲ್ಲಿ ಬಿದ್ದು ಪ್ರಾಣನೀಗುವಂತೆ ಶ್ರೀಕೃಷ್ಣನ ಪತ್ನಿಯರಾದ ನಾವೂ (ಗೋಪಿಯರೂ) ಕುಟಿಲನಾದ ಕೃಷ್ಣನ ಅಮೃತಮಯವಾದ ಮಾತನ್ನು ಸತ್ಯವೆಂದೇ ಬಗೆದು ಆ ಕೃಷ್ಣನ ನಖಸ್ಪರ್ಶದಿಂದ ಉಂಟಾದ ಕಾಮಬಾಧೆಯನ್ನು ಹಲವಾರು ಬಾರಿ ಅನುಭವಿಸಿದೆವು. ಆದುದರಿಂದ ಅವನ ವಿಷಯದಲ್ಲಿ ಬೇರೆ ಯಾವ ಮಾತನ್ನೂ ಆಡಬೇಡ. ಬೇರೇನಾದರೂ ವಾರ್ತೆಯಿದ್ದರೆ ತಿಳಿಸು. ॥ ೧೯ ॥ ನಮ್ಮ ಪ್ರಿಯತಮನ ಪ್ರಿಯಸಖನೇ ! ನೀನು ನಿನ್ನ ಸ್ವಾಮಿಯ ಬಳಿಗೆ ಹೋಗಿ ಪುನಃ ಆಗಮಿಸಿದಂತೆ ಕಾಣುತ್ತದೆ. ನಮ್ಮನ್ನಲ್ಲಿಗೆ ಕರೆದುಕೊಂಡು ಹೋಗಲು ನಮ್ಮ ಪ್ರಿಯತಮನು ಪುನಃ ನಿನ್ನನ್ನು ಕಳಿಸಿರಬೇಕಲ್ಲ ? ಪ್ರಿಯಭ್ರಮರವೇ ! ನೀನು ನಮಗೆ ಮಾನನೀಯನಾಗಿರುವೆ. ನಿನ್ನ ಇಚ್ಛೆ ಏನೆಂಬುದನ್ನು ಹೇಳು. ನೀನು ಹೇಳಿದಂತೆ ಮಾಡುತ್ತೇವೆ. ನಾವಲ್ಲಿಗೆ ಬರಲು ನೀನು ಅಪೇಕ್ಷಿಸುವೆಯಾ ? ಆದರೆ ಅವನ ಬಳಿಗೆ ಹೋದರೂ ಮರಳಬೇಕಾಗುವುದು. ನಾವೂ ಅವನ ಬಳಿಗೆ ಹೋಗಿದ್ದೆವು. ಆದರೆ ನೀನು ನಮ್ಮನ್ನಲ್ಲಿಗೆ ಕರೆದುಕೊಂಡು ಹೋಗಿ ಏನು ಮಾಡುವೆ ? ಸೌಮ್ಯನೇ ಅವನ ವಕ್ಷಸ್ಥಳದಲ್ಲಾದರೋ ಅವನ ಪ್ರಿಯಪತ್ನೀ ಲಕ್ಷ್ಮಿಯು ಸದಾಕಾಲ ಇರುವಳಲ್ಲ! ಹಾಗಿರುವಾಗ ಅಲ್ಲಿ ನಮ್ಮದೇನು ನಡೆದೀತು ? ॥ ೨೦ ॥

ಅಪಿ ಬತ ಮಧುಪುರ್ಯಾಮಾರ್ಯಪುತ್ರೋಽಧುನಾಸ್ತೇ
ಸ್ಮರತಿ ಸ ಪಿತೃಗೇಹಾನ್ ಸೌಮ್ಯ ಬಂಧೂಂಶ್ಚ ಗೋಪಾನ್ ।

ಕ್ವಚಿದಪಿ ಸ ಕಥಾ ನಃ ಕಿಂಕರೀಣಾಂ ಗೃಣೀತೇ
ಭುಜಮಗುರುಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾ ನು
॥ ೨೧ ॥

*ಶ್ರೀಶುಕ ಉವಾಚ*

ಅಥೋದ್ಧವೋ ನಿಶಮ್ಯೈವಂ ಕೃಷ್ಣದರ್ಶನಲಾಲಸಾಃ ।
ಸಾಂತ್ವಯನ್ ಪ್ರಿಯಸಂದೇಶೈರ್ಗೋಪೀರಿದಮಭಾಷತ
॥ ೨೨ ॥

*ಉದ್ಧವ ಉವಾಚ*

ಅಹೋ ಯೂಯಂ ಸ್ಮ ಪೂರ್ಣಾರ್ಥಾ ಭವತ್ಯೋ ಲೋಕಪೂಜಿತಾಃ ।
ವಾಸುದೇವೇ ಭಗವತಿ ಯಾಸಾಮಿತ್ಯರ್ಪಿತಂ ಮನಃ
॥ ೨೩ ॥

ದಾನವ್ರತತಪೋಹೋಮಜಪಸ್ವಾಧ್ಯಾಯಸಂಯಮೈಃ ।
ಶ್ರೇಯೋಭಿರ್ವಿವಿಧೈಶ್ಚಾನ್ಯೈಃ ಕೃಷ್ಣೇ ಭಕ್ತಿರ್ಹಿ ಸಾಧ್ಯತೇ
॥ ೨೪ ॥

ಭಗವತ್ಯುತ್ತಮಶ್ಲೋಕೇ ಭವತೀಭಿರನುತ್ತಮಾ ।
ಭಕ್ತಿಃ ಪ್ರವರ್ತಿತಾ ದಿಷ್ಟ್ಯಾ ಮುನೀನಾಮಪಿ ದುರ್ಲಭಾ
॥ ೨೫ ॥

ದಿಷ್ಟ್ಯಾ ಪುತ್ರಾನ್ ಪತೀನ್ ದೇಹಾನ್
ಸ್ವಜನಾನ್ ಭವನಾನಿ ಚ ।
ಹಿತ್ವಾವೃಣೀತ ಯೂಯಂ ಯತ್
ಕೃಷ್ಣಾಖ್ಯಂ ಪುರುಷಂ ಪರಮ್ ॥ ೨೬ ॥

ಸರ್ವಾತ್ಮಭಾವೋಽಧಿಕೃತೋ ಭವತೀನಾಮಧೋಕ್ಷಜೇ ।
ವಿರಹೇಣ ಮಹಾಭಾಗಾ ಮಹಾನ್ ಮೇಽನುಗ್ರಹಃ ಕೃತಃ
॥ ೨೭ ॥

ಶ್ರೂಯತಾಂ ಪ್ರಿಯಸಂದೇಶೋ ಭವತೀನಾಂ ಸುಖಾವಹಃ ।
ಯಮಾದಾಯಾಗತೋ ಭದ್ರಾ ಅಹಂ ಭರ್ತೂರ್ರಹಸ್ಕರಃ
॥ ೨೮ ॥

ನಮ್ಮ ಪ್ರಿಯತಮನ ಪ್ರಿಯಸಖನಾದ ಮಧುಕರನೇ ! ಆರ್ಯಪುತ್ರನಾದ ಭಗವಾನ್ ಶ್ರೀಕೃಷ್ಣನು ಗುರುಕುಲದಿಂದ ಮರಳಿ ಬಂದು ಈಗ ಮಥುರೆಯಲ್ಲಿ ಸುಖದಿಂದ ಇರುವನಲ್ಲ? ಅವನು ಎಂದಾದರೂ ನಂದ-ಯಶೋದೆಯರನ್ನು, ಇಲ್ಲಿಯ ಮನೆಯನ್ನು, ಸಂಬಂಧಿಗಳನ್ನು ಗೊಲ್ಲಬಾಲಕರನ್ನು ಸ್ಮರಿಸಿಕೊಳ್ಳುವನೇ ? ದಾಸಿಯರಾದ ನಮ್ಮ ಸಂಬಂಧವಾಗಿಯೂ ಯಾವಾಗಲಾದರೂ ಮಾತುಗಳನ್ನು ಆಡುತ್ತಿರುವನೇ ? ಮುಂದೆ ಎಂದಾದರೂ ಅಗರು ಸುಗಂಧಯುಕ್ತವಾದ ತನ್ನ ತೋಳನ್ನು ನಮ್ಮ ತಲೆಯ ಮೇಲೆ ಇರಿಸುವನೇ ? ಹೇಳು ? ಭ್ರಮರವೇ ! ॥ ೨೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ ! ಶ್ರೀಕೃಷ್ಣನನ್ನು ಸಂದರ್ಶಿಸಲು ಅತ್ಯಂತ ಉತ್ಸುಕರಾಗಿದ್ದ ಗೋಪಿಯರ ಮಾತನ್ನು ಕೇಳಿದ ಉದ್ಧವನು ಶ್ರೀಕೃಷ್ಣನ ಪ್ರಿಯಸಂದೇಶಗಳಿಂದ ಸಂತೈಸುತ್ತಾ ಅವರಲ್ಲಿ ಹೀಗೆ ಹೇಳಿದನು. ॥ ೨೨ ॥

**ಉದ್ಧವನು ಹೇಳುತ್ತಾನೆ** – ಗೋಪಿಯರೇ! ನೀವು ಕೃತಕೃತ್ಯರು. ನಿಮ್ಮ ಜೀವನವು ಸಫಲವಾಗಿದೆ. ನೀವು ಮೂರು ಲೋಕಗಳಲ್ಲಿಯೂ ಪೂಜ್ಯರಾಗಿರುವಿರಿ. ನೀವು ನಿಮ್ಮ ಸರ್ವಸ್ವವನ್ನು ಭಗವಾನ್ ಶ್ರೀಕೃಷ್ಣನಿಗೆ ಅರ್ಪಿಸಿಕೊಂಡು ಬಿಟ್ಟಿರುವಿರಿ. ನೀವೇ ಧನ್ಯರು. ॥ ೨೩ ॥ ದಾನ, ವ್ರತ, ತಪ, ಹೋಮ, ಜಪ, ವೇದಾಧ್ಯಯನ, ಧ್ಯಾನ, ಧಾರಣ, ಸಮಾಧಿ ಮತ್ತು ಶ್ರೇಯಸ್ಕರವಾದ ವಿಧ-ವಿಧವಾದ ಇತರ ಸಾಧನೆಗಳ ಮೂಲಕ ಭಗವಂತನಲ್ಲಿ ಭಕ್ತಿಯು ಹುಟ್ಟಲು ಸಾಧ್ಯವಾಗುತ್ತದೆ. ॥ ೨೪ ॥ ಆದರೆ ಉತ್ತಮಕೀರ್ತಿಯುಳ್ಳ ಭಗವಂತನ ಸರ್ವೋತ್ತಮವಾದ ಪ್ರೇಮಭಕ್ತಿಯನ್ನು ನೀವೆಲ್ಲರೂ ಪಡೆದುಕೊಂಡು ಅದರ ಆದರ್ಶವನ್ನು ಸ್ಥಾಪಿಸಿರುವಿರಿ. ಇದು ನಿಶ್ಚಯವಾಗಿಯೂ ಸೌಭಾಗ್ಯವೇ ಸರಿ. ಆ ಭಕ್ತಿಯು ಮಹಾ-ಮಹಾ ಋಷಿ-ಮುನಿಗಳಿಗೂ ಅತ್ಯಂತ ದುರ್ಲಭವಾದುದು. ॥ ೨೫ ॥ ನೀವುಗಳು ನಿಮ್ಮ ಪತಿ-ಪುತ್ರರನ್ನೂ, ದೇಹ ಸ್ವಜನರನ್ನೂ, ಮನೆ-ಮಠಗಳನ್ನು ಬಿಟ್ಟು ಸಮಸ್ತರ ಪರಮಪತಿಯಾದ ಪುರುಷೋತ್ತಮ ಭಗವಾನ್ ಶ್ರೀಕೃಷ್ಣನನ್ನು ಪತಿಯನ್ನಾಗಿ ವರಿಸಿರುವಿರಿ. ನಿಜವಾಗಿಯೂ ಇದು ಸೌಭಾಗ್ಯದ ಮಾತೇ ಸರಿ. ॥ ೨೬ ॥ ಮಹಾಭಾಗ್ಯವತಿಯರಾದ ಗೋಪಿಯರೇ ! ಭಗವಾನ್ ಶ್ರೀಕೃಷ್ಣನ ವಿಯೋಗದಿಂದ ನೀವು-ಸಮಸ್ತ ವಸ್ತುಗಳ ರೂಪದಲ್ಲಿ ಅವನ ದರ್ಶನವಾಗುವಂತಹ ಇಂದ್ರಿಯಾತೀತ ಪರಮಾತ್ಮನ ಕುರಿತು ಆ ಭಾವವನ್ನು ಪಡೆದುಕೊಂಡಿರುವಿರಿ. ನೀವೆಲ್ಲರೂ ಆ ಭಾವವನ್ನು ನನ್ನ ಮುಂದೆಯೇ ಪ್ರಕಟಿಸಿರುವಿರಿ. ಇದು ನನ್ನ ಮೇಲೆ ದೇವಿಯರಾದ ನೀವು ತೋರಿದ ಮಹತ್ಕೃಪೆಯೇ ಆಗಿದೆ. ॥ ೨೭ ॥ ನಾನು ನನ್ನ ಸ್ವಾಮಿಯ ರಹಸ್ಯವಾದ ಕಾರ್ಯಮಾಡುವಂತಹ ದೂತನಾಗಿದ್ದೇನೆ. ನಿಮ್ಮ ಪ್ರಿಯತಮನಾದ ಶ್ರೀಕೃಷ್ಣನು ಪರಮ ಸುಖದಾಯಕವಾದ ಸಂದೇಶವನ್ನು ನಿಮಗೆ ಕಳಿಸಿಕೊಟ್ಟಿರುವನು. ಮಂಗಳಾಂಗಿಯರೇ! ಅದನ್ನು ಹೊತ್ತುಕೊಂಡು ನಾನು ನಿಮ್ಮ ಬಳಿಗೆ ಬಂದಿರುವೆನು. ಈಗ ಅದನ್ನು ಲಾಲಿಸಿರಿ. ॥ ೨೮ ॥

ಶ್ರೀಭಗವಾನುವಾಚ

ಭವತೀನಾಂ ವಿಯೋಗೋ ಮೇ ನ ಹಿ ಸರ್ವಾತ್ಮನಾ ಕ್ವಚಿತ್ ।
ಯಥಾ ಭೂತಾನಿ ಭೂತೇಷು ಖಂ ವಾಯ್ವಗ್ನಿರ್ಜಲಂ ಮಹೀ ।
ತಥಾಹಂ ಚ ಮನಃಪ್ರಾಣಭೂತೇಂದ್ರಿಯಗುಣಾಶ್ರಯಃ
॥ ೨೯ ॥

ಆತ್ಮನ್ಯೇವಾತ್ಮನಾಽಽತ್ಮಾನಂ ಸೃಜೇ ಹನ್ಮ್ಯನುಪಾಲಯೇ ।
ಆತ್ಮಮಾಯಾನುಭಾವೇನ ಭೂತೇಂದ್ರಿಯಗುಣಾತ್ಮನಾ
॥ ೩೦ ॥

ಆತ್ಮಾ ಜ್ಞಾನಮಯಃ ಶುದ್ಧೋ ವ್ಯತಿರಿಕ್ತೋಽಗುಣಾನ್ವಯಃ ।
ಸುಷುಪ್ತಿಸ್ವಪ್ನಜಾಗ್ರದ್ಭಿರ್ಮಾಯಾವೃತ್ತಿಭಿರೀಯತೇ
॥ ೩೧ ॥

ಯೇನೇಂದ್ರಿಯಾರ್ಥಾನ್ ಧ್ಯಾಯೇತ ಮೃಷಾ ಸ್ವಪ್ನವದುತ್ಥಿತಃ ।
ತನ್ನಿರುಂಧ್ಯಾದಿಂದ್ರಿಯಾಣಿ ವಿನಿದ್ರಃ ಪ್ರತ್ಯಪದ್ಯತ
॥ ೩೨ ॥

ಏತದಂತಃ ಸಮಾಮ್ನಾಯೋ ಯೋಗಃ ಸಾಂಖ್ಯಂ ಮನೀಷಿಣಾಮ್ ।
ತ್ಯಾಗಸ್ತಪೋ ದಮಃ ಸತ್ಯಂ ಸಮುದ್ರಾಂತಾ ಇವಾಪಗಾಃ
॥ ೩೩ ॥

ಯತ್ತ್ವಹಂ ಭವತೀನಾಂ ವೈ ದೂರೇ ವರ್ತೇ ಪ್ರಿಯೋ ದೃಶಾಮ್ ।
ಮನಸಃ ಸನ್ನಿಕರ್ಷಾರ್ಥಂ ಮದನುಧ್ಯಾನಕಾಮ್ಯಯಾ
॥ ೩೪ ॥

**ಭಗವಾನ್ ಶ್ರೀಕೃಷ್ಣನು ಹೇಳಿರುವನು** – ನಾನು ಎಲ್ಲಕ್ಕೂ ಮೂಲಕಾರಣನಾದ್ದರಿಂದ ಸರ್ವರಿಗೂ ಆತ್ಮಸ್ವರೂಪನಾಗಿದ್ದೇನೆ. ಎಲ್ಲದರಲ್ಲಿಯೂ ನಾನೇ ಇದ್ದೇನೆ. ಆದುದರಿಂದ ನನಗೆ ನಿಮ್ಮೊಡನೆ ವಿಯೋಗವು ಎಂದಿಗೂ ಉಂಟಾಗಲಾರದು. ಪ್ರಪಂಚದ ಎಲ್ಲ ಭೌತಿಕ ಪದಾರ್ಥಗಳಲ್ಲಿ ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ ಎಂಬ ಪಂಚಭೂತಗಳೂ ಸೇರಿಕೊಂಡೇ ಇರುತ್ತವೆ. ಇವುಗಳಿಂದಲೇ ಸಮಸ್ತ ವಸ್ತುಗಳು ಉಂಟಾಗಿವೆ. ಇವೇ ಆ ವಸ್ತುಗಳ ರೂಪದಲ್ಲಿವೆ. ಹಾಗೆಯೇ ಮನಸ್ಸು, ಪಂಚಭೂತ ಇಂದ್ರಿಯಗಳು ಮತ್ತು ಅವುಗಳ ವಿಷಯಗಳು – ಇವುಗಳ ಆಶ್ರಯ ನಾನೇ ಆಗಿದ್ದೇನೆ. ಅವು ನನ್ನಲ್ಲಿವೆ, ನಾನು ಅವುಗಳಲ್ಲಿದ್ದೇನೆ. ನಿಜವಾಗಿ ಹೇಳಬೇಕಾದರೆ ನಾನೇ ಅವುಗಳ ರೂಪದಲ್ಲಿ ಪ್ರಕಟನಾಗಿದ್ದೇನೆ. ॥ ೨೯ ॥ ನಾನೇ ನನ್ನ ಮಾಯೆಯ ಮೂಲಕ ಪ್ರಾಣಗಳು, ಇಂದ್ರಿಯಗಳು ಮತ್ತು ಅವುಗಳ ವಿಷಯಗಳ ರೂಪನಾಗಿ ಅವುಗಳ ಆಶ್ರಯನಾಗುತ್ತೇನೆ. ಸ್ವಯಂ ನಿಮಿತ್ತನಾಗಿಯೂ ನಾನೇ ನನ್ನನ್ನು ರಚಿಸಿ, ಪಾಲಿಸಿ, ತಿರೋಧಾನನಾಗುತ್ತೇನೆ. ॥ ೩೦ ॥ ಆತ್ಮನು ಮಾಯೆ ಮತ್ತು ಮಾಯೆಯ ಕಾರ್ಯಗಳಿಂದ ಪೃಥಕ್ಕಾಗಿರುವನು. ಅವನು ವಿಶುದ್ಧ ಜ್ಞಾನಸ್ವರೂಪ ನಾಗಿದ್ದು ಜಡ ಪ್ರಕೃತಿ, ಅನಂತ ಜೀವರು ಹಾಗೂ ತನ್ನದೇ ಅವಾಂತರ ಭೇದಗಳಿಂದ ರಹಿತನಾಗಿ ಶುದ್ಧನಾಗಿದ್ದಾನೆ. ಯಾವುದೇ ಗುಣವು ಅವನನ್ನು ಸ್ಪರ್ಶಿಸಲಾರದು. ಸುಷುಪ್ತಿ, ಸ್ವಪ್ನ ಜಾಗ್ರತ್ ಎಂಬ ಮಾಯೆಯ ಮೂರು ವೃತ್ತಿಗಳಿಂದ ಅತೀತನಾದ ಅಖಂಡ, ಅನಂತ, ಬೋಧಸ್ವರೂಪನಾದ ಆತ್ಮನು ಕೆಲವೊಮ್ಮೆ ಪ್ರಾಜ್ಞನಾಗಿಯೂ, ಕೆಲವೊಮ್ಮೆ ತೈಜಸನಾಗಿಯೂ, ಕೆಲವೊಮ್ಮೆ ವಿಶ್ವನಾಗಿಯೂ ಕಂಡುಬರುತ್ತಾನೆ. ॥ ೩೧ ॥ ಸ್ವಪ್ನದಲ್ಲಿ ಕಂಡು ಬರುವ ಪದಾರ್ಥಗಳಂತೆ ಜಾಗ್ರದವಸ್ಥೆಯಲ್ಲಿ ಕಂಡುಬರುವ ಇಂದ್ರಿಯ ವಿಷಯಗಳೂ ಮಿಥ್ಯೆಯೇ ಆಗಿವೆ ಎಂದು ಭಾವಿಸಿಕೊಂಡು ವಿಷಯಗಳ ಕಡೆಗೆ ಹರಿದುಹೋಗುವ ಮನಸ್ಸನ್ನು ಮತ್ತು ಇಂದ್ರಿಗಳನ್ನು ತಡೆಗಟ್ಟಬೇಕು. ಸ್ವಪ್ನದಿಂದ ಎಚ್ಚೆತ್ತ ಬಳಿಕ ಕಂಡ ಸ್ವಪ್ನವು ಸುಳ್ಳೆಂದು ಭಾವಿಸುವಂತೆಯೇ ಜಗತ್ತಿನ ವಿಷಯಗಳೂ ಮಿಥ್ಯೆಯೆಂದು ತ್ಯಜಿಸಿ ನನ್ನ ಸಾಕ್ಷಾತ್ಕಾರವನ್ನು ಪಡೆಯಬೇಕು. ॥ ೩೨ ॥ ಎಲ್ಲ ನದಿಗಳೂ ಹರಿದುಕೊಂಡು ಕೊನೆಗೆ ಸಮುದ್ರವನ್ನೇ ಸೇರುವಂತೆಯೇ ಮಹಾತ್ಮರು ಮಾಡುವ ವೇದಾಭ್ಯಾಸ, ಯೋಗ–ಸಾಧನೆ, ಆತ್ಮಾನಾತ್ಮ ವಿವೇಕ, ತ್ಯಾಗ, ತಪಸ್ಸು ಇಂದ್ರಿಯ ಸಂಯಮ, ಸತ್ಯ ಮುಂತಾದ ಸಮಸ್ತ ಧರ್ಮಗಳು ನನ್ನ ಪ್ರಾಪ್ತಿಯಲ್ಲೇ ಪರಿಸಮಾಪ್ತವಾಗುತ್ತವೆ. ಎಲ್ಲದರ ನಿಜವಾದ ಫಲವು ನನ್ನ ಸಾಕ್ಷಾತ್ಕಾರವೇ ಆಗಿದೆ. ಏಕೆಂದರೆ, ಅವೆಲ್ಲವೂ ಮನಸ್ಸನ್ನು ನಿಗ್ರಹಿಸಿ ನನ್ನ ಕಡೆಗೆ ಒಯ್ಯುತ್ತವೆ. ॥ ೩೩ ॥

ಗೋಪಿಯರೇ! ನಾನು ನಿಮ್ಮ ಕಣ್ಣುಗಳ ಧ್ರುವತಾರೆಯಾಗಿದ್ದೇನೆ. ನಿಮ್ಮ ಜೀವನ ಸರ್ವಸ್ವನಾಗಿರುವೆನು ಎಂಬುದರಲ್ಲಿ ಸಂದೇಹವೇ ಇಲ್ಲ. ನಾನು ಇಷ್ಟು ದೂರವಿದ್ದರೂ ನೀವು ನಿರಂತರವಾಗಿ ನನ್ನ ಧ್ಯಾನವನ್ನು ಮಾಡುತ್ತಿರುವಿರಿ. ನೀವು ಶರೀರದಿಂದ ದೂರವಿದ್ದರೂ ಮನಸ್ಸಿನಿಂದ ನನ್ನ ಸನ್ನಿಧಾನವನ್ನು ಅನುಭವಿಸುತ್ತಿರಿ. ನಿಮ್ಮ ಮನಸ್ಸನ್ನು ನನ್ನ ಬಳಿಯೇ ಇರಿಸಿರುವಿರಿ – ಇದೇ ನನ್ನ ಆಶಯವೂ ಆಗಿದೆ. ॥ ೩೪ ॥

ಯಥಾ ದೂರಚರೇ ಪ್ರೇಷ್ಠೇ ಮನ ಆವಿಶ್ಯ ವರ್ತತೇ ।
ಸ್ತ್ರೀಣಾಂ ಚ ನ ತಥಾ ಚೇತಃ ಸನ್ನಿಕೃಷ್ಟೇಽಕ್ಷಿಗೋಚರೇ
॥ ೩೫ ॥

ಮಯ್ಯಾವೇಶ್ಯ ಮನಃ ಕೃತ್ಸ್ನಂ ವಿಮುಕ್ತಾಶೇಷವೃತ್ತಿ ಯತ್ ।
ಅನುಸ್ಮರಂತ್ಯೋ ಮಾಂ ನಿತ್ಯಮಚಿರಾನ್ಮಾಮುಪೈಷ್ಯಥ
॥ ೩೬ ॥

ಯಾ ಮಯಾ ಕ್ರೀಡತಾ ರಾತ್ರ್ಯಾಂ ವನೇಽಸ್ಮಿನ್ ವ್ರಜ ಆಸ್ಥಿತಾಃ ।
ಅಲಬ್ಧರಾಸಾಃ ಕಲ್ಯಾಣ್ಯೋ ಮಾಽಽಪುರ್ಮದ್ವೀರ್ಯಚಿಂತಯಾ
॥ ೩೭ ॥

*ಶ್ರೀಶುಕ ಉವಾಚ*

ಏವಂ ಪ್ರಿಯತಮಾದಿಷ್ಟಮಾಕರ್ಣ್ಯ ವ್ರಜಯೋಷಿತಃ ।
ತಾ ಊಚುರುದ್ಧವಂ ಪ್ರೀತಾಸ್ತತ್ಸಂದೇಶಾಗತಸ್ಮೃತೀಃ
॥ ೩೮ ॥

*ಗೋಪ್ಯ ಊಚುಃ*

ದಿಷ್ಟ್ಯಾಹಿತೋ ಹತಃ ಕಂಸೋ ಯದೂನಾಂ ಸಾನುಗೋಽಘಕೃತ್ ।
ದಿಷ್ಟ್ಯಾಽಽಪ್ತೈರ್ಲಬ್ಧಸರ್ವಾರ್ಥೈಃ ಕುಶಲ್ಯಾಸ್ತೇಽಚ್ಯುತೋಽಧುನಾ
॥ ೩೯ ॥

ಕಚ್ಚಿದ್ಗದಾಗ್ರಜಃ ಸೌಮ್ಯ ಕರೋತಿ ಪುರಯೋಷಿತಾಮ್ ।
ಪ್ರೀತಿಂ ನಃ ಸ್ನಿಗ್ಧಸವ್ರೀಡಹಾಸೋದಾರೇಕ್ಷಣಾರ್ಚಿತಃ
॥ ೪೦ ॥

ಕಥಂ ರತಿವಿಶೇಷಜ್ಞಃ ಪ್ರಿಯಶ್ಚ ವರಯೋಷಿತಾಮ್ ।
ನಾನುಬಧ್ಯೇತ ತದ್ವಾಕ್ಯೈರ್ವಿಭ್ರಮೈಶ್ಚಾನುಭಾಜಿತಃ
॥ ೪೧ ॥

ಸ್ತ್ರೀಯರ ಮತ್ತು ಬೇರೆ ಪ್ರೇಮಿಯರ ಮನಸ್ಸು ದೂರದಲ್ಲಿ ಇರುವ ಪ್ರಿಯತಮನ ಮೇಲೆ ನೆಲೆಸಿರುವಂತೆ, ಹತ್ತಿರವೇ ಯಾವಾಗಲೂ ಕಣ್ಣೆದುರಿಗೆ ಇರುವ ಪ್ರಿಯತಮನಲ್ಲಿ ನೆಲೆಸಿರುವುದಿಲ್ಲ. ॥ ೩೫ ॥ ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ, ಇತರ ಸಮಸ್ತ ವ್ಯವಹಾರಗಳಿಂದ ನಿವೃತ್ತರಾಗಿ ನಿತ್ಯನಿರಂತರವಾಗಿ ನನ್ನನ್ನು ಧ್ಯಾನಿಸುತ್ತಿದ್ದರೆ ಬಹಳ ಬೇಗನೇ ನನ್ನನ್ನು ಹೊಂದುವಿರಿ. ॥ ೩೬ ॥ ಕಲ್ಯಾಣಿಯರೇ! ಶರತ್ಕಾಲದ ಹುಣ್ಣಿಮೆಯ ರಾತ್ರಿಯಲ್ಲಿ ನಾನು ನಿಮ್ಮೊಡನೆ ರಾಸಕ್ರೀಡೆ ಯನ್ನಾಡಿದೆನು. ಆ ಸಮಯದಲ್ಲಿ ಸ್ವಜನರಿಂದ ತಡೆಯಲ್ಪಟ್ಟು ನನ್ನೊಡನೆ ರಾಸ-ವಿಹಾರದಲ್ಲಿ ಸಮ್ಮಿಳಿತವಾಗಲು ಸಾಧ್ಯ ವಾಗದಿರುವ ಗೋಪಿಯರು ಮನೆಯಲ್ಲೇ ಉಳಿದು ನನ್ನ ಲೀಲೆ ಗಳನ್ನು ಸ್ಮರಿಸುತ್ತಾ ನನ್ನನ್ನೇ ಸೇರಿ ಹೋದರು. ನಿಮಗೂ ನಾನು ಅವಶ್ಯವಾಗಿ ದೊರೆಯುವೆನು. ನಿರಾಶರಾಗುವ ಮಾತೇ ಇಲ್ಲ. ॥ ೩೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ತಮ್ಮ ಪ್ರಿಯತಮನಾದ ಶ್ರೀಕೃಷ್ಣನ ಈ ಸಂದೇಶವನ್ನು ಕೇಳಿ ಗೋಪಿಯರಿಗೆ ಮಹದಾನಂದವಾಯಿತು. ಅವನ ಸಂದೇಶದಿಂದ ಅವರು ಶ್ರೀಕೃಷ್ಣನ ಸ್ವರೂಪವನ್ನು ಮತ್ತು ಒಂದೊಂದೇ ಲೀಲೆ ಗಳನ್ನು ಸ್ಮರಿಸಿಕೊಂಡು ಪ್ರೇಮಮಗ್ನರಾಗಿ ಉದ್ಧವನಲ್ಲಿ ಇಂತೆಂದರು. ॥ ೩೮ ॥

**ಗೋಪಿಯರು ಹೇಳುತ್ತಾರೆ** – ಓ ಉದ್ಧವನೇ! ಯದು ವಂಶೀಯರಿಗೆ ಉಪಟಳವನ್ನು ಕೊಡುತ್ತಿದ್ದ ಪಾಪಿಯಾದ ಕಂಸನು ತನ್ನ ಅನುಯಾಯಿಗಳೊಂದಿಗೆ ಸತ್ತು ಹೋದುದು ಸೌಭಾಗ್ಯದ ಮತ್ತು ಆನಂದದ ವಿಷಯವಾಗಿದೆ. ಶ್ರೀಕೃಷ್ಣನ ನೆಂಟರಿಷ್ಟರ ಗುರುಹಿರಿಯರ ಮನೋರಥಗಳೆಲ್ಲ ಪೂರ್ಣಗೊಂಡು, ನಮ್ಮ ಪ್ರಿಯತಮ ಶ್ಯಾಮಸುಂದರನು ಅವರೊಂದಿಗೆ ಕುಶಲವಾಗಿದ್ದಾನೆ ಎಂಬುದನ್ನು ಕೇಳಿ ನಾವು ಸಂತೋಷಗೊಂಡಿದ್ದೇವೆ. ॥ ೩೯ ॥ ಆದರೆ ಉದ್ಧವನೇ! ಅವನ ಕುರಿತಾದ ಒಂದು ಮಾತನ್ನು ಕೇಳಬಯಸುತ್ತೇವೆ. ನಾವು ಸ್ನೇಹಪೂರ್ಣವಾದ ನಾಚಿಕೆಯಿಂದ ಕೂಡಿದ ಮಂದಹಾಸದಿಂದಲೂ, ಉದಾರವಾದ ನೋಟ ದಿಂದಲೂ ಅವನ ಸೇವೆಯನ್ನು ಮಾಡುತ್ತಿದ್ದೆವು. ಅವನೂ ನಮ್ಮನ್ನು ಹಾಗೆಯೇ ಪ್ರೇಮಿಸುತ್ತಿದ್ದನು. ಇದೇ ರೀತಿಯಾಗಿ ಮಥುರೆಯ ಸ್ತ್ರೀಯರನ್ನು ಅವನು ಪ್ರೇಮಿಸುತ್ತಿರುವನೋ, ಇಲ್ಲವೋ? ॥ ೪೦ ॥ ಮತ್ತೊಬ್ಬ ಗೋಪಿಯು ಹೇಳುತ್ತಾಳೆ – ಗೆಳತಿಯರೇ! ನಮ್ಮ ಪ್ರಿಯತಮನಾದ ಶ್ಯಾಮಸುಂದರನು ಪ್ರೇಮದ ಕಲೆಯಲ್ಲಿ ವಿಶೇಷಜ್ಞನಾಗಿದ್ದಾನೆ. ಶ್ರೇಷ್ಠರಾದ ಸ್ತ್ರೀಯರೆಲ್ಲರೂ ಅವನನ್ನು ಪ್ರೀತಿಸುತ್ತಾರೆ. ಹೀಗಿರುವಾಗ ನಗರದ ಸ್ತ್ರೀಯರಾಡುವ ಮಧು ಮಧುರವಾದ ಮಾತುಗಳಿಂದಲೂ, ಹಾವ-ಭಾವಗಳಿಂದಲೂ ಅವನ ಕಡೆಗೆ ನೋಡುವಾಗ ಅವನು ಪ್ರೇಮಪಾಶದಲ್ಲಿ ಬಂಧಿಸದೆ ಇರುವನೇ? ॥ ೪೧ ॥

ಅಪಿ ಸ್ಮರತಿ ನಃ ಸಾಧೋ ಗೋವಿಂದಃ ಪ್ರಸ್ತುತೇ ಕ್ವಚಿತ್ ।
ಗೋಷ್ಠೀ ಮಧ್ಯೇ ಪುರಸ್ತ್ರೀಣಾಂ ಗ್ರಾಮ್ಯಾಃ ಸ್ವೈರಕಥಾಂತರೇ
॥ ೪೨ ॥

ತಾಃ ಕಿಂ ನಿಶಾಃ ಸ್ಮರತಿ ಯಾಸು ತದಾ ಪ್ರಿಯಾಭಿ-
ರ್ವೃಂದಾವನೇ ಕುಮುದಕುಂದ ಶಶಾಂಕರಮ್ಯೇ ।
ರೇಮೇ ಕ್ವಣಚ್ಚರಣನೂಪುರರಾಸಗೋಷ್ಠ್ಯಾ-
ಮಸ್ಮಾಭಿರೀಡಿತಮನೋಜ್ಞಕಥಃ ಕದಾಚಿತ್ ॥ ೪೩ ॥

ಅಪ್ಯೇಷ್ಯತೀಹ ದಾಶಾರ್ಹಸ್ತಪ್ತಾಃ ಸ್ವಕೃತಯಾ ಶುಚಾ ।
ಸಂಜೀವಯನ್ನು ನೋ ಗಾತ್ರೈರ್ಯಥೇಂದ್ರೋ ವನಮಂಬುದೈಃ
॥ ೪೪ ॥

ಕಸ್ಮಾತ್ ಕೃಷ್ಣ ಇಹಾಯಾತಿ ಪ್ರಾಪ್ತರಾಜ್ಯೋ ಹತಾಹಿತಃ ।
ನರೇಂದ್ರಕನ್ಯಾ ಉದ್ವಾಹ್ಯ ಪ್ರೀತಃ ಸರ್ವಸುಹೃದ್ವೃತಃ
॥ ೪೫ ॥

ಕಿಮಸ್ಮಾಭಿರ್ವನೌಕೋಭಿರನ್ಯಾಭಿರ್ವಾ ಮಹಾತ್ಮನಃ ।
ಶ್ರೀಪತೇರಾಪ್ತಕಾಮಸ್ಯ ಕ್ರಿಯೇತಾರ್ಥಃ ಕೃತಾತ್ಮನಃ
॥ ೪೬ ॥

ಪರಂ ಸೌಖ್ಯಂ ಹಿ ನೈರಾಶ್ಯಂ ಸ್ವೈರಿಣ್ಯಪ್ಯಾಹ ಪಿಂಗಲಾ ।
ತಜ್ಜಾನತೀನಾಂ ನಃ ಕೃಷ್ಣೇ ತಥಾಪ್ಯಾಶಾ ದುರತ್ಯಯಾ
॥ ೪೭ ॥

ಇನ್ನೊಬ್ಬ ಗೋಪಿಯು ಹೇಳಿದಳು–ಸಾಧು ಪುರುಷನೇ! ನಗರದ ನಾರಿಯರು ಗುಂಪು ಕಟ್ಟಿಕೊಂಡು ಮಾತನಾಡಿಕೊಂಡಿರುವಾಗ ನಮ್ಮ ಪ್ರಿಯತಮನು ಸ್ವಚ್ಛಂದವಾಗಿ ಕಾಮಿನಿಯರ ಮನಸ್ಸನ್ನು ತಣಿಸುವ ಮಾತನ್ನಾಡುವಾಗ ಗೋಕುಲದ ಗೊಲ್ಲತಿಯರಾದ ನಮ್ಮನ್ನು ಎಂದಾದರೂ ಸ್ಮರಿಸುವನೇ ?॥ ೪೨ ॥ ಮಗದೊಬ್ಬ ಗೋಪಿಯು ಕೇಳುತ್ತಾಳೆ – ಉದ್ಧವನೇ! ಶ್ರೀಕೃಷ್ಣನು ಎಂದಾದರೂ ಆ ದಿವ್ಯರಾತ್ರಿಗಳನ್ನು ಸ್ಮರಿಸುವನೋ ? ವಿಕಸಿತವಾದ ಬಿಳಿಯ ನೈದಿಲೆಗಳಿಂದಲೂ, ಮಲ್ಲಿಗೆ ಹೂವುಗಳಿಂದಲೂ, ಶರತ್ಕಾಲದ ಬೆಳದಿಂಗಳಿಂದಲೂ ವ್ಯಾಪ್ತವಾದ ವೃಂದಾವನದಲ್ಲಿ ಆ ರಾತ್ರಿಗಳಲ್ಲಿ ನಮ್ಮ ಪ್ರಿಯತಮನು ರಾಸಮಂಡಲದಲ್ಲಿ ನಮ್ಮೊಡನೆ ನೃತ್ಯವಾಡುತ್ತಿದ್ದನು. ನಿಶ್ಚಯವಾಗಿಯೂ ಎಷ್ಟು ಸುಂದರವಾದದ್ದು ಆ ರಾಸಲೀಲೆ! ನಂದಕಿಶೋರನ ಜೊತೆಯಲ್ಲಿ ನಾವು ನೃತ್ಯವಾಡುವಾಗ ನಮ್ಮ ಕಾಲಂದುಗೆಗಳು ಝಣ-ಝಣಿಸುತ್ತಿದ್ದವು. ನಾವೆಲ್ಲರೂ ಸೇರಿ ಅವನ ಲೀಲಾ ಪ್ರಸಂಗಗಳನ್ನು ಹಾಡುತ್ತಿದ್ದೆವು. ಹೀಗೆ ಅವನು ನಮ್ಮೊಡನೆ ನಾನಾ ಪ್ರಕಾರದಿಂದ ವಿಹರಿಸುತ್ತಿದ್ದನು. ಅಂತಹ ರಾತ್ರಿಗಳನ್ನು ನಾವು ಮರೆಯಲಾರೆವು. ಅವನಿಗೆ ಅದರ ಸ್ಮರಣೆ ಇದೆಯೇ ? ॥ ೪೩ ॥ ಇನ್ನೊಬ್ಬ ಗೋಪಿಯು ಕೇಳಿದಳು – ಉದ್ಧವನೇ! ನಾವೆಲ್ಲರೂ ಅವನ ವಿರಹಾಗ್ನಿಯಿಂದ ಬೇಯುತ್ತಿದ್ದೇವೆ. ದೇವೇಂದ್ರನು ಮಳೆಯನ್ನು ಸುರಿಸಿ ವನವನ್ನು ಹಚ್ಚ-ಹಸಿರಾಗಿಸುವಂತೆ ಶ್ರೀಕೃಷ್ಣನು ಎಂದಾದರೂ ತನ್ನ ಕರಸ್ಪರ್ಶಾದಿಗಳಿಂದ ನಮಗೂ ಜೀವನ ದಾನ ಮಾಡಲು ಇಲ್ಲಿಗೆ ಬರುವನೇ ? ॥ ೪೪ ॥ ಅಷ್ಟೊತ್ತಿಗೆ ಓರ್ವ ಗೋಪಿಯು ಹೇಳಿದಳು – ಎಲೈ ಸಖಿಯರೇ! ಈಗಲಾದರೋ ಅವನು ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಪಡೆದಿರುವನು. ರಾಜಕುಮಾರಿಯನ್ನು ವಿವಾಹವಾಗಿ, ಸಮಸ್ತ ಸಹೃದಯರಿಂದಲೂ ಪರಿವೃತನಾಗಿ ನಮ್ಮ ಪ್ರಿಯತಮನು ಆನಂದದಿಂದ ಇರುವನು. ನಮ್ಮಂತಹ ಗೊಲ್ಲತಿಯರ ಬಳಿಗೆ ಅವನೇಕೆ ಬರುವನು ? ॥ ೪೫ ॥ ಮತ್ತೊಬ್ಬಳು ಹೇಳಿದಳು – ಸಖಿಯರೇ! ಹಾಗೇನಿಲ್ಲ, ಮಹಾತ್ಮನಾದ ಶ್ರೀಕೃಷ್ಣನು ಸಾಕ್ಷಾತ್ ಲಕ್ಷ್ಮೀಪತಿಯಾಗಿದ್ದಾನೆ. ಆಪ್ತಕಾಮನವನು. ಕೃತ್ಯ ಕೃತ್ಯನು. ಗೋಕುಲದ ಗೊಲ್ಲತಿಯರಾದ ನಮ್ಮಿಂದ ಅಥವಾ ಇತರ ರಾಜಕುಮಾರಿಯರಿಂದ ಅವನಿಗೇನು ಆಗಬೇಕು ? ನಾವಿಲ್ಲದೆ ಅವನ ಯಾವ ಕಾರ್ಯ ಉಳಿದಿದೆ ? ॥ ೪೬ ॥ ನೋಡಿರಿ! ಪಿಂಗಳೆ ಎಂಬ ವೇಶ್ಯೆಯು – 'ಪ್ರಪಂಚದಲ್ಲಿ ಯಾವುದರ ಮೇಲೆಯೂ ಆಶೆಯನ್ನು ಇಟ್ಟುಕೊಳ್ಳದಿರುವುದೇ ಪರಮ ಸುಖವಾದುದು ಎಂದು ಎಷ್ಟು ಸರಿಯಾಗಿ ಹೇಳಿರುವಳು. ಇದನ್ನು ನಾವು ತಿಳಿದಿದ್ದರೂ ಭಗವಾನ್ ಶ್ರೀಕೃಷ್ಣನು ಮರಳಿ ಬರುವ ಆಸೆಯನ್ನು ಬಿಡುವುದರಲ್ಲಿ ಅಸಮರ್ಥರಾಗಿದ್ದೇವೆ. ಅವನ ಶುಭಾಗಮನದ ಆಸೆಯಿಂದಲೇ ನಾವು ಬದುಕಿದ್ದೇವಲ್ಲ. ॥ ೪೭ ॥

ಕ ಉತ್ಸಹೇತ ಸಂತ್ಯಕ್ತುಮುತ್ತಮಶ್ಲೋಕಸಂವಿದಮ್ ।
ಅನಿಚ್ಛತೋಽಪಿ ಯಸ್ಯ ಶ್ರೀರಂಗಾನ್ನ ಚ್ಯವತೇ ಕ್ವಚಿತ್
॥ ೪೮ ॥

ಸರಿಚ್ಛೈಲವನೋದ್ದೇಶಾ ಗಾವೋ ವೇಣುರವಾ ಇಮೇ ।
ಸಂಕರ್ಷಣಸಹಾಯೇನ ಕೃಷ್ಣೇನಾಚರಿತಾಃ ಪ್ರಭೋ
॥ ೪೯ ॥

ಪುನಃ ಪುನಃ ಸ್ಮಾರಯಂತಿ ನಂದಗೋಪಸುತಂ ಬತ ।
ಶ್ರೀನಿಕೇತೈಸ್ತತ್ಪದಕೈರ್ವಿಸ್ಮರ್ತುಂ ನೈವ ಶಕ್ನುಮಃ
॥ ೫೦ ॥

ಗತ್ಯಾ ಲಲಿತಯೋದಾರಹಾಸಲೀಲಾವಲೋಕನೈಃ ।
ಮಾಧ್ವ್ಯಾ ಗಿರಾ ಹೃತಧಿಯಃ ಕಥಂ ತಂ ವಿಸ್ಮರಾಮಹೇ
॥ ೫೧ ॥

ಹೇ ನಾಥ ಹೇ ರಮಾನಾಥ ವ್ರಜನಾಥಾರ್ತಿನಾಶನ ।
ಮಗ್ನಮುದ್ಧರ ಗೋವಿಂದ ಗೋಕುಲಂ ವೃಜಿನಾರ್ಣವಾತ್
॥ ೫೨ ॥

*ಶ್ರೀಶುಕ ಉವಾಚ*

ತತಸ್ತಾಃ ಕೃಷ್ಣಸಂದೇಶೈರ್ವ್ಯಪೇತವಿರಹಜ್ವರಾಃ ।
ಉದ್ಧವಂ ಪೂಜಯಾಂಚಕ್ರುರ್ಜ್ಞಾತ್ವಾಽಽತ್ಮಾನಮಧೋಕ್ಷಜಮ್
॥ ೫೩ ॥

ದೊಡ್ಡ-ದೊಡ್ಡ ಮಹಾತ್ಮರು ಸದಾಕಾಲ ಕೀರ್ತಿಸುವಂತಹ ನಮ್ಮ ಪ್ರಿಯಕರ ಶ್ಯಾಮಸುಂದರನು ನಮ್ಮೊಂದಿಗೆ ಏಕಾಂತದಲ್ಲಿ ಎಂತೆಂತಹ ಮಧುರವಾದ ಪ್ರೇಮದ ಮಾತುಗಳನ್ನಾಡಿರುವನು. ಅವನ್ನು ಹೇಗೆ ತಾನೆ ಮರೆಯಲು ಸಾಧ್ಯ? ಅವನಿಗೆ ಇಚ್ಛೆಯಿಲ್ಲದಿದ್ದರೂ ಲಕ್ಷ್ಮೀದೇವಿಯು ಸದಾಕಾಲ ಅವರ ಚರಣ ಕಮಲಗಳಿಗೆ ಅಂಟಿಕೊಂಡಂತೆ ಇರುತ್ತಾಳೆ. ಅವನ ವಕ್ಷಃಸ್ಥಳವನ್ನು ಕ್ಷಣಕಾಲವೂ ಬಿಟ್ಟಗಲುವುದೇ ಇಲ್ಲ. ॥ ೪೮ ॥ ಉದ್ಧವನೇ! ಅವನು ಜಲಕ್ರೀಡೆಯಾಡಿದ ಅದೋ ಈ ಯಮುನೆಯನ್ನು ನೋಡು. ಈ ಪರ್ವತವನ್ನು ನೋಡು, ಅದರ ಶಿಖರವನ್ನೇರಿ ಅವನು ಕೊಳಲನ್ನು ನುಡಿಸುತ್ತಿದ್ದನು. ಇದೇ ವನದಲ್ಲಿ ಅವನು ರಾತ್ರಿಯಲ್ಲಿ ರಾಸಕ್ರೀಡೆಯಾಡಿದುದು. ಅವನು ಮೇಯಿಸುತ್ತಿದ್ದ ಬೆಳಿಗ್ಗೆ ಸಾಯಂಕಾಲ ನಾವು ನೋಡುತ್ತಾ ಇರುವ ಈ ಗೋವುಗಳನ್ನು ನೋಡು. ಅವನು ತನ್ನ ಅಧರಕ್ಕೆ ಅಂಟಿಸಿಕೊಂಡು ನುಡಿಸುತ್ತಿದ್ದ ಆ ಮುರಳಿಯ ಮಧುರ ಗಾನವು ಇನ್ನೂ ನಮ್ಮ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದೆ. ಬಲರಾಮನೊಂದಿಗೆ ಇವೆಲ್ಲವನ್ನೂ ಅವನು ಸೇವಿಸುತ್ತಿದ್ದನು. ॥ ೪೯ ॥ ಉದ್ಧವನೇ! ಎಷ್ಟೆಂದು ಹೇಳಲಿ? ಇಲ್ಲಿಯ ಪ್ರತಿಯೊಂದು ಪ್ರದೇಶವೂ, ಪ್ರತಿಯೊಂದು ಧೂಳಿನ ಕಣವು ಲಕ್ಷ್ಮೀದೇವಿಗೆ ನೆಲೆಮನೆಯಾದ ಅವನ ಪರಮ ಸುಂದರ ಚರಣ ಚಿಹ್ನೆಗಳಿಂದ ಅಂಕಿತವಾಗಿವೆ. ಇವನ್ನು ನೋಡಿದಾಗಲೆಲ್ಲ, ಕೇಳಿದಾಗಲೆಲ್ಲ ಇವು ನಮ್ಮ ಪ್ರಿಯಕರ ಶ್ಯಾಮಸುಂದರ ನಂದನಂದನನನ್ನು ನಮ್ಮ ಕಣ್ಮುಂದೆ ತಂದು ನಿಲ್ಲಿಸುವುವು. ಉದ್ಧವಾ! ನಾವು ಇದನ್ನು ಹೇಗೆ ಮರೆಯಬಲ್ಲೆವು? ಸತ್ತರೂ ಮರೆಯಲಾರೆವು. ॥ ೫೦ ॥ ಉದ್ಧವನೇ! ನಮ್ಮ ಇನಿಯನ ಹಂಸದ ನಡಿಗೆಯಂತಹ ಸುಂದರ ನಡಿಗೆ, ಮನೋಹರವಾದ ಕಿರುನಗೆ, ಚೇತೋಹಾರಿಯಾದ ಕುಡಿನೋಟ, ಮಧುರಮಯ ಮಾತುಗಳು, ಎಲ್ಲಕ್ಕಿಂತ ಹೆಚ್ಚಾಗಿ ಕೊಳಲಿನ ಕರೆ - ಇವುಗಳಿಂದ ನಮ್ಮ ಮನಸ್ಸನ್ನೇ ಅಪಹರಿಸಿಬಿಟ್ಟಿರುವನು. ನಮ್ಮ ಮನಸ್ಸು ನಮ್ಮವಶದಲ್ಲಿಲ್ಲ; ಅವನಲ್ಲೇ ಸೇರಿಹೋಗಿದೆ. ಹಾಗಿರುವಾಗ ಅವನನ್ನು ಮರೆಯಲು ಸಾಧ್ಯವೇ? ॥ ೫೧ ॥ ನಮ್ಮೆಲ್ಲರಿಗೂ ಏಕೈಕಸ್ವಾಮಿಯಾಗಿರತಕ್ಕವನೇ! ಪ್ರಾಣನಾಥನೆ! ಲಕ್ಷ್ಮೀ ರಮಣನೇ! ಗೋಕುಲನಾಥನೇ! ತಂದೆ-ತಾಯಿಯರಿಂದಲೂ, ಸುಹೃದಯರಿಂದಲೂ, ನಮ್ಮಂತಹ ವಿರಹಿಣಿಯರಿಂದಲೂ, ನಿನಗೆ ಅತಿ ಪ್ರಿಯವಾದ ಗೋವುಗಳಿಂದಲೂ ಕೂಡಿದ ಗೋಕುಲವು ಈಗ ನಿನ್ನನ್ನು ಕಾಣದೆ ದುಃಖಸಾಗರದಲ್ಲಿ ಮುಳುಗಿದೆ. ಅದನ್ನು ರಕ್ಷಿಸು. ನಮ್ಮನ್ನು ಕಾಪಾಡು. ॥ ೫೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿದ್ರಾಜನೇ! ಭಗವಾನ್ ಶ್ರೀಕೃಷ್ಣನ ಪ್ರಿಯ ಸಂದೇಶವನ್ನು ಕೇಳಿದ ಗೋಪಿಯರ ವಿರಹವ್ಯಥೆಯು ಶಾಂತವಾಯಿತು. ಅವರು ಇಂದ್ರಿಯಾತೀತ ಭಗವಾನ್ ಶ್ರೀಕೃಷ್ಣನನ್ನು ತಮ್ಮ ಆತ್ಮಸ್ವರೂಪನೆಂದು ತಿಳಿದುಕೊಂಡರು. ಅತ್ಯಂತ ಪ್ರೇಮಾದರಗಳಿಂದ ಉದ್ಧವನನ್ನು ಸತ್ಕರಿಸತೊಡಗಿದರು. ॥ ೫೩ ॥

ಉವಾಸ ಕತಿಚಿನ್ಮಾಸಾನ್ ಗೋಪೀನಾಂ ವಿನುದನ್‌ಶುಚಃ ।
ಕೃಷ್ಣಲೀಲಾಕಥಾಂ ಗಾಯನ್ ರಮಯಾಮಾಸ ಗೋಕುಲಮ್
॥ ೫೪ ॥

ಯಾವಂತ್ಯಹಾನಿ ನಂದಸ್ಯ ವ್ರಜೇಽವಾತ್ಸೀತ್ಸ ಉದ್ಧವಃ ।
ವ್ರಜೌಕಸಾಂ ಕ್ಷಣಪ್ರಾಯಾಣ್ಯಾಸನ್ ಕೃಷ್ಣಸ್ಯ ವಾರ್ತಯಾ
॥ ೫೫ ॥

ಸರಿದ್ವನಗಿರಿದ್ರೋಣೀರ್ವೀಕ್ಷನ್ ಕುಸುಮಿತಾನ್ ದ್ರುಮಾನ್ ।
ಕೃಷ್ಣಂ ಸಂಸ್ಮಾರಯನ್ ರೇಮೇ ಹರಿದಾಸೋ ವ್ರಜೌಕಸಾಮ್
॥ ೫೬ ॥

ದೃಷ್ಟ್ವೈವಮಾದಿ ಗೋಪೀನಾಂ ಕೃಷ್ಣಾವೇಶಾತ್ಮವಿಕ್ಲವಮ್ ।
ಉದ್ಧವಃ ಪರಮಪ್ರೀತಸ್ತಾ ನಮಸ್ಯನ್ನಿದಂ ಜಗೌ
॥ ೫೭ ॥

ಏತಾಃ ಪರಂ ತನುಭೃತೋ ಭುವಿ ಗೋಪವಧ್ವೋ
ಗೋವಿಂದ ಏವ ನಿಖಿಲಾತ್ಮನಿ ರೂಢಭಾವಾಃ ।
ವಾಂಛಂತಿ ಯದ್ಭವಭಿಯೋ ಮುನಯೋ ವಯಂ ಚ
ಕಿಂ ಬ್ರಹ್ಮಜನ್ಮಭಿರನಂತ ಕಥಾರಸಸ್ಯ ॥ ೫೮ ॥

ಕ್ವೇಮಾಃ ಸ್ತ್ರಿಯೋ ವನಚರೀರ್ವ್ಯಭಿಚಾರದುಷ್ಟಾಃ
ಕೃಷ್ಣೇ ಕ್ವ ಚೈಷ ಪರಮಾತ್ಮನಿ ರೂಢಭಾವಃ ।
ನನ್ವೀಶ್ವರೋಽನುಭಜತೋಽವಿದುಷೋಽಪಿ ಸಾಕ್ಷಾ-
ಚ್ಛ್ರೇಯಸ್ತನೋತ್ಯಗದರಾಜ ಇವೋಪಯುಕ್ತಃ ॥ ೫೯ ॥

ನಾಯಂ ಶ್ರಿಯೋಽಂಗ ಉ ನಿತಾಂತರತೇಃ ಪ್ರಸಾದಃ
ಸ್ವರ್ಯೋಷಿತಾಂ ನಲಿನಗಂಧರುಚಾಂ ಕುತೋಽನ್ಯಾಃ ।

ಉದ್ಧವನು ಗೋಪಿಯರ ವಿರಹ ವ್ಯಥೆಯನ್ನು ಕಳೆಯಲು ಕೆಲವು ತಿಂಗಳು ಗೋಕುಲದಲ್ಲೇ ಇದ್ದುಬಿಟ್ಟನು. ಅವನು ಭಗವಂತನ ಅನಂತ ಲೀಲೆಗಳನ್ನು ಮತ್ತು ಅವನ ಮಾತುಗಳನ್ನು ತಿಳಿಸುತ್ತಾ ವ್ರಜವಾಸಿಗಳನ್ನು ಆನಂದಪಡಿಸುತ್ತಿದ್ದನು. ॥ ೫೪ ॥ ನಂದಗೋಕುಲದಲ್ಲಿ ಉದ್ಧವನು ಇರುವಷ್ಟು ದಿನವೂ ಭಗವಾನ್ ಶ್ರೀಕೃಷ್ಣನ ಲೀಲಾವಿನೋದದ ಚರ್ಚೆಯೇ ನಡೆಯುತ್ತಿದ್ದು ವ್ರಜವಾಸಿಗಳಿಗೆ ತಿಂಗಳುಗಳು ಒಂದು ಕ್ಷಣದಂತೆ ಭಾಸ ವಾಯಿತು. ॥ ೫೫ ॥ ಭಗವಂತನ ಪರಮ ಪ್ರೇಮಿ ಉದ್ಧವನು ಕೆಲವೊಮ್ಮೆ ಯಮುನಾತೀರಕ್ಕೆ ಹೋಗುತ್ತಾನೆ, ಕೆಲವೊಮ್ಮೆ ವೃಂದಾವನದಲ್ಲಿ ಸಂಚರಿಸುತ್ತಾನೆ, ಕೆಲವೊಮ್ಮೆ ಗೋವರ್ಧನದ ತಪ್ಪಲಿನಲ್ಲಿ ಓಡಾಡುವನು. ಕೆಲವೊಮ್ಮೆ ಬಣ್ಣ-ಬಣ್ಣದ ಹೂವು ಗಳಿಂದ ಕಂಗೊಳಿಸುವ ವೃಕ್ಷಗಳನ್ನು ನೋಡಿ ಮೈಮರೆಯುವನು. ಆಯಾ ಸ್ಥಳಗಳನ್ನು ತೋರಿಸುತ್ತಾ ಇಲ್ಲಿ ಶ್ರೀಕೃಷ್ಣನು ಯಾವ ಲೀಲೆಯನ್ನಾಡಿದನು ? ಎಂದು ವ್ರಜವಾಸಿಗಳಲ್ಲಿ ಕೇಳುತ್ತಾ ಭಗವಂತನ ಲೀಲೆಗಳಲ್ಲಿ ಅವರನ್ನು ತನ್ಮಯಗೊಳಿಸಿ ಬಿಡುತ್ತಿದ್ದನು. ॥ ೫೬ ॥

ಉದ್ಧವನು ವ್ರಜದಲ್ಲಿ ಇರುತ್ತಾ ಗೋಪಿಯರ ಇಂತಹ ಪ್ರೇಮ ವಿಹ್ವಲತೆಯನ್ನು ಹಾಗೂ ಬಹಳಷ್ಟು ಪ್ರೇಮ ಚೇಷ್ಟೆಗಳನ್ನು ನೋಡಿ ದನು. ಅವರಿಗೆ ಶ್ರೀಕೃಷ್ಣನಲ್ಲಿ ಇರುವ ಈ ಪ್ರಕಾರದ ತನ್ಮಯತೆ ಯನ್ನು ನೋಡಿ ಅವನು ಪ್ರೇಮಾನಂದದಲ್ಲಿ ಮುಳುಗಿಹೋಗಿ ಪ್ರೇಮಮೂರ್ತಿಗಳಾದ ಗೋಪಿಯರನ್ನು ನಮಸ್ಕರಿಸಿ ಈ ಪ್ರಕಾರ ಹಾಡತೊಡಗಿದನು. ॥ ೫೭ ॥ ಆಹಾ ! ''ಈ ಭೂಮಿಯಲ್ಲಿ ಕೇವಲ ಈ ಗೋಪಿಯರ ಶರೀರಧಾರಣೆಯೇ ಸಾರ್ಥಕ್ಯವನ್ನು ಹೊಂದಿದೆ. ಏಕೆಂದರೆ ಇವರು ಸರ್ವಾತ್ಮನಾದ ಭಗವಾನ್ ಶ್ರೀಕೃಷ್ಣನ ಪರಮಪ್ರೇಮಮಯ ದಿವ್ಯಭಾವದಲ್ಲಿ ನೆಲೆಸಿದ್ದಾರೆ. ಸಂಸಾರಕ್ಕೆ ಭಯಪಡುವ ಮುನಿಗಳು ಹಾಗೂ ಭಕ್ತರಾದ ನಾವು ಇದೇ ಸ್ಥಿತಿಯನ್ನು ಬಯಸುತ್ತೇವೆ. ಆದರೆ ಅಂತಹ ಅನುಪಮ ವಾದ ಮತ್ತು ರೂಢಮೂಲವಾದ ಪ್ರೇಮವು ಭಗವಂತನಲ್ಲಿ ನಮಗಿನ್ನೂ ಉಂಟಾಗಲಿಲ್ಲ. ಅನಂತನ ಕಥಾರಸವನ್ನು ನಿರಂತರ ವಾಗಿ ಪಾನಮಾಡುವ ಪ್ರೇಮಿಭಕ್ತರಿಗೆ ಬ್ರಾಹ್ಮಣರ ಜನ್ಮದಿಂದಾಗಲೀ, ಬ್ರಹ್ಮನ ಜನ್ಮದಿಂದಾಗಲೀ, ಏನಾಗಬೇಕಾಗಿದೆ ? ॥ ೫೮ ॥ ವನಚರಿಯರೂ, ಆಚಾರ, ಜ್ಞಾನಹೀನರೂ ಮತ್ತು ಜಾತಿಯಿಂದ ಹೀನರೂ ಆದ ಈ ಗೊಲ್ಲತಿಯರೆಲ್ಲಿ! ಪರಮಾತ್ಮನಾದ ಶ್ರೀಕೃಷ್ಣ ನಲ್ಲಿ ಅವರಿಗಿರುವ ಗಾಢವಾದ ಪ್ರೇಮಭಾವವೆಲ್ಲಿ! ಆಹಾ! ಧನ್ಯ! ಧನ್ಯ! ಅಮೃತವನ್ನು ತಿಳಿಯದೆ ಕುಡಿದರೂ ಅದು ಅಮರನನ್ನಾಗಿಸುವಂತೆ, ದಯಾಮಯನಾದ ಭಗವಂತನು ತನ್ನನ್ನೇ ಅನನ್ಯ ಶರಣಾಗಿ ಭಜಿಸುವ ಮೂಢಜನರಿಗೂ ಶ್ರೇಯಸ್ಸನ್ನುಂಟು ಮಾಡುವನು. ॥ ೫೯ ॥ ಭಗವಾನ್ ಶ್ರೀಕೃಷ್ಣನು ರಾಸೋತ್ಸವದ ಸಂದರ್ಭದಲ್ಲಿ ಗೋಕುಲದ ಗೊಲ್ಲತಿಯರ ಕಂಬುಕಂಠವನ್ನು ನೀಳವಾದ ತೋಳುಗಳಿಂದ ಅಪ್ಪಿಕೊಂಡು ಗೋಪಿಯರಿಗೆ ಪರ ಮಾನುಗ್ರಹವನ್ನು ಕರುಣಿಸಿದ ಭಗವಂತನ ಇಂತಹ ದಿವ್ಯಾ ಲಿಂಗನದ ವರಪ್ರಸಾದವು ಅವನ ವಕ್ಷಸ್ಥಳದಲ್ಲಿಯೇ ನಿರಂತರವಾಗಿ ವಾಸಿಸುತ್ತಿರುವ ಏಕಾಂತ ಪ್ರೇಮಿಯಾದ

ರಾಸೋತ್ಸವೇಽಸ್ಯ ಭುಜದಂಡಗೃಹೀತಕಂಠ-
ಲಬ್ಧಾಶಿಷಾಂ ಯ ಉದಗಾದ್ವ್ರಜವಲ್ಲವೀನಾಮ್ ॥ ೬೦ ॥

ಆಸಾಮಹೋ ಚರಣರೇಣುಜುಷಾಮಹಂ ಸ್ಯಾಂ
ವೃಂದಾವನೇ ಕಿಮಪಿ ಗುಲ್ಮಲತೌಷಧೀನಾಮ್ ।
ಯಾ ದುಸ್ತ್ಯಜಂ ಸ್ವಜನಮಾರ್ಯಪಥಂ ಚ ಹಿತ್ವಾ
ಭೇಜುರ್ಮುಕುಂದಪದವೀಂ ಶ್ರುತಿಭಿರ್ವಿಮೃಗ್ಯಾಮ್ ॥ ೬೧ ॥

ಯಾ ವೈ ಶ್ರಿಯಾರ್ಚಿತಮಜಾದಿಭಿರಾಪ್ತಕಾಮೈ-
ರ್ಯೋಗೇಶ್ವರೈರಪಿ ಯದಾತ್ಮನಿ ರಾಸಗೋಷ್ಠ್ಯಾಮ್ ।
ಕೃಷ್ಣಸ್ಯ ತದ್ಭಗವತಶ್ಚರಣಾರವಿಂದಂ
ನ್ಯಸ್ತಂ ಸ್ತನೇಷು ವಿಜಹುಃ ಪರಿರಭ್ಯ ತಾಪಮ್ ॥ ೬೨ ॥

ವಂದೇ ನಂದವ್ರಜಸ್ತ್ರೀಣಾಂ ಪಾದರೇಣುಮಭೀಕ್ಷ್ಣಶಃ ।
ಯಾಸಾಂ ಹರಿಕಥೋದ್ಗೀತಂ ಪುನಾತಿ ಭುವನತ್ರಯಮ್ ॥ ೬೩ ॥

*ಶ್ರೀಶುಕ ಉವಾಚ*

ಅಥ ಗೋಪೀರನುಜ್ಞಾಪ್ಯ ಯಶೋದಾಂ ನಂದಮೇವ ಚ ।
ಗೋಪಾನಾಮಂತ್ರ್ಯ ದಾಶಾರ್ಹೋ ಯಾಸ್ಯನ್ನಾರುರುಹೇ ರಥಮ್ ॥ ೬೪ ॥

ತಂ ನಿರ್ಗತಂ ಸಮಾಸಾದ್ಯ ನಾನೋಪಾಯನಪಾಣಯಃ ।
ನಂದಾದಯೋಽನುರಾಗೇಣ ಪ್ರಾವೋಚನ್ನಶ್ರುಲೋಚನಾಃ ॥ ೬೫ ॥

ಮನಸೋ ವೃತ್ತಯೋ ನಃ ಸ್ಯುಃ ಕೃಷ್ಣಪಾದಾಂಬುಜಾಶ್ರಯಾಃ ।
ವಾಚೋಽಭಿಧಾಯಿನೀರ್ನಾಮ್ನಾಂ ಕಾಯಸ್ತತ್ಪ್ರಹ್ವಣಾದಿಷು ॥ ೬೬ ॥

ಕರ್ಮಭಿರ್ಭ್ರಾಮ್ಯಮಾಣಾನಾಂ ಯತ್ರ ಕ್ವಾಪೀಶ್ವರೇಚ್ಛಯಾ ।
ಮಂಗಲಾಚರಿತೈರ್ದಾನೈ ರತಿರ್ನಃ ಕೃಷ್ಣ ಈಶ್ವರೇ ॥ ೬೭ ॥

ಲಕ್ಷ್ಮೀದೇವಿಗಾಗಲೀ, ಪದ್ಮಗಂಧೆಯರೂ, ಪದ್ಮವರ್ಣೆಯರೂ ಆದ ದೇವಾಂಗನೆಯರಿಗೂ ಲಭಿಸಲಿಲ್ಲ. ಹೀಗಿರುವಾಗ ಉಳಿದ ಸಾಧಾರಣ ಸ್ತ್ರೀಯರಿಗೆ ಇಂತಹ ಪರಮಾನುಗ್ರಹವು ಹೇಗೆ ತಾನೇ ಲಭಿಸೀತು ? ॥ ೬೦ ॥ ಪರಿತ್ಯಜಿಸಲಾಗದ ಪತಿ - ಸುತ - ಬಂಧುಗಳನ್ನು, ಪಾತಿವ್ರತ್ಯವೇ ಮೊದಲಾದ ಆರ್ಯಧರ್ಮಗಳನ್ನು ಪರಿತ್ಯಜಿಸಿ, ಶ್ರುತಿ-ಸ್ಮೃತಿಗಳಿಂದ ಹುಡುಕಲ್ಪಡುವ ಮುಕುಂದನ ಪರಮಪದವನ್ನು ಸೇರಿಬಿಟ್ಟಿರುವ ಗೋಪಿಯರ ಪಾದಧೂಳಿಯನ್ನು ಸತತವಾಗಿ ಸೇವಿಸುವ ವೃಂದಾವನದ ಯಾವುದಾದರೂ ಪೊದೆಗಳ ಅಥವಾ ಮರ-ಗಿಡ-ಬಳ್ಳಿಗಳ ರೂಪದಲ್ಲಿ ನಾನು ಹುಟ್ಟುವಂತಾಗಲೀ. ಭಗವಂತನ ಪರಮಭಕ್ತೆಯರಾದ ಗೋಪಿಯರ ಪಾದಧೂಳಿಯ ಸತತ ಸೇವನೆಯಿಂದಲಾದರೂ ನಾನು ಧನ್ಯನಾಗಿ ಹೋಗುವೆನು. ॥ ೬೧ ॥ ಭಗವತಿಯಾದ ಲಕ್ಷ್ಮಿಯಿಂದ ಅರ್ಚಿಸಲ್ಪಡುವ ಯಾವ ಪಾದಾರವಿಂದಗಳನ್ನು ಪೂರ್ಣಕಾಮರಾದ ಬ್ರಹ್ಮಾದಿಗಳೂ ಮತ್ತು ಯೋಗೇಶ್ವರರೂ ಕೇವಲ ತಮ್ಮ ಹೃದಯದಲ್ಲಿ ಧ್ಯಾನಮಾಡುವರೋ - ಅಂತಹ ದಿವ್ಯವಾದ ಚರಣಾರವಿಂದಗಳನ್ನು ರಾಸಕ್ರೀಡೆಯ ಸಮಯದಲ್ಲಿ ಗೋಪಿಯರು ತಮ್ಮ ವಕ್ಷಸ್ಥಳದಲ್ಲಿರಿಸಿಕೊಂಡು, ಅದನ್ನೇ ಆಲಿಂಗಿಸಿಕೊಂಡು ವಿರಹತಾಪವನ್ನು ಕಳೆದುಕೊಂಡರು. ॥ ೬೨ ॥ ನಂದಗೋಕುಲದಲ್ಲಿರುವ ಗೋಪಿಯರ ಪಾದಧೂಳಿಗೆ ನಾನು ಪುನಃ ಪುನಃ ನಮಸ್ಕರಿಸುತ್ತೇನೆ. ಅದನ್ನು ಶಿರದಲ್ಲಿ ಧರಿಸಿಕೊಳ್ಳುತ್ತೇನೆ. ಆ ಗೋಪಿಯರು ತನ್ಮಯರಾಗಿ ಹಾಡುವ ಶ್ರೀಕೃಷ್ಣನ ಲೀಲಾ ಪ್ರಸಂಗದ ಗೀತೆಗಳು ಮೂರು ಲೋಕಗಳನ್ನು ಪಾವನಗೊಳಿಸುವಂತಹುದು. ॥ ೬೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಉದ್ಧವನು ನಂದಗೋಕುಲದಲ್ಲಿ ಅನೇಕ ತಿಂಗಳಿದ್ದು ಮಥುರೆಗೆ ಹೋಗಲು ನಂದ-ಯಶೋದೆಯರ, ಗೋಪಿಯರ, ಗೋಪಾಲಕರ ಅನುಜ್ಞೆಯನ್ನು ಪಡೆದು ರಥವನ್ನೇರಿದನು.॥ ೬೪ ॥ ಪ್ರಯಾಣ ಹೊರಟ ಉದ್ಧವನ ರಥದ ಬಳಿಗೆ ನಂದಗೋಪನೇ ಮೊದಲಾದ ಗೋಪಾಲರು ಹಲವಾರು ಬಗೆಯ ಉಪಾಯನಗಳನ್ನು (ಕಾಣಿಕೆಗಳನ್ನು) ತೆಗೆದುಕೊಂಡು ಬಂದರು. ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ತುಂಬಿಕೊಂಡು ಪ್ರೇಮಪುರಸ್ಸರವಾಗಿ ಹೀಗೆ ಹೇಳಿದರು. ॥ ೬೫ ॥ ಉದ್ಧವನೇ! ನಮ್ಮ ಮನಸ್ಸಿನ ಸಕಲ ವೃತ್ತಿಗಳು, ಪ್ರತಿಯೊಂದು ಸಂಕಲ್ಪವೂ ಶ್ರೀಕೃಷ್ಣನ ಚರಣಗಳನ್ನೇ ಆಶ್ರಯಿಸಿರಲಿ. ನಮ್ಮ ವಾಣಿಯು ನಿತ್ಯ ನಿರಂತರವಾಗಿ ಅವನ ಶುಭನಾಮಗಳನ್ನು ಹಾಡುತ್ತಿರಲಿ. ನಮ್ಮ ಶರೀರವು ಅವನಿಗೆ ನಮಸ್ಕರಿಸಲು ಮತ್ತು ಅವನ ಸೇವೆ ಮಾಡುವುದಕ್ಕೆ ಮೀಸಲಾಗಿ ಇರಲಿ. ॥ ೬೬ ॥ ಪಾಪ-ಪುಣ್ಯಗಳ ಫಲವಾಗಿ ಪರಮಾತ್ಮನ ಇಚ್ಛೆಯಿಂದ ನಾವು ಯಾವುದೇ ಯೋನಿಯಲ್ಲಿ ಜನಿಸಿದ್ದರೂ ನಾವು ಶುಭ ಆಚರಣೆಯನ್ನೇ ಮಾಡುತ್ತಾ, ದಾನಾದಿಗಳನ್ನು ಮಾಡುತ್ತಾ ಇರುವಂತಾಗಲಿ. ಅದರ ಫಲವಾಗಿ ಸರ್ವೇಶ್ವರನಾದ ಶ್ರೀಕೃಷ್ಣನಲ್ಲಿಯೇ ನಮಗೆ ಅಚಲವಾದ ಭಕ್ತಿಯುಂಟಾಗಲಿ. ॥ ೬೭ ॥

ಏವಂ ಸಭಾಜಿತೋ ಗೋಪೈಃ ಕೃಷ್ಣಭಕ್ತ್ಯಾ ನರಾಧಿಪ ।
ಉದ್ಧವಃ ಪುನರಾಗಚ್ಛನ್ಮಥುರಾಂ ಕೃಷ್ಣಪಾಲಿತಾಮ್
॥ ೬೮ ॥

ಪರೀಕ್ಷಿತನೇ ! ಹೀಗೆ ಉದ್ಧವನು ಶ್ರೀಕೃಷ್ಣನ ಪರಮಭಕ್ತನೆಂಬ ಕಾರಣದಿಂದ ನಂದನಿಂದಲೂ, ಗೋಪಾಲರಿಂದಲೂ ಸಮ್ಮಾನಿತನಾಗಿ ಶ್ರೀಕೃಷ್ಣನಿಂದ ಪರಿಪಾಲಿಸುತ್ತಿರುವ ಮಥುರಾಪಟ್ಟಣಕ್ಕೆ ಹಿಂದಿರುಗಿದನು. ॥ ೬೮ ॥ ಮಥುರೆಗೆ ಸೇರಿದ ಬಳಿಕ ಅವನು ಭಗವಾನ್ ಶ್ರೀಕೃಷ್ಣನನ್ನು ಕಂಡು, ನಮಸ್ಕರಿಸಿಕೊಂಡು ಗೋಕುಲವಾಸಿಗಳ ಅತಿಶಯವಾದ ಭಕ್ತಿಯನ್ನು ತಾನು ನೋಡಿದಂತೆ ವಿವರಿಸಿ ಹೇಳಿದನು. ನಂದರಾಜನೂ, ಗೋಪಾಲಕರೂ ಕಳಿಸಿದ ಕಾಣಿಕೆಗಳನ್ನು ವಸುದೇವನಿಗೂ, ಶ್ರೀಕೃಷ್ಣ-ಬಲರಾಮರಿಗೂ ಮತ್ತು ರಾಜನಾದ ಉಗ್ರಸೇನನಿಗೂ ಸಮರ್ಪಿಸಿದನು. ॥ ೬೯ ॥

ಕೃಷ್ಣಾಯ ಪ್ರಣಿಪತ್ಯಾಹ ಭಕ್ತ್ಯುದ್ರೇಕಂ ವ್ರಜೌಕಸಾಮ್ ।
ವಸುದೇವಾಯ ರಾಮಾಯ ರಾಜ್ಞೇ ಚೋಪಾಯನಾನ್ಯದಾತ್
॥ ೬೯ ॥

ನಲವತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೪೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ಉದ್ಧವಪ್ರತಿಯಾನೇ ಸಪ್ತಚತ್ವಾರಿಂಶೋಽಧ್ಯಾಯಃ ॥ ೪೭ ॥

# ನಲವತ್ತೆಂಟನೆಯ ಅಧ್ಯಾಯ

## ಭಗವಂತನು ಕುಬ್ಜೆಯ ಮತ್ತು ಅಕ್ರೂರನ ಮನೆಗಳಿಗೆ ಹೋದುದು

*ಶ್ರೀಶುಕ ಉವಾಚ*

ಅಥ ವಿಜ್ಞಾಯ ಭಗವಾನ್ ಸರ್ವಾತ್ಮಾ ಸರ್ವದರ್ಶನಃ ।
ಸೈರಂಧ್ರ್ಯಾಃ ಕಾಮತಪ್ತಾಯಾಃ ಪ್ರಿಯಮಿಚ್ಛನ್ ಗೃಹಂ ಯಯೌ
॥ ೧ ॥

ಮಹಾರ್ಹೋಪಸ್ಕರೈರಾಢ್ಯಂ ಕಾಮೋಪಾಯೋಪಬೃಂಹಿತಮ್ ।
ಮುಕ್ತಾದಾಮಪತಾಕಾಭಿರ್ವಿತಾನಶಯನಾಸನೈಃ ।
ಧೂಪೈಃ ಸುರಭಿಭಿರ್ದೀಪೈಃ ಸ್ರಗ್ಗಂಧೈರಪಿ ಮಂಡಿತಮ್
॥ ೨ ॥

ಗೃಹಂ ತಮಾಯಾಂತಮವೇಕ್ಷ್ಯ ಸಾಽಽಸನಾತ್
ಸದ್ಯಃ ಸಮುತ್ಥಾಯ ಹಿ ಜಾತಸಂಭ್ರಮಾ ।
ಯಥೋಪಸಂಗಮ್ಯ ಸಖೀಭಿರಚ್ಯುತಂ
ಸಭಾಜಯಾಮಾಸ ಸದಾಸನಾದಿಭಿಃ ॥ ೩ ॥

ತಥೋದ್ಧವಃ ಸಾಧು ತಯಾಭಿಪೂಜಿತೋ
ನ್ಯಷೀದದುರ್ವ್ಯಾಮಭಿಮೃಶ್ಯ ಚಾಸನಮ್ ।
ಕೃಷ್ಣೋಽಪಿ ತೂರ್ಣಂ ಶಯನಂ ಮಹಾಧನಂ
ವಿವೇಶ ಲೋಕಾಚರಿತಾನ್ಯನುವ್ರತಃ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ ! ಅನಂತರ ಸಮಸ್ತರ ಆತ್ಮವಾಗಿರುವ ಹಾಗೂ ಸರ್ವದ್ರಷ್ಟಾರನಾದ ಭಗವಾನ್ ಶ್ರೀಕೃಷ್ಣನು ತನ್ನನ್ನು ಸೇರಬೇಕೆಂಬ ಆಸೆಯನ್ನಿಟ್ಟುಕೊಂಡು ಪರಿತಪಿಸುತ್ತಿದ್ದ ಕುಬ್ಜೆಯ ಮೇಲೆ ಅನುಗ್ರಹ ತೋರಲು ಅವಳ ಮನೆಗೆ ಹೋದನು. ॥ ೧ ॥ ಕುಬ್ಜೆಯ ಮನೆಯು ಸರ್ವಸಂಪತ್ಸಮೃದ್ಧವಾಗಿತ್ತು. ಆ ಮನೆಯು ಶೃಂಗಾರ ರಸವನ್ನು ಉದ್ದೀಪನಗೊಳಿಸುವಂತ ಬಹಳಷ್ಟು ಸಾಧನ-ಸಾಮಗ್ರಿಗಳಿಂದ ತುಂಬಿತ್ತು. ಆಕೆಯ ಆ ಭವನವು ಮುತ್ತಿನ ಹಾರಗಳಿಂದಲೂ, ಪತಾಕೆಗಳಿಂದಲೂ, ಮೇಲ್ಕಟ್ಟುಗಳಿಂದಲೂ, ಹಂಸತೂಲಿಕಾತಲ್ಪಗಳಿಂದಲೂ, ಸುವರ್ಣಮಯ ಆಸನಗಳಿಂದಲೂ ಸುಗಂಧ ಯುಕ್ತವಾದ ಧೂಪಗಳಿಂದಲೂ, ದೀಪಗಳಿಂದಲೂ, ಮಾಲೆಗಳಿಂದಲೂ, ಸುಗಂಧ ಚಂದನಗಳಿಂದಲೂ ಸಮಲಂಕೃತವಾಗಿತ್ತು. ॥ ೨ ॥ ತನ್ನ ಸ್ವಾಮಿಯು ಮನೆಯೊಳಗೆ ಬಂದುದನ್ನು ನೋಡಿ ಕುಬ್ಜೆಯು ಆಸನದಿಂದ ಮೇಲೆದ್ದು ಅತ್ಯಂತ ಸಂಭ್ರಮದಿಂದ ತನ್ನ ಸಖಿಯರೊಡನೆ ಶ್ರೀಕೃಷ್ಣನನ್ನು ಆದರದಿಂದ ಸ್ವಾಗತಿಸಿ, ಸುಖಾಸನವನ್ನಿತ್ತು, ಯಥಾವಿಧಿಯಾಗಿ ಪೂಜಿಸಿದಳು. ॥ ೩ ॥ ಶ್ರೀಕೃಷ್ಣನನ್ನು ಸತ್ಕರಿಸಿದಂತೆಯೇ ಅವನ ಭಕ್ತನಾದ ಉದ್ಧವನನ್ನು ಸತ್ಕರಿಸಿ, ಕುಳಿತುಕೊಳ್ಳಲು ದಿವ್ಯಾಸನವನ್ನಿತ್ತಳು. ಆದರೆ ಉದ್ಧವನು ಸ್ವಾಮಿಯ ಜೊತೆಯಲ್ಲಿ ಕುಳಿತುಕೊಳ್ಳಲು ಇಷ್ಟಪಡದೆ ಆಕೆಯಿತ್ತ ಆಸನವನ್ನು ಕೈಯಿಂದ ಮುಟ್ಟಿ ನೆಲದ ಮೇಲೆ ಕುಳಿತನು. ಲೋಕಾಚಾರಗಳನ್ನು ಅನುಸರಿಸುವ ಶ್ರೀಕೃಷ್ಣನು ಬಹುಮೂಲ್ಯವಾದ ಹಾಸಿಗೆಯ ಮೇಲೆ ಕುಳಿತನು. ॥ ೪ ॥

ಸಾ ಮಜ್ಜನಾಲೇಪದುಕೂಲಭೂಷಣ-
ಸ್ರಗ್ಗಂಧತಾಂಬೂಲಸುಧಾಸವಾದಿಭಿಃ ।
ಪ್ರಸಾಧಿತಾತ್ಮೋಪಸಸಾರ ಮಾಧವಂ
ಸವ್ರೀಡಲೀಲೋತ್ಸ್ಮಿತವಿಭ್ರಮೇಕ್ಷಿತೈಃ ॥ ೫ ॥

ಆಹೂಯ ಕಾಂತಾಂ ನವಸಂಗಮಹ್ರಿಯಾ
ವಿಶಂಕಿತಾಂ ಕಂಕಣಭೂಷಿತೇ ಕರೇ ।
ಪ್ರಗೃಹ್ಯ ಶಯ್ಯಾಮಧಿವೇಶ್ಯ ರಾಮಯಾ
ರೇಮೇಽನುಲೇಪಾರ್ಪಣಪುಣ್ಯಲೇಶಯಾ ॥ ೬ ॥

ಸಾನಂಗತಪ್ತಕುಚಯೋರುರಸಸ್ತಥಾಕ್ಷ್ಣೋ-
ರ್ಜಿಘ್ರಂತ್ಯನಂತಚರಣೇನ ರುಜೋ ಮೃಜಂತೀ ।
ದೋರ್ಭ್ಯಾಂ ಸ್ತನಾಂತರಗತಂ ಪರಿರಭ್ಯ ಕಾಂತ-
ಮಾನಂದಮೂರ್ತಿಮಜಹಾದತಿದೀರ್ಘತಾಪಮ್ ॥ ೭ ॥

ಸೈವಂ ಕೈವಲ್ಯನಾಥಂ ತಂ ಪ್ರಾಪ್ಯ ದುಷ್ಪ್ರಾಪಮೀಶ್ವರಮ್ ।
ಅಂಗರಾಗಾರ್ಪಣೇನಾಹೋ ದುರ್ಭಗೇದಮಯಾಚತ ॥ ೮ ॥

ಆಹೋಷ್ಯತಾಮಿಹ ಪ್ರೇಷ್ಠ ದಿನಾನಿ ಕತಿಚಿನ್ಮಯಾ ।
ರಮಸ್ವ ನೋತ್ಸಹೇ ತ್ಯಕ್ತುಂ ಸಂಗಂ ತೇಽಂಬುರುಹೇಕ್ಷಣ ॥ ೯ ॥

ತಸ್ಯೈ ಕಾಮವರಂ ದತ್ತ್ವಾ ಮಾನಯಿತ್ವಾ ಚ ಮಾನದಃ ।
ಸಹೋದ್ಧವೇನ ಸರ್ವೇಶಃ ಸ್ವಧಾಮಾಗಮದರ್ಚಿತಮ್ ॥ ೧೦ ॥

ದುರಾರಾಧ್ಯಂ ಸಮಾರಾಧ್ಯ ವಿಷ್ಣುಂ ಸರ್ವೇಶ್ವರೇಶ್ವರಮ್ ।
ಯೋ ವೃಣೀತೇ ಮನೋಗ್ರಾಹ್ಯಮಸತ್ತ್ವಾತ್ ಕುಮನೀಷ್ಯಸೌ ॥ ೧೧ ॥

ಅಕ್ರೂರಭವನಂ ಕೃಷ್ಣಃ ಸಹರಾಮೋದ್ಧವಃ ಪ್ರಭುಃ ।
ಕಿಂಚಿಚ್ಚಿಕೀರ್ಷಯನ್ ಪ್ರಾಗಾದಕ್ರೂರಪ್ರಿಯಕಾಮ್ಯಯಾ ॥ ೧೨ ॥

ಅನಂತರ ಕುಬ್ಜೆಯು ಮಂಗಳಸ್ನಾನವನ್ನು ಮಾಡಿ, ಅಂಗರಾಗವನ್ನು ಲೇಪಿಸಿಕೊಂಡು, ದಿವ್ಯವಾದ ವಸ್ತ್ರಾಭೂಷಣಗಳಿಂದ ಸಮಲಂಕೃತೆಯಾಗಿ, ಗಂಧವನ್ನು ಪೂಸಿಕೊಂಡು, ಹೂಮುಡಿದುಕೊಂಡು, ಆಸವವನ್ನು ಕುಡಿದು, ತಾಂಬೂಲವನ್ನು ಸೇವಿಸಿ ಸೌಂದರ್ಯದ ಖನಿಯಂತಾಗಿ ನಾಚಿಕೆಯಿಂದ ಕೂಡಿದ ಮಂದಹಾಸದಿಂದಲೂ, ಹಾವ-ಭಾವಗಳಿಂದಲೂ ಭಗವಂತನನ್ನು ಕಡೆಗಣ್ಣನೋಟದಿಂದ ನೋಡುತ್ತಾ ಅವನ ಬಳಿಗೆ ಸಾರಿದಳು. ॥ ೫ ॥ ಕುಬ್ಜೆಯು ಹೊಸದಾಗಿ ಸೇರುವಿಕೆಯಿಂದ ನಾಚಿಕೊಂಡಳು. ಸಂಕೋಚದಿಂದ ಹಿಂಜರಿಯುತ್ತಿದ್ದ ಆಕೆಯನ್ನು ಶ್ರೀಕೃಷ್ಣನು ಬಳಿಗೆ ಕರೆದು ಬಳೆಗಳಿಂದ ಭೂಷಿತವಾದ ಅವಳ ಕೈಗಳನ್ನು ಹಿಡಿದುಕೊಂಡು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ಪರೀಕ್ಷಿತನೇ! ಕುಬ್ಜೆಯು ಈ ಜನ್ಮದಲ್ಲಿ ಭಗವಂತನಿಗೆ ಕೇವಲ ಅಂಗರಾಗವನ್ನು ಅರ್ಪಿಸಿದ್ದಳು. ಆ ಒಂದೇ ಶುಭಕರ್ಮದಿಂದ ಆಕೆಗೆ ಇಂತಹ ಅನುಪಮವಾದ ಅವಕಾಶದೊರೆಯಿತು. ॥ ೬ ॥ ಕುಬ್ಜೆಯು ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳನ್ನು ಕಾಮತಪ್ತವಾಗಿದ್ದ ವಕ್ಷಃಸ್ಥಳದ ಮೇಲೆ ಇಟ್ಟುಗೊಂಡು ಕಣ್ಣಿಗೊತ್ತಿಕೊಂಡು ಆ ದಿವ್ಯ ಚರಣಗಳ ಸುಗಂಧವನ್ನು ಆಘ್ರಾಣಿಸುತ್ತಾ ಹೃದಯದ ಆಧಿ-ವ್ಯಾಧಿಗಳೆಲ್ಲವನ್ನು ನಿವಾರಿಸಿಕೊಂಡಳು. ಹೀಗೆ ಭಗವಂತನ ಸಾನ್ನಿಧ್ಯವನ್ನು ಪಡೆದು ಆನಂದಸಾಗರದಲ್ಲಿ ಮುಳುಗಿ ಹೋದಳು. ॥೭॥ ಶ್ರೀಕೃಷ್ಣನು ಮೋಕ್ಷಕ್ಕೆ ಸ್ವಾಮಿಯು. ಬೇಡಿದವರಿಗೆ ಮೋಕ್ಷವನ್ನೀಯಲು ಸಮರ್ಥನು. ಸುಲಭವಾಗಿ ಸಿಕ್ಕತಕ್ಕವನಲ್ಲ. ಅಂತಹವನನ್ನು ಕೇವಲ ಅಂಗರಾಗ ಸಮರ್ಪಣದಿಂದ ಕುಬ್ಜೆಯು ಪಡೆದುಕೊಂಡಿದ್ದಳು. ಆದರೆ ಆ ದುರ್ಭಾಗ್ಯಳಾದ ಸೈರಂಧ್ರಿಯು ವ್ರಜದ ಗೋಪಿಕೆಯರಂತೆ ಸೇವೆಯನ್ನು ಬೇಡಿಕೊಳ್ಳದೆ ಹೀಗೆ ಬೇಡಿದಳು. ॥ ೮ ॥ ಪ್ರಿಯತಮನೇ! ನೀನು ಕೆಲವುದಿನ ಇಲ್ಲೇ ಇದ್ದು ನನ್ನೊಡನೆ ರಮಿಸುತ್ತಿರು. ಕಮಲಾಕ್ಷನೇ! ನಿನ್ನ ಸಂಗವನ್ನು ನನ್ನಿಂದ ಬಿಟ್ಟಿರಲಾಗುವುದಿಲ್ಲ. ॥ ೯ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸಮಸ್ತರಿಗೂ ಮಾನದನೂ, ಸರ್ವೇಶ್ವರನೂ ಆಗಿರುವವನು ಆಕೆಯು ಅಪೇಕ್ಷಿಸಿದ ವರವನ್ನಿತ್ತು, ಆಕೆಯಿಂದ ಪೂಜೆಯನ್ನು ಕೈಗೊಂಡು ತನ್ನ ಪ್ರಿಯಭಕ್ತನಾದ ಉದ್ಧವನೊಂದಿಗೆ ತನ್ನ ಅರಮನೆಗೆ ಹಿಂದಿರುಗಿದನು. ॥ ೧೦ ॥ ರಾಜನೇ! ಭಗವಂತನು ಬ್ರಹ್ಮೇಂದ್ರಾದಿ ಸಮಸ್ತ ಈಶ್ವರರಿಗೂ ಈಶ್ವರನಾಗಿರುವನು. ಅವನನ್ನು ಒಲಿಸಿಕೊಳ್ಳುವುದು ಜೀವಿಗಳಿಗೆ ಸುಲಭವಲ್ಲ. ಅವನನ್ನು ಒಲಿಸಿಕೊಂಡು ಅವನಲ್ಲಿ ವಿಷಯ-ಸುಖವನ್ನು ಬೇಡಿದರೆ ಅವನು ನಿಶ್ಚಯವಾಗಿಯೂ ದುರ್ಬುದ್ಧಿಯುವನೇ ಸರಿ. ಏಕೆಂದರೆ, ವಾಸ್ತವವಾಗಿ ವಿಷಯ-ಸುಖಗಳು ಅತ್ಯಂತ ತುಚ್ಛವಾಗಿದೆ. ಅದಕ್ಕೆ ಯಾವ ಬೆಲೆಯೂ ಇಲ್ಲ. ॥ ೧೧ ॥

ಕೆಲವು ದಿನ ಕಳೆದ ಬಳಿಕ ಒಂದು ದಿನ ಪ್ರಭುವಾದ ಶ್ರೀಕೃಷ್ಣನು ಬಲರಾಮ ಮತ್ತು ಉದ್ಧವರೊಂದಿಗೆ ಅಕ್ರೂರನ ಅಭಿಲಾಷೆಯನ್ನು ಪೂರ್ಣಗೊಳಿಸಲು ಹಾಗೂ ಅವನಿಂದ ಒಂದು ಕಾರ್ಯವನ್ನು ಮಾಡಿಸಿಕೊಳ್ಳಲು ಅವನ ಮನೆಗೆ ಹೋದನು. ॥ ೧೨ ॥

ಸ ತಾನ್ ನರವರಶ್ರೇಷ್ಠಾನಾರಾದ್ವೀಕ್ಷ್ಯ ಸ್ವಬಾಂಧವಾನ್ ।
ಪ್ರತ್ಯುತ್ಥಾಯ ಪ್ರಮುದಿತಃ ಪರಿಷ್ವಜ್ಯಾಭ್ಯನಂದತ
॥ ೧೩. ॥

ನನಾಮ ಕೃಷ್ಣಂ ರಾಮಂ ಚ ಸ ತೈರಪ್ಯಭಿವಾದಿತಃ ।
ಪೂಜಯಾಮಾಸ ವಿಧಿವತ್ ಕೃತಾಸನಪರಿಗ್ರಹಾನ್
॥ ೧೪ ॥

ಪಾದಾವನೇಜನೀರಾಪೋ ಧಾರಯನ್‌ಶಿರಸಾ ನೃಪ ।
ಅರ್ಹಣೇನಾಂಬರೈರ್ದಿವ್ಯೈರ್ಗಂಧಸ್ರಗ್ಭೂಷಣೋತ್ತಮೈಃ
॥ ೧೫ ॥

ಅರ್ಚಿತ್ವಾ ಶಿರಸಾಽಽನಮ್ಯ ಪಾದಾವಂಕಗತೌ ಮೃಜನ್ ।
ಪ್ರಶ್ರಯಾವನತೋಽಕ್ರೂರಃ ಕೃಷ್ಣರಾಮಾವಭಾಷತ
॥ ೧೬ ॥

ದಿಷ್ಟ್ಯಾ ಪಾಪೋ ಹತಃ ಕಂಸಃ ಸಾನುಗೋ ವಾಮಿದಂ ಕುಲಮ್ ।
ಭವದ್ಭ್ಯಾಮುದ್ಧೃತಂ ಕೃಚ್ಛ್ರಾದ್ದುರಂತಾಚ್ಚ ಸಮೇಧಿತಮ್
॥ ೧೭ ॥

ಯುವಾಂ ಪ್ರಧಾನಪುರುಷೌ ಜಗದ್ಧೇತೂ ಜಗನ್ಮಯೌ ।
ಭವದ್ಭ್ಯಾಂ ನ ವಿನಾ ಕಿಂಚಿತ್ ಪರಮಸ್ತಿ ನ ಚಾಪರಮ್
॥ ೧೮ ॥

ಆತ್ಮಸೃಷ್ಟಮಿದಂ ವಿಶ್ವಮನ್ವಾವಿಶ್ಯ ಸ್ವಶಕ್ತಿಭಿಃ ।
ಈಯತೇ ಬಹುಧಾ ಬ್ರಹ್ಮನ್ ಶ್ರುತಪ್ರತ್ಯಕ್ಷಗೋಚರಮ್
॥ ೧೯ ॥

ಯಥಾ ಹಿ ಭೂತೇಷು ಚರಾಚರೇಷು
ಮಹ್ಯಾದಯೋ ಯೋನಿಷು ಭಾಂತಿ ನಾನಾ ।
ಏವಂ ಭವಾನ್ ಕೇವಲ ಆತ್ಮಯೋನಿ-
ಷ್ವಾತ್ಮಾಽಽತ್ಮತಂತ್ರೋ ಬಹುಧಾ ವಿಭಾತಿ ॥ ೨೦ ॥

ಸೃಜಸ್ಯಥೋ ಲುಂಪಸಿ ಪಾಸಿ ವಿಶ್ವಂ
ರಜಸ್ತಮಃಸತ್ತ್ವಗುಣೈಃ ಸ್ವಶಕ್ತಿಭಿಃ ।
ನ ಬಧ್ಯಸೇ ತದ್ಗುಣಕರ್ಮಭಿರ್ವಾ
ಜ್ಞಾನಾತ್ಮನಸ್ತೇ ಕ್ವ ಚ ಬಂಧಹೇತುಃ ॥ ೨೧ ॥

ತನ್ನ ಬಂಧುಗಳಾದ ಮನುಷ್ಯಶ್ರೇಷ್ಠರಾದ ಬಲರಾಮ ಶ್ರೀಕೃಷ್ಣರು ಉದ್ಧವನೊಂದಿಗೆ ಬರುತ್ತಿರುವುದನ್ನು ದೂರದಿಂದಲೇ ನೋಡಿದ ಅಕ್ರೂರನು ತತ್‌ಕ್ಷಣ ಎದ್ದು ಮುಂದೆ ಬಂದು ಆನಂದ ತುಂದಿಲನಾಗಿ ಅಭಿನಂದಿಸುತ್ತಾ ಒಬ್ಬೊಬ್ಬರನ್ನು ಆಲಿಂಗಿಸಿ ಕೊಂಡನು. ॥ ೧೩ ॥ ಅಕ್ರೂರನು ಭಗವಾನ್ ಶ್ರೀಕೃಷ್ಣ-ಬಲರಾಮರಿಗೆ ನಮಸ್ಕರಿಸಿದನು. ಉದ್ಧವನೊಂದಿಗೆ ಬಲರಾಮ-ಶ್ರೀಕೃಷ್ಣರೂ ಅಕ್ರೂರನಿಗೆ ವಂದಿಸಿದರು. ಎಲ್ಲರೂ ಸುಖಾಸೀನರಾದಾಗ ಅಕ್ರೂರನು ಎಲ್ಲರನ್ನೂ ವಿಧಿವತ್ತಾಗಿ ಪೂಜಿಸಿದನು. ॥ ೧೪ ॥ ಪರೀಕ್ಷಿತನೇ! ಅವನು ಭಗವಂತನ ಚರಣಗಳನ್ನು ತೊಳೆದು ಪಾದೋದಕವನ್ನು ಶಿರದಲ್ಲಿ ಧರಿಸಿದನು. ಬಳಿಕ ಅನೇಕ ವಿಧದ ದಿವ್ಯ ವಸ್ತ್ರ, ಗಂಧ, ಮಾಲೆ, ಆಭೂಷಣಗಳೇ ಮುಂತಾದ ಪೂಜಾ ಸಾಮಗ್ರಿಗಳಿಂದ ಅವನನ್ನು ಅರ್ಚಿಸ ತೊಡಗಿದನು. ಶಿರಬಾಗಿ ನಮಸ್ಕರಿಸಿ, ಭಗವಂತನ ಚರಣಗಳನ್ನು ತನ್ನ ತೊಡೆಯಲ್ಲಿಟ್ಟು ಕೊಂಡು ಒತ್ತತೊಡಗಿದನು. ಆಗ ವಿನಯದಿಂದ ಶ್ರೀಕೃಷ್ಣ-ಬಲರಾಮರಲ್ಲಿ ಕೇಳಿದನು. ॥ ೧೫-೧೬ ॥ ಪ್ರಭುಗಳೇ! ಪಾಪಿಯಾದ ಕಂಸನು ತನ್ನ ಅನುಯಾಯಿಗಳೊಂದಿಗೆ ಸತ್ತುಹೋದುದು ಅತ್ಯಂತ ಆನಂದದ ಮತ್ತು ಸೌಭಾಗ್ಯದ ಮಾತಾಗಿದೆ. ಅವನನ್ನು ಕೊಂದು ನೀವಿಬ್ಬರೂ ಯದುವಂಶವನ್ನು ಭಾರೀ ದೊಡ್ಡ ಸಂಕಟದಿಂದ ಪಾರುಮಾಡಿದಿರಿ ಮತ್ತು ಅದನ್ನು ಸಮೃದ್ಧಗೊಳಿಸಿ ಔನ್ನತ್ಯಕ್ಕೇರಿಸಿದಿರಿ. ॥ ೧೭ ॥ ನೀವಿಬ್ಬರೂ ಜಗತ್ತಿಗೆ ಕಾರಣ ಭೂತರೂ, ಜಗದ್ರೂಪರೂ, ಆದಿಪುರುಷರೂ ಆಗಿರುವಿರಿ. ನಿಮಗಿಂತ ಬೇರೆಯಾದ ಯಾವ ವಸ್ತುವೂ ಇಲ್ಲ, ಕಾರ್ಯವೂ ಇಲ್ಲ, ಕಾರಣವೂ ಇಲ್ಲ. ॥ ೧೮ ॥ ಪರಮಾತ್ಮಾ! ನೀನೇ ನಿನ್ನ ಶಕ್ತಿಯಿಂದ ಈ ವಿಶ್ವವನ್ನು ಸೃಷ್ಟಿಸಿರುವೆ. ಕಾಲ-ಮಾಯೆ ಮುಂತಾದ ಶಕ್ತಿಗಳೊಡನೆ ನೀನೇ ಸೃಷ್ಟಿಸಿದ ಜಗತ್ತಿನಲ್ಲಿ ಪ್ರವಿಷ್ಟನಾಗಿ, ಕಂಡುಬರುವ, ಕೇಳಿಬರುವ ಎಲ್ಲ ವಸ್ತುಗಳ ರೂಪದಲ್ಲಿ ಕಂಡುಬರುತ್ತಿರುವೆ. ॥ ೧೯ ॥ ಪೃಥಿವಿಯೇ ಮೊದಲಾದ ಪಂಚಭೂತಗಳು ಅವುಗಳಿಂದಲೇ ಉಂಟಾದ ಚರಾಚರ ಜಗತ್ತಿನಲ್ಲಿ ನಾನಾ ರೂಪವಾಗಿ ಸೇರಿಕೊಂಡಿರುವಂತೆಯೇ, ಸರ್ವತಂತ್ರ ಸ್ವತಂತ್ರನಾದ ನೀನೂ ಕೂಡ ಆತ್ಮನಿರ್ಮಿತವಾದ ಕಾರ್ಯರೂಪವಾದ ಈ ಬ್ರಹ್ಮಾಂಡದಲ್ಲಿ ಅಂತರಾತ್ಮನಾಗಿ ಬಹುರೂಪದಿಂದ ತೋರುತ್ತಿರುವೆ. ಇದೂ ಒಂದು ನಿನ್ನ ಲೀಲೆಯೇ ಆಗಿದೆ. ॥ ೨೦ ॥ ಪ್ರಭುವೇ! ನೀನು ರಜೋಗುಣ-ಸತ್ವಗುಣ-ತಮೋಗುಣಗಳ ರೂಪವಾದ ನಿನ್ನ ಮಾಯಾಶಕ್ತಿಯಿಂದ ಕ್ರಮವಾಗಿ ಜಗತ್ತನ್ನು ಸೃಷ್ಟಿಸುವೆ, ಪಾಲಿಸುವೆ ಮತ್ತು ಸಂಹರಿಸುವೆ. ಆದರೆ ನೀನು ಈ ಗುಣಗಳಿಂದಾಗಲೀ, ಗುಣಗಳಿಂದಾಗುವ ಕರ್ಮಗಳಿಂದಾಗಲೀ ಬಂಧಿತನಾಗುವುದಿಲ್ಲ. ಏಕೆಂದರೆ, ಶುದ್ಧಜ್ಞಾನ ಸ್ವರೂಪನಾದ ನಿನಗೆ ಬಂಧನದ ಕಾರಣವಾದರೂ ಏನಿರಬಲ್ಲದು ? ॥ ೨೧ ॥ ಪ್ರಭುವೇ! ಸ್ವಯಂ ಆತ್ಮವಸ್ತುವಿಗೆ ಸ್ಥೂಲ-ಸೂಕ್ಷ್ಮದೇಹಗಳೇ ಮುಂತಾದ ಉಪಾಧಿಗಳು ಇಲ್ಲದ ಕಾರಣ ಅದಕ್ಕೆ ಹುಟ್ಟು-ಸಾವುಗಳಿಲ್ಲ. ಅದರಲ್ಲಿ ಯಾವ ವಿಧವಾದ ಭೇದ-ಭಾವಗಳೂ ಇಲ್ಲ. ಈ ಕಾರಣದಿಂದಲೇ ನಿನಗೆ ಬಂಧನವಾಗಲೀ, ಮೋಕ್ಷವಾಗಲೀ

ದೇಹಾದ್ಯುಪಾಧೇರನಿರೂಪಿತತ್ವಾದ್
ಭವೋ ನ ಸಾಕ್ಷಾನ್ನ ಭಿದಾಽಽತ್ಮನಃ ಸ್ಯಾತ್ ।
ಅತೋ ನ ಬಂಧಸ್ತವ ನೈವ ಮೋಕ್ಷಃ
ಸ್ಯಾತಾಂ ನಿಕಾಮಸ್ತ್ವಯಿ ನೋಽವಿವೇಕಃ ॥ ೨೨ ॥

ತ್ವಯೋದಿತೋಽಯಂ ಜಗತೋ ಹಿತಾಯ
ಯದಾ ಯದಾ ವೇದಪಥಃ ಪುರಾಣಃ ।
ಬಾಧ್ಯೇತ ಪಾಷಂಡಪಥೈರಸದ್ಭಿ-
ಸ್ತದಾ ಭವಾನ್ ಸತ್ತ್ವಗುಣಂ ಬಿಭರ್ತಿ ॥ ೨೩ ॥

ಸ ತ್ವಂ ಪ್ರಭೋಽದ್ಯ ವಸುದೇವಗೃಹೇಽವತೀರ್ಣಃ
ಸ್ವಾಂಶೇನ ಭಾರಮಪನೇತುಮಿಹಾಸಿ ಭೂಮೇಃ ।
ಅಕ್ಷೌಹಿಣೀಶತವಧೇನ ಸುರೇತರಾಂಶ-
ರಾಜ್ಞಾಮಮುಷ್ಯ ಚ ಕುಲಸ್ಯ ಯಶೋ ವಿತನ್ವನ್ ॥ ೨೪ ॥

ಅದ್ಯೇಶ ನೋ ವಸತಯಃ ಖಲು ಭೂರಿಭಾಗಾ
ಯಃ ಸರ್ವದೇವಪಿತೃಭೂತನೃದೇವಮೂರ್ತಿಃ ।
ಯತ್ಪಾದಶೌಚಸಲಿಲಂ ತ್ರಿಜಗತ್ಪುನಾತಿ
ಸ ತ್ವಂ ಜಗದ್ಗುರುರಧೋಕ್ಷಜ ಯಾಃ ಪ್ರವಿಷ್ಟಃ ॥ ೨೫ ॥

ಕಃ ಪಂಡಿತಸ್ತ್ವದಪರಂ ಶರಣಂ ಸಮೀಯಾದ್
ಭಕ್ತಪ್ರಿಯಾದೃತಗಿರಃ ಸುಹೃದಃ ಕೃತಜ್ಞಾತ್ ।
ಸರ್ವಾಂದದಾತಿ ಸುಹೃದೋ ಭಜತೋಽಭಿಕಾಮಾ-
ನಾತ್ಮಾನಮಪ್ಯುಪಚಯಾಪಚಯೌ ನ ಯಸ್ಯ ॥ ೨೬ ॥

ದಿಷ್ಟ್ಯಾ ಜನಾರ್ದನ ಭವಾನಿಹ ನಃ ಪ್ರತೀತೋ
ಯೋಗೇಶ್ವರೈರಪಿ ದುರಾಪಗತಿಃ ಸುರೇಶೈಃ ।
ಛಿಂಧ್ಯಾಶು ನಃ ಸುತಕಲತ್ರಧನಾಪ್ತಗೇಹ-
ದೇಹಾದಿಮೋಹರಶನಾಂ ಭವದೀಯಮಾಯಾಮ್ ॥ ೨೭ ॥

*ಶ್ರೀಶುಕ ಉವಾಚ*

ಇತ್ಯರ್ಚಿತಃ ಸಂಸ್ತುತಶ್ಚ ಭಕ್ತೇನ ಭಗವಾನ್ ಹರಿಃ ।
ಅಕ್ರೂರಂ ಸಸ್ಮಿತಂ ಪ್ರಾಹ ಗೀರ್ಭಿಃ ಸಂಮೋಹಯನ್ನಿವ
॥ ೨೮ ॥

ಇರುವುದಿಲ್ಲ. ನಿನ್ನ ತತ್ತ್ವವನ್ನರಿಯದ ಅವಿವೇಕಿಗಳಾದ ನಾವು ನಿನ್ನಲ್ಲಿ ಬಂಧ-ಮೋಕ್ಷವನ್ನು ಆರೋಪಿಸುವುದೇ ಹೊರತಾಗಿ, ವಾಸ್ತವವಾಗಿ ನಿನಗೆ ಬಂಧನವೂ ಇಲ್ಲ; ಮೋಕ್ಷವೂ ಇಲ್ಲ. ॥ ೨೨ ॥ ನೀನೇ ಜಗತ್ತಿನ ಕಲ್ಯಾಣಕ್ಕಾಗಿ ಸನಾತನವಾದ ವೇದಮಾರ್ಗವನ್ನು ಪ್ರಕಟಿಸಿರುವೆ. ಪಾಖಂಡ ಮತಾವಲಂಬಿಗಳಾದ ದುಷ್ಟರಿಂದ ಪ್ರಪಂಚವು ಬಾಧಿಸಲ್ಪಟ್ಟಾಗ ನೀನು ಶುದ್ಧ ಸತ್ತ್ವಮಯವಾದ ಶರೀರದೊಡನೆ ಅವತರಿಸುವೆ. ॥ ೨೩ ॥ ಸ್ವಾಮಿಯೇ ! ಈ ಸಮಯದಲ್ಲಿ ನೀನು ನಿನ್ನ ಅಂಶಸಂಭೂತನಾದ ಬಲರಾಮನೊಡನೆ ಭೂಭಾರವನ್ನು ಕಳೆಯುವ ಸಲುವಾಗಿ ವಸುದೇವನ ಮನೆಯಲ್ಲಿ ಅವತರಿಸಿರುವೆ. ರಾಕ್ಷಸಾಂಶಸಂಭೂತರಾದ ರಾಜರ ನೂರಾರು ಅಕ್ಷೌಹಿಣೀ ಸೈನಿಕರನ್ನು ಸಂಹರಿಸಿ ಭೂಭಾರವನ್ನು ಕಳೆಯುವೆ ಮತ್ತು ನಿನ್ನ ವಂಶದ ಕೀರ್ತಿಯನ್ನು ವಿಸ್ತರಿಸುವೆ. ॥ ೨೪ ॥ ಇಂದ್ರಿಯಾತೀತನಾದ ಪರಮಾತ್ಮನೇ ! ಸಮಸ್ತ ದೇವತೆಗಳೂ, ಪಿತೃಗಳೂ, ಭೂತಗಣಗಳೂ, ರಾಜರೂ ನಿನ್ನ ಸ್ವರೂಪರೇ ಆಗಿದ್ದಾರೆ. ನಿನ್ನ ದಿವ್ಯ ಚರಣಾರವಿಂದಗಳನ್ನು ತೊಳೆದ ಗಂಗೆಯು ಮೂರು ಲೋಕಗಳನ್ನು ಪವಿತ್ರಗೊಳಿಸುತ್ತಾಳೆ. ಸಮಸ್ತ ಜಗತ್ತಿಗೂ ಸದ್ಗುರುವಾದ ನೀನು ಅದೃಷ್ಟವಶದಿಂದ ನಮ್ಮ ಮನೆಗೆ ಆಗಮಿಸಿರುವೆ. ನಿಶ್ಚಯವಾಗಿಯೂ ಇಂದು ನಮ್ಮ ಮನೆಗಳು ಧನ್ಯವಾದವು. ಅವುಗಳ ಸೌಭಾಗ್ಯದ ಸೀಮೆಯೇ ಉಳಿಯಲಿಲ್ಲ. ॥ ೨೫ ॥ ಪ್ರಭೋ ! ನೀನು ಪ್ರೇಮೀಭಕ್ತರ ಪರಮ ಪ್ರಿಯತಮನೂ, ಸತ್ಯವಾದಿಯೂ, ಅಕಾರಣ ಹಿತೈಷಿಯೂ, ಕೃತಜ್ಞನೂ ಆಗಿರುವೆ. ಮಾಡಿದ ಅತ್ಯಲ್ಪ ಉಪಕಾರವನ್ನು ಸ್ಮರಿಸುತ್ತಿರುವೆ. ನೀನು ನಿನ್ನನ್ನು ಭಜಿಸುವ ಪ್ರೇಮೀಭಕ್ತರ ಸಮಸ್ತ ಅಭಿಲಾಷೆಗಳನ್ನು ಪೂರ್ಣಗೊಳಿಸುವೆ. ನಿನ್ನಲ್ಲಿ ಶರಣಾಗಿ ಪ್ರಾರ್ಥಿಸುವ ಏಕಾಂತ ಭಕ್ತರಿಗೆ ನಿನ್ನನ್ನೇ ಕೊಟ್ಟುಕೊಳ್ಳುವೆ. ಕ್ಷಯ-ವೃದ್ಧಿ ರಹಿತನಾದ ಪರಮಪುರುಷ ಪರಮಾತ್ಮನಾದ ನಿನ್ನನ್ನು ಬಿಟ್ಟು ಪಂಡಿತನಾದವನು ಯಾರು ತಾನೇ ಇತರರನ್ನು ಆಶ್ರಯಿಸುವನು ? ॥ ೨೬ ॥ ಜನಾರ್ದನನೇ ! ಯೋಗೇಶ್ವರರಿಂದಲೂ, ಸುರೇಶ್ವರರಿಂದಲೂ ತಿಳಿಯಲು ಅಶಕ್ಯವಾದ ಮಹಿಮೆಯುಳ್ಳ ನೀನು ಅದೃಷ್ಟವಶದಿಂದ ನಮಗೆ ಪ್ರತ್ಯಕ್ಷವಾಗಿ ನಮ್ಮ ಮನೆಯಲ್ಲೇ ದರ್ಶನವಿತ್ತಿಹೆ. ಸ್ವಾಮಿ ! ನಾನು ಪತ್ನೀ-ಪುತ್ರ-ಸ್ವಜನ-ಧನ-ಮನೆ ಮಠಗಳು ಇವೇ ಮುಂತಾದ ಮೋಹಕವಾದ ಪಾಶಗಳಿಂದ ಬಂಧಿಸಲ್ಪಟ್ಟಿರುವೆನು. ನಿನ್ನ ಅನುಗ್ರಹ ರೂಪವಾಗಿ ನಿನ್ನದೇ ಆಗಿರುವ ಈ ಮಾಯಾಜಾಲವನ್ನು ಕತ್ತರಿಸಿ ನನ್ನನ್ನು ಉದ್ಧರಿಸು. ॥ ೨೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಹೀಗೆ ಭಕ್ತನಾದ ಅಕ್ರೂರನು ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿ, ಸ್ತುತಿಸಿದನು. ಅನಂತರ ಶ್ರೀಕೃಷ್ಣನು ಮುಗುಳ್ನಗುತ್ತಾ ಮೃದು ಮಧುರವಾಣಿಯಿಂದ ಅಕ್ರೂರನನ್ನು ವಿಮೋಹಗೊಳಿಸುತ್ತಾ ಇಂತೆಂದನು. ॥ ೨೮ ॥

ಶ್ರೀಭಗವಾನುವಾಚ

ತ್ವಂ ನೋ ಗುರುಃ ಪಿತೃವ್ಯಶ್ಚ ಶ್ಲಾಘ್ಯೋ ಬಂಧುಶ್ಚ ನಿತ್ಯದಾ ।
ವಯಂ ತು ರಕ್ಷ್ಯಾಃ ಪೋಷ್ಯಾಶ್ಚ ಅನುಕಂಪ್ಯಾಃ ಪ್ರಜಾ ಹಿ ವಃ
॥ ೨೯ ॥

ಭವದ್ವಿಧಾ ಮಹಾಭಾಗಾ ನಿಷೇವ್ಯಾ ಅರ್ಹಸತ್ತಮಾಃ ।
ಶ್ರೇಯಸ್ಕಾಮೈರ್ನೃಭಿರ್ನಿತ್ಯಂ ದೇವಾಃ ಸ್ವಾರ್ಥಾ ನ ಸಾಧವಃ
॥ ೩೦ ॥

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ
॥ ೩೧ ॥

ಸ ಭವಾನ್ ಸುಹೃದಾಂ ವೈ ನಃ ಶ್ರೇಯಾನ್ಶ್ರೇಯಶ್ಚಿಕೀರ್ಷಯಾ ।
ಜಿಜ್ಞಾಸಾರ್ಥಂ ಪಾಂಡವಾನಾಂ ಗಚ್ಛಸ್ವ ತ್ವಂ ಗಜಾಹ್ವಯಮ್
॥ ೩೨ ॥

ಪಿತರ್ಯುಪರತೇ ಬಾಲಾಃ ಸಹ ಮಾತ್ರಾ ಸುದುಃಖಿತಾಃ ।
ಆನೀತಾಃ ಸ್ವಪುರಂ ರಾಜ್ಞಾ ವಸಂತ ಇತಿ ಶುಶ್ರುಮ
॥ ೩೩ ॥

ತೇಷು ರಾಜಾಂಬಿಕಾಪುತ್ರೋ ಭ್ರಾತೃಪುತ್ರೇಷು ದೀನಧೀಃ ।
ಸಮೋ ನ ವರ್ತತೇ ನೂನಂ ದುಷ್ಪುತ್ರವಶಗೋಽಂಧದೃಕ್
॥ ೩೪ ॥

ಗಚ್ಛ ಜಾನೀಹಿ ತದ್ವೃತ್ತಮಧುನಾ ಸಾಧ್ವಸಾಧು ವಾ ।
ವಿಜ್ಞಾಯ ತದ್ವಿಧಾಸ್ಯಾಮೋ ಯಥಾ ಶಂ ಸುಹೃದಾಂ ಭವೇತ್
॥ ೩೫ ॥

ಇತ್ಯಕ್ರೂರಂ ಸಮಾದಿಶ್ಯ ಭಗವಾನ್ ಹರಿರೀಶ್ವರಃ ।
ಸಂಕರ್ಷಣೋದ್ಧವಾಭ್ಯಾಂ ವೈ ತತಃ ಸ್ವಭವನಂ ಯಯೌ
॥ ೩೬ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ಅಯ್ಯಾ ! ನೀನು ನಮ್ಮ ಗುರುವೂ ಹಿತೋಪದೇಶಕನೂ, ಚಿಕ್ಕಪ್ಪನೂ ಆಗಿರುವೆ. ನಮ್ಮ ವಂಶದಲ್ಲಿ ಅತ್ಯಂತ ಪ್ರಶಂಸನೀಯನೂ, ಹಿತೈಷಿಯೂ ಆಗಿರುವೆ. ನಾವಾದರೋ ನಿಮ್ಮ ಬಾಲಕರೇ ಆಗಿದ್ದೇವೆ. ಸದಾಕಾಲವೂ ನಿಮ್ಮಿಂದ ರಕ್ಷಿಸಲ್ಪಡುವವರೂ, ಕೃಪಾಪಾತ್ರರೂ ಆಗಿದ್ದೇವೆ. ॥ ೨೯ ॥ ತನ್ನ ಪರಮಶ್ರೇಯಸ್ಸನ್ನು ಬಯಸುವವನು ನಿಮ್ಮಂತಹ ಪರಮ ಪೂಜನೀಯರೂ, ಭಾಗ್ಯವಂತರೂ ಆದ ಸಂತರನ್ನು ಸದಾ ಸೇವಿಸಬೇಕು. ನಿಮ್ಮಂತಹ ಸಂತರು ದೇವತೆಗಳಿಗಿಂತಲೂ ಹೆಚ್ಚಿನವರು. ಏಕೆಂದರೆ, ದೇವತೆಗಳಲ್ಲಿಯೂ ಸ್ವಾರ್ಥವಿರುತ್ತದೆ, ಆದರೆ ಸಂತರಲ್ಲಿ ಇರುವುದಿಲ್ಲ. ॥ ೩೦ ॥ ಕೇವಲ ನೀರಿನ ಸರೋವರ, ನದಿಗಳು ತೀರ್ಥವಾಗುವುದಿಲ್ಲ, ಕೇವಲ ಮೃತ್ತಿಕೆ, ಶಿಲೆ ಮುಂತಾದವುಗಳಿಂದಾದ ವಿಗ್ರಹಗಳು ದೇವರಾಗುವುದಿಲ್ಲ, ಚಿಕ್ಕಪ್ಪ! ಬಹಳ ದಿನಗಳವರೆಗೆ ಶ್ರದ್ಧೆಯಿಂದ ಸೇವೆಮಾಡಿದಾಗಲೇ ಅವುಗಳು ಪವಿತ್ರವಾಗಿಸಬಲ್ಲವು. ಆದರೆ ಸತ್ಪುರುಷರು ತಮ್ಮ ದರ್ಶನಮಾತ್ರದಿಂದಲೇ ಪವಿತ್ರರಾಗಿಸಿ ಬಿಡುತ್ತಾರೆ. ॥ ೩೧ ॥ ಅಕ್ರೂರನೇ! ನೀವು ನಮ್ಮ ಹಿತೈಷಿ, ಸುಹೃದರಲ್ಲಿ ಸರ್ವಶ್ರೇಷ್ಠ ರಾಗಿರುವಿರಿ. ಆದುದರಿಂದ ಪಾಂಡವರ ಹಿತವನ್ನು ಮಾಡಲು, ಅವರ ಕ್ಷೇಮ-ಸಮಾಚಾರವನ್ನು ತಿಳಿಯಲು ನೀವು ಹಸ್ತಿನಾಪುರಕ್ಕೆ ಹೋಗಬೇಕಾಗಿದೆ. ॥ ೩೨ ॥ ಪಾಂಡುರಾಜನು ಸತ್ತುಹೋದ ಬಳಿಕ ತಾಯಿ ಕುಂತೀದೇವಿಯರೊಂದಿಗೆ ಯುಧಿಷ್ಠಿರಾದಿ ಪಾಂಡವರು ಬಹಳ ದುಃಖಿತರಾಗಿದ್ದರೆಂದೂ, ಈಗ ಧೃತರಾಷ್ಟ್ರರಾಜನು ಅವರನ್ನು ಹಸ್ತಿನಾಪುರಕ್ಕೆ ಕರೆಸಿಕೊಂಡು, ಅವರು ಅಲ್ಲೇ ಇರುವ ರೆಂದೂ ಕೇಳಿದ್ದೇವೆ. ॥ ೩೩ ॥ ರಾಜಾ ಧೃತರಾಷ್ಟ್ರನು ಕುರುಡ ನಾಗಿದ್ದು ದುರ್ಬಲ ಬುದ್ಧಿಯವನೆಂದು ನೀನು ತಿಳಿದೇ ಇರುವೆ. ಪುತ್ರನಾದ ದುಷ್ಟ ದುರ್ಯೋಧನನ ಅಧೀನನಾಗಿ ಅವನು ಪಾಂಡವರೊಡನೆ ತನ್ನ ಪುತ್ರರಂತೆ ಸಮಾನವಾಗಿ ವ್ಯವಹರಿ ಸುತ್ತಿಲ್ಲ. ॥ ೩೪ ॥ ಆದಕ್ಕಾಗಿ ನೀವು ಅಲ್ಲಿಗೆ ಹೋಗಿ ಪಾಂಡವರ ಸ್ಥಿತಿ-ಗತಿಯನ್ನು ತಿಳಿದುಕೊಂಡು ಬನ್ನಿರಿ. ಅವರ ಸಮಾಚಾರ ನಿಮ್ಮಿಂದ ತಿಳಿದ ಬಳಿಕ ಆ ಸುಹೃದರಿಗೆ ಸುಖಸಿಗುವಂತೆ ನಾನು ಉಪಾಯವನ್ನು ಮಾಡುವೆನು. ॥ ೩೫ ॥ ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನು ಅಕ್ರೂರನಿಗೆ ಹೀಗೆ ಆದೇಶವನ್ನಿತ್ತು ಬಲರಾಮ-ಉದ್ಧವರೊಂದಿಗೆ ಅಲ್ಲಿಂದ ಹೊರಟು ತಮ್ಮ ಅರಮನೆಗೆ ಮರಳಿದನು. ॥ ೩೬ ॥

*ನಲವತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೪೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಅಷ್ಟಚತ್ವಾರಿಂಶೋಽಧ್ಯಾಯಃ ॥ ೪೮ ॥

# ನಲವತ್ತೊಂಭತ್ತನೆಯ ಅಧ್ಯಾಯ

## ಹಸ್ತಿನಾಪುರಕ್ಕೆ ಅಕ್ರೂರನ ಪ್ರಯಾಣ

ಶ್ರೀಶುಕ ಉವಾಚ

ಸ ಗತ್ವಾ ಹಾಸ್ತಿನಪುರಂ ಪೌರವೇಂದ್ರಯಶೋಽಂಕಿತಮ್ ।
ದದರ್ಶ ತತ್ರಾಂಬಿಕೇಯಂ ಸಭೀಷ್ಮಂ ವಿದುರಂ ಪೃಥಾಮ್
॥ ೧ ॥

ಸಹಪುತ್ರಂ ಚ ಬಾಹ್ಲೀಕಂ ಭಾರದ್ವಾಜಂ ಸಗೌತಮಮ್ ।
ಕರ್ಣಂ ಸುಯೋಧನಂ ದ್ರೌಣಿಂ ಪಾಂಡವಾನ್ ಸುಹೃದೋಽಪರಾನ್
॥ ೨ ॥

ಯಥಾವದುಪಸಂಗಮ್ಯ ಬಂಧುಭಿರ್ಗಾಂದಿನೀಸುತಃ ।
ಸಂಪೃಷ್ಟಸ್ತೈಃ ಸುಹೃದ್ವಾರ್ತಾಂ ಸ್ವಯಂ ಚಾಪೃಚ್ಛದವ್ಯಯಮ್
॥ ೩ ॥

ಉವಾಸ ಕತಿಚಿನ್ಮಾಸಾನ್ ರಾಜ್ಞೋ ವೃತ್ತವಿವಿತ್ಸಯಾ ।
ದುಷ್ಪ್ರಜಸ್ಯಾಲ್ಪಸಾರಸ್ಯ ಖಲಚ್ಛಂದಾನುವರ್ತಿನಃ
॥ ೪ ॥

ತೇಜ ಓಜೋ ಬಲಂ ವೀರ್ಯಂ ಪ್ರಶ್ರಯಾದೀಂಶ್ಚ ಸದ್ಗುಣಾನ್ ।
ಪ್ರಜಾನುರಾಗಂ ಪಾರ್ಥೇಷು ನ ಸಹದ್ಭಿಶ್ಚಿಕೀರ್ಷಿತಮ್
॥ ೫ ॥

ಕೃತಂ ಚ ಧಾರ್ತರಾಷ್ಟ್ರೈರ್ಯದ್ಗರದಾನಾದ್ಯಪೇಶಲಮ್ ।
ಆಚಖ್ಯೌ ಸರ್ವಮೇವಾಸ್ಮೈ ಪೃಥಾ ವಿದುರ ಏವ ಚ
॥ ೬ ॥

ಪೃಥಾ ತು ಭ್ರಾತರಂ ಪ್ರಾಪ್ತಮಕ್ರೂರಮುಪಸೃತ್ಯ ತಮ್ ।
ಉವಾಚ ಜನ್ಮನಿಲಯಂ ಸ್ಮರಂತ್ಯಶ್ರುಕಲೇಕ್ಷಣಾ
॥ ೭ ॥

ಅಪಿ ಸ್ಮರಂತಿ ನಃ ಸೌಮ್ಯ ಪಿತರೌ ಭ್ರಾತರಶ್ಚ ಮೇ ।
ಭಗಿನ್ಯೋ ಭ್ರಾತೃಪುತ್ರಾಶ್ಚ ಜಾಮಯಃ ಸಖ್ಯ ಏವ ಚ
॥ ೮ ॥

ಭ್ರಾತ್ರೇಯೋ ಭಗವಾನ್ ಕೃಷ್ಣಃ ಶರಣ್ಯೋ ಭಕ್ತವತ್ಸಲಃ ।
ಪೈತೃಷ್ವಸೇಯಾನ್ ಸ್ಮರತಿ ರಾಮಶ್ಚಾಂಬುರುಹೇಕ್ಷಣಃ
॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಆಜ್ಞಾನುಸಾರವಾಗಿ ಅಕ್ರೂರನು ಕುರು ವಂಶೀಯರಾದವರ ಯಶಸ್ಸಿನಿಂದ ಅಂಕಿತವಾದ ಹಸ್ತಿನಾವತಿಗೆ ಪ್ರಯಾಣಮಾಡಿ, ಅಲ್ಲಿ ರಾಜನಾದ ಧೃತರಾಷ್ಟ್ರ, ಭೀಷ್ಮ, ವಿದುರ, ಕುಂತೀ, ಬಾಹ್ಲೀಕ ಮತ್ತು ಅವನ ಮಗ ಸೋಮದತ್ತ, ದ್ರೋಣಾ ಚಾರ್ಯರು, ಕೃಪಾಚಾರ್ಯರು, ಕರ್ಣ, ದುರ್ಯೋಧನ, ದ್ರೋಣಪುತ್ರ ಅಶ್ವತ್ಥಾಮ, ಯುಧಿಷ್ಠಿರಾದಿ ಪಂಚಪಾಂಡವರು ಇವರನ್ನು ಹಾಗೂ ಇತರ ಇಷ್ಟ-ಮಿತ್ರರನ್ನು ನೋಡಿದನು. ॥೧-೨॥ ಗಾಂದಿನೀನಂದನನಾದ ಅಕ್ರೂರನು ಎಲ್ಲ ಇಷ್ಟ-ಮಿತ್ರರನ್ನು ಮತ್ತು ಸಂಬಂಧಿಗಳನ್ನು ಭೇಟಿಯಾದಾಗ ಧೃತರಾಷ್ಟ್ರನೇ ಮೊದ ಲಾದವರೂ ತಮ್ಮ ಮಥುರಾವಾಸಿಗಳಾದ ಸ್ವಜನ- ಸಂಬಂಧಿಗಳ ಕ್ಷೇಮಸಮಾಚಾರವನ್ನು ಕೇಳಿದರು. ಅಂತೆಯೇ ಅಕ್ರೂರನೂ ಹಸ್ತಿನಾಪುರವಾಸಿಗಳ ಕ್ಷೇಮ-ಸಮಾಚಾರಗಳನ್ನು ಕೇಳಿದನು.॥೩॥ ಪರೀಕ್ಷಿತನೇ! ಧೃತರಾಷ್ಟ್ರನು ಪಾಂಡವರೊಂದಿಗೆ ಹೇಗೆ ವ್ಯವಹರಿಸುತ್ತಾನೆಂದು ತಿಳಿಯಲು ಅಕ್ರೂರನು ಕೆಲವು ತಿಂಗಳು ಅಲ್ಲೇ ಉಳಿದುಕೊಂಡನು. ನಿಜ ಹೇಳಬೇಕಾದರೆ – ದುಷ್ಟಪುತ್ರರ ಇಚ್ಛೆಯ ವಿರುದ್ಧವಾಗಿ ಯಾವುದನ್ನೂ ಮಾಡುವ ಸಾಹಸ ಧೃತರಾಷ್ಟ್ರನಲ್ಲಿರಲಿಲ್ಲ, ಅವನು ಶಕುನಿ ಮೊದಲಾದ ದುಷ್ಟರ ಸಲಹೆಯಂತೆ ಕಾರ್ಯಮಾಡುತ್ತಿದ್ದನು. ॥ ೪ ॥ ಕುಂತೀ ಮತ್ತು ವಿದುರರು ಅಕ್ರೂರನಿಗೆ ತಿಳಿಯ ಹೇಳಿದರು – ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳು ಪಾಂಡವರ ಪ್ರಭಾವ, ಶಸ್ತ್ರ ಕೌಶಲ್ಯ, ಬಲ, ಪರಾಕ್ರಮ, ವಿನಯ ಮೊದಲಾದ ಸದ್ಗುಣಗಳನ್ನು ನೋಡಿ ಉರಿಯುತ್ತಿರುತ್ತಾರೆ. ಪ್ರಜೆಗಳು ಪಾಂಡವರನ್ನು ವಿಶೇಷ ವಾಗಿ ಪ್ರೀತಿಸಿದಾಗ ಅವರು ಇನ್ನೂ ಹೆಚ್ಚು ಹೊಟ್ಟೆಕಿಚ್ಚು ಪಟ್ಟುಕೊಂಡು ಪಾಂಡವರಿಗೆ ಅನಿಷ್ಟವನ್ನು ಮಾಡಲು ಹೊರಡು ತ್ತಾರೆ. ಇಂದಿನ ತನಕ ದುರ್ಯೋಧನಾದಿ ಧೃತರಾಷ್ಟ್ರನ ಪುತ್ರರು ಪಾಂಡವರಿಗೆ ವಿಷ ಉಣಿಸುವುದೇ ಮುಂತಾದ ಬಹಳ ಅತ್ಯಾಚಾರ ವನ್ನು ಮಾಡಿರುವರು ಮತ್ತು ಮುಂದೆಯೂ ಕೂಡ ಬಹಳಷ್ಟು ಮಾಡಲು ಯೋಚಿಸುತ್ತಿದ್ದಾರೆ. ॥ ೫-೬ ॥

ಅಕ್ರೂರನು ಕುಂತಿಯ ಮನೆಗೆ ಬಂದಾಗ ಕುಂತಿಯು ಅವನ ಬಳಿಗೆ ಹೋಗಿ ಕುಳಿತಳು. ಅಕ್ರೂರನನ್ನು ನೋಡಿ ಆಕೆಗೆ ತನ್ನ ತವರು ಮನೆಯ ನೆನಪಾಗಿ ಕಣ್ಣುಗಳಿಂದ ನೀರನ್ನು ಸುರಿಸುತ್ತಾ ಅವನಲ್ಲಿ ಹೇಳಿದಳು. ॥ ೭ ॥ ಪ್ರಿಯ ಸಹೋದರನೇ! ನನ್ನ ತಂದೆ-ತಾಯಿ ಯರು, ಅಕ್ಕ-ತಂಗಿಯರು, ಅಳಿಯಂದಿರು, ಕುಟುಂಬದ ಸ್ತ್ರೀಯರು, ಗೆಳತಿಯರು ಎಂದಾದರೂ ನನ್ನನ್ನು ಸ್ಮರಿಸುವರೇ? ॥ ೮ ॥ ನನ್ನ ಅಳಿಯಂದಿರಾದ ಭಗವಾನ್ ಶ್ರೀಕೃಷ್ಣ ಮತ್ತು ಕಮಲನಯನ ಬಲರಾಮ ಇವರಿಬ್ಬರೂ ಭಕ್ತವತ್ಸಲರೂ, ಶರಣಾಗತ ರಕ್ಷಕರೂ ಆಗಿದ್ದಾರೆ ಎಂದು ಕೇಳಿದ್ದೆ. ಅವರು ಎಂದಾದರೂ ತಮ್ಮ ಸೋದರ ಅತ್ತೆಯನ್ನು ಹಾಗೂ ಆಕೆಯ ಮಕ್ಕಳನ್ನು ನೆನೆಸಿಕೊಳ್ಳುವರೇನು?॥ ೯ ॥

ಸಾಪತ್ನಮಧ್ಯೇ ಶೋಚಂತೀಂ ವೃಕಾಣಾಂ ಹರಿಣೀಮಿವ ।
ಸಾಂತ್ವಯಿಷ್ಯತಿ ಮಾಂ ವಾಕ್ಯೈಃ ಪಿತೃಹೀನಾಂಶ್ಚ ಬಾಲಕಾನ್ ॥ ೧೦ ॥

'ತೋಳಗಳ ನಡುವೆ ಸಿಕ್ಕಿಕೊಂಡ ಜಿಂಕೆಯಂತೆ' ನಾನು ಶತ್ರುಗಳ ಮಧ್ಯದಲ್ಲಿ ಸುತ್ತುವರಿದು ಶೋಕಾಕುಲಳಾಗಿದ್ದೇನೆ. ನನ್ನ ಮಕ್ಕಳು ತಂದೆಯನ್ನು ಕಳೆದುಕೊಂಡಿರುವರು. ನಮ್ಮ ಶ್ರೀಕೃಷ್ಣನು ಎಂದಾದರು ಇಲ್ಲಿಗೆ ಬಂದು ನನ್ನನ್ನು ಮತ್ತು ಈ ಅನಾಥ ಮಕ್ಕಳನ್ನು ಸಂತೈಸುವನೇ ? ॥ ೧೦ ॥ (ಶ್ರೀಕೃಷ್ಣನು ತನ್ನ ಮುಂದೆಯೇ ಇರುವಂತೆ ಭಾವಿಸಿ ಕುಂತಿಯು ಗದ್ಗದಿತಳಾಗಿ ಹೇಳತೊಡಗಿದಳು)

ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ ।
ಪ್ರಪನ್ನಾಂ ಪಾಹಿ ಗೋವಿಂದ ಶಿಶುಭಿಶ್ಚಾವಸೀದತೀಮ್ ॥ ೧೧ ॥

ಓ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣ! ನೀನು ಮಹಾ ಯೋಗಿಯೂ, ವಿಶ್ವಾತ್ಮನೂ, ಸಮಸ್ತ ವಿಶ್ವಕ್ಕೆ ಆತ್ಮನಾಗಿಯೂ, ಜಗದ್ರಕ್ಷಕನೂ ಆಗಿರುವೆ. ಗೋವಿಂದ! ನಾನು ನನ್ನ ಮಕ್ಕಳೊಂದಿಗೆ ದುಃಖದ ಮೇಲೆ ದುಃಖಗಳನ್ನೇ ಅನುಭವಿಸುತ್ತಿದ್ದೇನೆ. ನಿನಗೆ ಶರಣು ಬಂದಿರುವ ನನ್ನನ್ನು ರಕ್ಷಿಸು. ನನ್ನ ಮಕ್ಕಳನ್ನು ಕಾಪಾಡು. ॥ ೧೧ ॥

ನಾನ್ಯತ್ತವ ಪದಾಂಭೋಜಾತ್ ಪಶ್ಯಾಮಿ ಶರಣಂ ನೃಣಾಮ್ ।
ಬಿಭ್ಯತಾಂ ಮೃತ್ಯುಸಂಸಾರಾದೀಶ್ವರಸ್ಯಾಪವರ್ಗಿಕಾತ್ ॥ ೧೨ ॥

ಶ್ರೀಕೃಷ್ಣ! ಈ ಪ್ರಪಂಚವು ಮೃತ್ಯುಮಯವಾಗಿದ್ದು ನಿನ್ನ ಚರಣಗಳು ಮೋಕ್ಷವನ್ನು ಕರುಣಿಸುವಂತಹುದು. ಈ ಸಂಸಾರಕ್ಕೆ ಹೆದರಿ ಶರಣಾದವರಿಗೆ ನಿನ್ನ ಚರಣಕಮಲಗಳಲ್ಲದೆ ಬೇರೆ ಯಾವುದೇ ಆಶ್ರಯವನ್ನು ನಾನು ನೋಡುತ್ತಿಲ್ಲ. ॥ ೧೨ ॥

ನಮಃ ಕೃಷ್ಣಾಯ ಶುದ್ಧಾಯ ಬ್ರಹ್ಮಣೇ ಪರಮಾತ್ಮನೇ ।
ಯೋಗೇಶ್ವರಾಯ ಯೋಗಾಯ ತ್ವಾಮಹಂ ಶರಣಂ ಗತಾ ॥ ೧೩ ॥

ಶ್ರೀಕೃಷ್ಣನೇ! ನೀನು ಮಾಯಾಲೇಶದಿಂದ ರಹಿತನಾದ ಪರಮ ಶುದ್ಧನಾಗಿರುವೆ. ಸಾಕ್ಷಾತ್ ಪರಬ್ರಹ್ಮ ಪರಮಾತ್ಮನಾಗಿರುವೆ. ಸಮಸ್ತ ಸಾಧನೆಗಳ, ಯೋಗಗಳ ಮತ್ತು ಉಪಾಯಗಳ ಸ್ವಾಮಿಯಾಗಿದ್ದು ಸಾಕ್ಷಾತ್ ಯೋಗವೂ ಆಗಿರುವೆ. ನಾನು ನಿನಗೆ ಶರಣಾಗಿದ್ದೇನೆ. ನೀನು ನನ್ನನ್ನು ರಕ್ಷಿಸು. ॥ ೧೩ ॥

*ಶ್ರೀಶುಕ ಉವಾಚ*

ಇತ್ಯನುಸ್ಮೃತ್ಯ ಸ್ವಜನಂ ಕೃಷ್ಣಂ ಚ ಜಗದೀಶ್ವರಮ್ ।
ಪ್ರಾರುದದ್ದುಃಖಿತಾ ರಾಜನ್ ಭವತಾಂ ಪ್ರಪಿತಾಮಹೀ ॥ ೧೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ನಿನ್ನ ಮುತ್ತಜ್ಜಿಯಾದ ಕುಂತೀದೇವಿಯು ಹೀಗೆ ತಮ್ಮ ಸಂಬಂಧಿಗಳನ್ನೂ, ಕೊನೆಗೆ ಜಗದೀಶ್ವರನಾದ ಶ್ರೀಕೃಷ್ಣನನ್ನು ಸ್ಮರಿಸಿಕೊಂಡು ಕೊನೆಗೆ ಅತ್ಯಂತ ದುಃಖಿತಳಾಗಿ ಬಿಕ್ಕಿ-ಬಿಕ್ಕಿ ಅಳತೊಡಗಿದಳು. ॥ ೧೪ ॥

ಸಮದುಃಖಸುಖೋಽಕ್ರೂರೋ ವಿದುರಶ್ಚ ಮಹಾಯಶಾಃ ।
ಸಾಂತ್ವಯಾಮಾಸತುಃ ಕುಂತೀಂ ತತ್ಪುತ್ರೋತ್ಪತ್ತಿಹೇತುಭಿಃ ॥ ೧೫ ॥

ಅಕ್ರೂರನು ಮತ್ತು ವಿದುರರು ಇಬ್ಬರೂ ಸುಖ ದುಃಖಗಳನ್ನು ಸಮಾನವಾಗಿ ನೋಡುತ್ತಿದ್ದರು. ಯಶಸ್ವಿಯಾದ ಈ ಮಹಾತ್ಮರಿಬ್ಬರೂ ಕುಂತಿಗೆ ಅವಳ ಪುತ್ರರ ಜನ್ಮದಾತರಾದ ಧರ್ಮ, ವಾಯು ಮೊದಲಾದ ದೇವತೆಗಳ ನೆನಪನ್ನು ತಂದುಕೊಟ್ಟು ನಿನ್ನ ಮಕ್ಕಳು ಅಧರ್ಮವನ್ನು ನಾಶಗೊಳಿಸಲೆಂದೇ ಹುಟ್ಟಿರುವರು ಎಂದು ಬಹಳವಾಗಿ ತಿಳಿಯ ಹೇಳಿ ಸಾಂತ್ವನ ನೀಡಿದರು. ॥ ೧೫ ॥

ಯಾಸ್ಯನ್ ರಾಜಾನಮಭ್ಯೇತ್ಯ ವಿಷಮಂ ಪುತ್ರಲಾಲಸಮ್ ।
ಅವದತ್ ಸುಹೃದಾಂ ಮಧ್ಯೇ ಬಂಧುಭಿಃ ಸೌಹೃದೋದಿತಮ್ ॥ ೧೬ ॥

ಧೃತರಾಷ್ಟ್ರನು ತನ್ನ ತಮ್ಮನ ಮಕ್ಕಳೊಂದಿಗೆ ಪಕ್ಷಪಾತವನ್ನು ಮಾಡುತ್ತಿದ್ದಾನೆ ಮತ್ತು ಅವರೊಂದಿಗೆ ತನ್ನ ಪುತ್ರರಂತೆ ವ್ಯವಹರಿಸುತ್ತಿಲ್ಲ ಎಂಬುದು ಸ್ಪಷ್ಟವಾಗಿಯೇ ಇತ್ತು. ಮಥುರೆಗೆ ಹೊರಡುವಾಗ ಅಕ್ರೂರನು ಧೃತರಾಷ್ಟ್ರನ ಬಳಿಗೆ ಬಂದು ಕೌರವರಿಂದ ತುಂಬಿದ ಸಭೆಯಲ್ಲಿ ಶ್ರೀಕೃಷ್ಣ ಮತ್ತು ಬಲರಾಮಾದಿ ಹಿತೈಷಿಗಳ ಸಂದೇಶವನ್ನು ತಿಳಿಸಿದನು. ॥ ೧೬ ॥

*ಅಕ್ರೂರ ಉವಾಚ*

ಭೋ ಭೋ ವೈಚಿತ್ರವೀರ್ಯ ತ್ವಂ ಕುರೂಣಾಂ ಕೀರ್ತಿವರ್ಧನ ।
ಭ್ರಾತರ್ಯುಪರತೇ ಪಾಂಡಾವಧುನಾಽಽಸನಮಾಸ್ಥಿತಃ ॥ ೧೭ ॥

**ಅಕ್ರೂರನು ಹೇಳಿದನು** – ಕುರುವಂಶೀಯರ ಕೀರ್ತಿಯನ್ನು ಹೆಚ್ಚಿಸುವ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನೇ! ನಿನ್ನ ತಮ್ಮನಾದ ಪಾಂಡುಮಹಾರಾಜನು ಅವಸಾನ ಹೊಂದಿದ ಬಳಿಕ ಈಗತಾನೇ ನೀನು ರಾಜ್ಯ ಸಿಂಹಾಸನವನ್ನು ಏರಿರುವೆ. ॥ ೧೭ ॥

ಧರ್ಮೇಣ ಪಾಲಯನ್ನುರ್ವೀಂ ಪ್ರಜಾಃ ಶೀಲೇನ ರಂಜಯನ್ ।
ವರ್ತಮಾನಃ ಸಮಃ ಸ್ವೇಷು ಶ್ರೇಯಃ ಕೀರ್ತಿಮವಾಪ್ಸ್ಯಸಿ ॥ ೧೮ ॥

ಅನ್ಯಥಾ ತ್ವಾಚರನ್‌ಲೋಕೇ ಗರ್ಹಿತೋ ಯಾಸ್ಯಸೇ ತಮಃ ।
ತಸ್ಮಾತ್ಸಮತ್ವೇ ವರ್ತಸ್ವ ಪಾಂಡವೇಷ್ವಾತ್ಮಜೇಷು ಚ ॥ ೧೯ ॥

ನೇಹ ಚಾತ್ಯಂತಸಂವಾಸಃ ಕರ್ಹಿಚಿತ್ ಕೇನಚಿತ್ಸಹ ।
ರಾಜನ್ ಸ್ವೇನಾಪಿ ದೇಹೇನ ಕಿಮು ಜಾಯಾತ್ಮಜಾದಿಭಿಃ ॥ ೨೦ ॥

ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ ।
ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಮ್ ॥ ೨೧ ॥

ಅಧರ್ಮೋಪಚಿತಂ ವಿತ್ತಂ ಹರಂತ್ಯನ್ಯೇಽಲ್ಪಮೇಧಸಃ ।
ಸಂಭೋಜನೀಯಾಪದೇಶೈರ್ಜಲಾನೀವ ಜಲೌಕಸಃ ॥ ೨೨ ॥

ಪುಷ್ಣಾತಿ ಯಾನಧರ್ಮೇಣ ಸ್ವಬುದ್ಧ್ಯಾ ತಮಪಂಡಿತಮ್ ।
ತೇಽಕೃತಾರ್ಥಂ ಪ್ರಹಿಣ್ವಂತಿ ಪ್ರಾಣಾ ರಾಯಃ ಸುತಾದಯಃ ॥ ೨೩ ॥

ಸ್ವಯಂ ಕಿಲ್ಬಿಷಮಾದಾಯ ತೈಸ್ತ್ಯಕ್ತೋ ನಾರ್ಥಕೋವಿದಃ ।
ಅಸಿದ್ಧಾರ್ಥೋ ವಿಶತ್ಯಂಧಂ ಸ್ವಧರ್ಮವಿಮುಖಸ್ತಮಃ ॥ ೨೪ ॥

ತಸ್ಮಾಲ್ಲೋಕಮಿಮಂ ರಾಜನ್ ಸ್ವಪ್ನಮಾಯಾಮನೋರಥಮ್ ।
ವೀಕ್ಷ್ಯಾಯಮ್ಯಾತ್ಮನಾಽಽತ್ಮಾನಂ ಸಮಃ ಶಾಂತೋ ಭವ ಪ್ರಭೋ ॥ ೨೫ ॥

ಧೃತರಾಷ್ಟ್ರ ಉವಾಚ

ಯಥಾ ವದತಿ ಕಲ್ಯಾಣೀಂ ವಾಚಂ ದಾನಪತೇ ಭವಾನ್ ।
ತಥಾನಯಾ ನ ತೃಪ್ಯಾಮಿ ಮರ್ತ್ಯಃ ಪ್ರಾಪ್ಯ ಯಥಾಮೃತಮ್ ॥ ೨೬ ॥

ತಥಾಪಿ ಸೂನೃತಾ ಸೌಮ್ಯ ಹೃದಿ ನ ಸ್ಥೀಯತೇ ಚಲೇ ।
ಪುತ್ರಾನುರಾಗವಿಷಮೇ ವಿದ್ಯುತ್ ಸೌದಾಮನೀ ಯಥಾ ॥ ೨೭ ॥

ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಾ, ಸದ್ವ್ಯವಹಾರಗಳಿಂದ ಪ್ರಜೆಗಳನ್ನು ಸಂತೋಷಪಡಿಸುತ್ತಾ, ಸ್ವಜನರಲ್ಲಿ ಪಕ್ಷಪಾತವಿಲ್ಲದೆ ಸಮನಾಗಿ ವ್ಯವಹರಿಸುತ್ತಿದ್ದರೆ ಶ್ರೇಯಸ್ಸನ್ನೂ, ಕೀರ್ತಿಯನ್ನೂ ಪಡೆಯುವೆ. ॥ ೧೮ ॥ ಇದಕ್ಕೆ ವಿಪರೀತವಾಗಿ ಆಚರಿಸಿದರೆ ಈ ಲೋಕದಲ್ಲಿ ನೀನು ನಿಂದೆಗೆ ಗುರಿಯಾಗುವೆ. ಸತ್ತ ಬಳಿಕ ನರಕಕ್ಕೆ ಹೋಗಬೇಕಾದೀತು. ಆದ್ದರಿಂದ ನಿನ್ನ ಪುತ್ರರಲ್ಲಿಯೂ ಮತ್ತು ಪಾಂಡವರಲ್ಲಿಯೂ ಸಮಾನತೆಯಿಂದ ವರ್ತಿಸು. ॥ ೧೯ ॥ ಮಹಾರಾಜ! ಯಾರು ಯಾವಾಗಲೂ ಯಾರೊಡನೆಯೂ ಹೆಚ್ಚು ಕಾಲ ಸೇರಿಕೊಂಡು ಇರುವುದಿಲ್ಲ. ತನ್ನದೆಂದು ತಿಳಿದಿರುವ ಈ ಶರೀರದಲ್ಲಿಯೂ ಹೆಚ್ಚು ಕಾಲ ಇರಲಾಗುವುದಿಲ್ಲ. ಹೀಗಿರುವಾಗ ಪತ್ನೀ-ಪುತ್ರರ ವಿಷಯವಾಗಿ ಹೇಳುವುದೇನಿದೆ? ॥ ೨೦ ॥ ಜೀವಿಯು ಒಬ್ಬನೇ ಹುಟ್ಟುತ್ತಾನೆ. ಒಬ್ಬನೇ ಸತ್ತುಹೋಗುತ್ತಾನೆ ತಾನು ಮಾಡಿದ ಪಾಪ-ಪುಣ್ಯಗಳ ಫಲಗಳನ್ನೂ ಒಬ್ಬನೇ ಅನುಭವಿಸುತ್ತಾನೆ. ॥ ೨೧ ॥ ಪತಿ-ಸುತ ಬಂಧುಗಳು 'ನಾವು ನಿನ್ನವರು, ನಮ್ಮ ಭರಣ-ಪೋಷಣೆಗಳನ್ನು ನೀನು ಮಾಡಬೇಕು' ಎಂದು ಹೇಳಿಕೊಂಡು - ಅಲ್ಪಬುದ್ಧಿಯವನು ಅಧರ್ಮದಿಂದ ಸಂಪಾದಿಸಿದ ಹಣವನ್ನು ಜಲಚರ ಪ್ರಾಣಿಗಳು ನೀರನ್ನು ಕುಡಿದುಬಿಡುವಂತೆ ತಿಂದುಹಾಕುತ್ತಾರೆ.॥೨೨॥ ಈ ಮೂರ್ಖ ಜೀವನು ಯಾರನ್ನು ತನ್ನವರೆಂದು ತಿಳಿದು ಅಧರ್ಮದಿಂದಲಾದರೂ ಪಾಲಿಸಿ-ಪೋಷಿಸುತ್ತಾನೋ, ಅವರೇ ಪ್ರಾಣ, ಧನ, ಪುತ್ರಾದಿಗಳು ಈ ಜೀವನನ್ನು ಅಸಂತುಷ್ಟನಿರುವಾಗಲೆ ಬಿಟ್ಟು ಹೊರಟುಹೋಗುತ್ತಾರೆ. ॥ ೨೩ ॥ ನಿಜವಾಗಿ ಹೇಳಬೇಕಾದರೆ - ತನ್ನ ಧರ್ಮದಿಂದ ವಿಮುಖನಾದವನು ತನ್ನ ಲೌಕಿಕ ಸ್ವಾರ್ಥವನ್ನು ತಿಳಿಯುವುದಿಲ್ಲ. ಯಾರಿಗಾಗಿ ಅವನು ಅಧರ್ಮವನ್ನು ಮಾಡುವನೋ, ಅವರೂ ಅವನನ್ನು ಬಿಟ್ಟೇ ಬಿಡುವರು. ಅವನಿಗೆ ಎಂದಿಗೂ ಸಂತೋಷವಾಗಲಾರದು ಹಾಗೂ ತನ್ನ ಪಾಪದ ಮೂಟೆಯನ್ನು ತಲೆಯಲ್ಲಿ ಹೊತ್ತುಕೊಂಡು ಘೋರವಾದ ನರಕಕ್ಕೆ ಹೋಗುವನು. ॥ ೨೪ ॥ ಅದಕ್ಕಾಗಿ ಮಹಾರಾಜ! ಈ ಪ್ರಪಂಚವನ್ನು ಕನಸೆಂದೂ, ಇಂದ್ರಜಾಲವೆಂದೂ, ಕೇವಲ ಮನಸ್ಸಿನ ಮಂಡಿಗೆಯೆಂದೂ, ನಶ್ವರವಾದುದೆಂದೂ ಭಾವಿಸಿ, ಬುದ್ಧಿಯಿಂದ ಮನಸ್ಸನ್ನು ಸಮಾಧಾನಪಡಿಸಿಕೊಂಡು ಮಕ್ಕಳೆಲ್ಲರನ್ನೂ ಸಮತ್ವದಿಂದ ಕಾಣುತ್ತಾ ಶಾಂತನಾಗಿರು. ॥ ೨೫ ॥

**ಧೃತರಾಷ್ಟ್ರನು ಹೇಳಿದನು** - ದಾನಪತಿಯಾದ ಅಕ್ರೂರ! ನೀನು ನಿಶ್ಚಯವಾಗಿಯೂ ನನಗೆ ಶ್ರೇಯಸ್ಕರವಾದ ಮಾತನ್ನೇ ಹೇಳಿರುವೆ. ಮನುಷ್ಯನು ಅಮೃತವನ್ನು ಎಷ್ಟು ಕುಡಿದರೂ ತೃಪ್ತನಾಗದಿರುವಂತೆ, ಅಮೃತಸ್ವರೂಪವಾದ ನಿನ್ನ ಮಾತುಗಳಿಂದ ನಾನು ತೃಪ್ತನಾಗಲಿಲ್ಲ. ಇನ್ನೂ ಕೇಳಬೇಕೆನಿಸುತ್ತದೆ. ॥ ೨೬ ॥ ಅಕ್ರೂರನೇ! ಹೀಗಿದ್ದರೂ ನಿನ್ನ ಹಿತಕರವಾದ ಒಳ್ಳೆಯ ಮಾತುಗಳು ಚಂಚಲವಾದ ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಉಳಿಯಲಿಲ್ಲ. ಏಕೆಂದರೆ, ನನ್ನ ಹೃದಯವು ಪುತ್ರರ ವ್ಯಾಮೋಹದಿಂದ ಅತ್ಯಂತ ವಿಷಮಯವಾಗಿದೆ. ಸ್ಫಟಿಕ ಪರ್ವತದ ಮೇಲೆ ಮಿಂಚು ಒಮ್ಮೆ ಹೊಳೆದು ಮಾಯವಾಗುವಂತೆ ನಿನ್ನ ಉಪದೇಶಗಳ ಸ್ಥಿತಿಯೂ ಹಾಗೆಯೇ ಆಗಿದೆ. ॥ ೨೭ ॥

ಈಶ್ವರಸ್ಯ ವಿಧಿಂ ಕೋ ನು ವಿಧುನೋತ್ಯನ್ಯಥಾ ಪುಮಾನ್ ।
ಭೂಮೇರ್ಭಾರಾವತಾರಾಯ ಯೋಽವತೀರ್ಣೋ ಯದೋಃ ಕುಲೇ ॥ ೨೮ ॥

ಯೋ ದುರ್ವಿಮರ್ಶಪಥಯಾ ನಿಜಮಾಯಯೇದಂ
ಸೃಷ್ಟ್ವಾ ಗುಣಾನ್ ವಿಭಜತೇ ತದನುಪ್ರವಿಷ್ಟಃ ।
ತಸ್ಮೈ ನಮೋ ದುರವಬೋಧವಿಹಾರತಂತ್ರ-
ಸಂಸಾರಚಕ್ರಗತಯೇ ಪರಮೇಶ್ವರಾಯ ॥ ೨೯ ॥

*ಶ್ರೀಶುಕ ಉವಾಚ*

ಇತ್ಯಭಿಪ್ರೇತ್ಯ ನೃಪತೇರಭಿಪ್ರಾಯಂ ಸ ಯಾದವಃ ।
ಸುಹೃದ್ಭಿಃ ಸಮನುಜ್ಞಾತಃ ಪುನರ್ಯದುಪುರೀಮಗಾತ್ ॥ ೩೦ ॥

ಶಶಂಸ ರಾಮಕೃಷ್ಣಾಭ್ಯಾಂ ಧೃತರಾಷ್ಟ್ರವಿಚೇಷ್ಟಿತಮ್ ।
ಪಾಂಡವಾನ್ ಪ್ರತಿ ಕೌರವ್ಯ ಯದರ್ಥಂ ಪ್ರೇಷಿತಃ ಸ್ವಯಮ್ ॥ ೩೧ ॥

ಅಕ್ರೂರನೇ ! ಸರ್ವಶಕ್ತನಾದ ಭಗವಂತನು ಪೃಥಿವಿಯ ಭಾರವನ್ನಿಳುಹಲೆಂದೇ ಯದುಕುಲದಲ್ಲಿ ಅವತರಿಸಿರುವನೆಂದು ನಾನು ಕೇಳಿದ್ದೇನೆ. ಅವನ ವಿಧಾನದಲ್ಲಿ ವ್ಯತ್ಯಾಸಮಾಡಬಲ್ಲ ಯಾವ ಮನುಷ್ಯನು ತಾನೇ ಸಮರ್ಥನು ? ಅವನ ಇಚ್ಛೆಯಂತೆಯೇ ನಡೆಯುವುದು. ॥ ೨೮ ॥ ಭಗವಂತನ ಮಾಯೆಯು ಅಚಿಂತ್ಯವಾದುದು. ಆ ಮಾಯೆಯಿಂದಲೇ ಈ ಜಗತ್ತನ್ನು ಸೃಷ್ಟಿಸಿ ತಾನೂ ಅದರಲ್ಲಿಯೇ ಸೇರಿಕೊಂಡು ಗುಣ-ಕರ್ಮಗಳನ್ನು ಪ್ರಪಂಚಕ್ಕೆ ವಿಭಾಗಿಸಿ ಕೊಡುತ್ತಾನೆ. ಈ ಜಗಚ್ಚಕ್ರದ ಅವಿಚ್ಛಿನ್ನ ಗತಿಯಲ್ಲಿ ಅವನ ಅಚಿಂತ್ಯ ಲೀಲಾಶಕ್ತಿಯ ಹೊರತು ಬೇರೆ ಯಾವ ಕಾರಣವೂ ಇಲ್ಲ. ಅಂತಹ ಪರಮೈಶ್ವರ್ಯಶಾಲಿಯಾದ ಪ್ರಭುವಿಗೆ ನಾನು ನಮಸ್ಕರಿಸುತ್ತೇನೆ. ॥ ೨೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಮಹಾರಾಜ ! ಹೀಗೆ ಅಕ್ರೂರನು ಧೃತರಾಷ್ಟ್ರನ ಅಭಿಪ್ರಾಯವನ್ನು ತಿಳಿದುಕೊಂಡು, ಕುರುವಂಶೀಯರಾದ ಸ್ವಜನರಿಂದ ಅನುಮತಿಯನ್ನು ಪಡೆದು ಮಥುರೆಗೆ ಮರಳಿದನು. ॥ ೩೦ ॥ ಪರೀಕ್ಷಿತನೇ ! ಅಕ್ರೂರನು ಅಲ್ಲಿ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರಲ್ಲಿ ಧೃತರಾಷ್ಟ್ರನು ಪಾಂಡವರೊಡನೆ ವ್ಯವಹರಿಸುತ್ತಿದ್ದ ಎಲ್ಲ ವೃತ್ತಾಂತವನ್ನು ತಿಳಿಸಿದನು. ಏಕೆಂದರೆ ಅವನನ್ನು ಹಸ್ತಿನಾಪುರಕ್ಕೆ ಕಳಿಸಿದ ಉದ್ದೇಶವೇ ಅದಾಗಿತ್ತು. ॥ ೩೧ ॥

*ನಲವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೪೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಏಕೋನಪಂಚಾಶತ್ತಮೋಽಧ್ಯಾಯಃ ॥ ೪೯ ॥

ಹತ್ತನೆಯ ಸ್ಕಂಧದ ಪೂರ್ವಾರ್ಧವು ಸಂಪೂರ್ಣವಾಯಿತು.

ಹರಿಃ ಓಂ ತತ್ಸತ್ - ಹರಿಃ ಓಂ ತತ್ಸತ್

|| ಓಂ ನಮೋ ಭಗವತೇ ವಾಸುದೇವಾಯ ||

# ಶ್ರೀಮದ್ಭಾಗವತಮಹಾಪುರಾಣಮ್

## ದಶಮಃ ಸ್ಕಂಧಃ (ಉತ್ತರಾರ್ಧ)

## ಐವತ್ತನೆಯ ಅಧ್ಯಾಯ

### ಜರಾಸಂಧನೊಡನೆ ಯುದ್ಧ - ದ್ವಾರಕಾಪಟ್ಟಣ ನಿರ್ಮಾಣ

*ಶ್ರೀಶುಕ ಉವಾಚ*

ಅಸ್ತಿಃ ಪ್ರಾಪ್ತಿಶ್ಚ ಕಂಸಸ್ಯ ಮಹಿಷ್ಯೌ ಭರತರ್ಷಭ ।
ಮೃತೇ ಭರ್ತರಿ ದುಃಖಾರ್ತೇ ಈಯತುಃ ಸ್ಮ ಪಿತುರ್ಗೃಹಾನ್ || ೧ ||

ಪಿತ್ರೇ ಮಗಧರಾಜಾಯ ಜರಾಸಂಧಾಯ ದುಃಖಿತೇ ।
ವೇದಯಾಂಚಕ್ರತುಃ ಸರ್ವಮಾತ್ಮವೈಧವ್ಯಕಾರಣಮ್ || ೨ ||

ಸ ತದಪ್ರಿಯಮಾಕರ್ಣ್ಯ ಶೋಕಾಮರ್ಷಯುತೋ ನೃಪ ।
ಅಯಾದವೀಂ ಮಹೀಂ ಕರ್ತುಂ ಚಕ್ರೇ ಪರಮಮುದ್ಯಮಮ್ || ೩ ||

ಅಕ್ಷೌಹಿಣೀಭಿರ್ವಿಂಶತ್ಯಾ ತಿಸೃಭಿಶ್ಚಾಪಿ ಸಂವೃತಃ ।
ಯದುರಾಜಧಾನೀಂ ಮಥುರಾಂ ನ್ಯರುಣತ್ ಸರ್ವತೋದಿಶಮ್ || ೪ ||

ನಿರೀಕ್ಷ್ಯ ತದ್ಬಲಂ ಕೃಷ್ಣ ಉದ್ವೇಲಮಿವ ಸಾಗರಮ್ ।
ಸ್ವಪುರಂ ತೇನ ಸಂರುದ್ಧಂ ಸ್ವಜನಂ ಚ ಭಯಾಕುಲಮ್ || ೫ ||

ಚಿಂತಯಾಮಾಸ ಭಗವಾನ್ ಹರಿಃ ಕಾರಣಮಾನುಷಃ ।
ತದ್ದೇಶಕಾಲಾನುಗುಣಂ ಸ್ವಾವತಾರಪ್ರಯೋಜನಮ್ || ೬ ||

ಹನಿಷ್ಯಾಮಿ ಬಲಂ ಹ್ಯೇತದ್ಭುವಿ ಭಾರಂ ಸಮಾಹಿತಮ್ ।
ಮಾಗಧೇನ ಸಮಾನೀತಂ ವಶ್ಯಾನಾಂ ಸರ್ವಭೂಭುಜಾಮ್ || ೭ ||

ಅಕ್ಷೌಹಿಣೀಭಿಃ ಸಂಖ್ಯಾತಂ ಭಟಾಶ್ವರಥಕುಂಜರೈಃ ।
ಮಾಗಧಸ್ತು ನ ಹಂತವ್ಯೋ ಭೂಯಃ ಕರ್ತಾ ಬಲೋದ್ಯಮಮ್ || ೮ ||

ಏತದರ್ಥೋಽವತಾರೋಽಯಂ ಭೂಭಾರಹರಣಾಯ ಮೇ ।
ಸಂರಕ್ಷಣಾಯ ಸಾಧೂನಾಂ ಕೃತೋಽನ್ಯೇಷಾಂ ವಧಾಯ ಚ || ೯ ||

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಭರತವಂಶ ಶಿರೋಮಣಿಯೇ! ಕಂಸನಿಗೆ ಅಸ್ತಿ ಮತ್ತು ಪ್ರಾಪ್ತಿ ಎಂಬ ಇಬ್ಬರು ಮಡದಿಯರಿದ್ದರು. ಪತಿಯ ಮರಣದಿಂದಾಗಿ ದುಃಖಿತರಾದ ಅವರು ತಮ್ಮ ತಂದೆಯ ಮನೆಗೆ ಹೊರಟುಹೋದರು. || ೧ || ದುಃಖಿತಪ್ತೆಯರಾಗಿದ್ದ ಅವರಿಬ್ಬರೂ ತಮ್ಮ ತಂದೆಯಾದ ಮಗಧ ರಾಜನಾದ ಜರಾಸಂಧನಲ್ಲಿ ತಮಗೆ ವೈಧವ್ಯವು ಬಂದ ಕಾರಣ ವನ್ನು ವಿವರಿಸಿ ಹೇಳಿದರು. || ೨ || ರಾಜನೇ! ಅಪ್ರಿಯವಾದ ಈ ಸಮಾಚಾರವನ್ನು ಕೇಳಿ ಜರಾಸಂಧನು ಬಹಳವಾಗಿ ಶೋಕಿಸಿದನು. ಆದರೆ ಒಡನೆಯೇ ಕೋಪದಿಂದ ಕಿಡಿ-ಕಿಡಿ ಯಾಗಿ, ಪೃಥಿವಿಯನ್ನೇ ಯಾದವರಿಂದ ರಹಿತವನ್ನಾಗಿ ಮಾಡಲು ನಿಶ್ಚಯಿಸಿ ಯುದ್ಧಕ್ಕೆ ಕಾರ್ಯೋನ್ಮುಖನಾದನು. || ೩ || ಇಪ್ಪತ್ತಮೂರು ಅಕ್ಷೌಹಿಣಿ ಸೈನ್ಯ ಸಮೇತನಾಗಿ ಯಾದವರ ರಾಜಧಾನಿಯಾದ ಮಥುರೆಗೆ ಬಂದು ನಾಲ್ಕು ಕಡೆಗಳಿಂದಲೂ ಮುತ್ತಿಗೆ ಹಾಕಿದನು. || ೪ ||

ಭಗವಾನ್ ಶ್ರೀಕೃಷ್ಣನು ನೋಡಿದನು - ಜರಾಸಂಧನ ಆ ಮಹಾಸೈನ್ಯವು ಉಕ್ಕಿಬರುವ ಸಮುದ್ರದಂತೆ ಇತ್ತು. ಅವನು ನಾಲ್ಕು ಕಡೆಗಳಿಂದಲೂ ತನ್ನ ರಾಜಧಾನಿಯನ್ನು ಪ್ರತಿಬಂಧಿಸಿದ್ದು, ತನ್ನ ಸ್ವಜನರೂ, ಪುರವಾಸಿಗಳೂ ಭಯಗೊಂಡಿರುವುದನ್ನು ಗಮನಿಸಿದನು. || ೫ || ಭಗವಾನ್ ಶ್ರೀಕೃಷ್ಣನು ಭೂಭಾರಹರಣ ಕ್ಕಾಗಿಯೇ ಮನುಷ್ಯನಾಗಿ ಅವತರಿಸಿ ಬಂದಿದ್ದನು. ತನ್ನ ಅವತಾರದ ಪ್ರಯೋಜನವನ್ನೂ, ಈ ಸಮಯದಲ್ಲಿ ದೇಶಕಾಲಕ್ಕೆ ತಕ್ಕಂತೆ ಏನು ಮಾಡಬೇಕೆಂಬುದನ್ನು ಯೋಚಿಸಿ ನಿರ್ಧಾರಕ್ಕೆ ಬಂದನು. || ೬ || ಮಗಧರಾಜನಾದ ಜರಾಸಂಧನು ತನ್ನ ಅಧೀನದಲ್ಲಿರುವ ಸಾಮಂತರಿಂದ ಇಪ್ಪತ್ತಮೂರು ಅಕ್ಷೌಹಿಣೀ ಚತುರಂಗ ಸೈನ್ಯವನ್ನು ಸಂಗ್ರಹಿಸಿ ಇಲ್ಲಿಗೆ ತಂದಿರುವನು. ಭೂಮಿಯ ಭಾರವೆಲ್ಲವೂ ಒಂದೆಡೆಯಲ್ಲೇ ಕೇಂದ್ರೀಕೃತವಾಗಿದೆ. ಈ ಸೈನ್ಯವನ್ನು ನಾನೀಗಲೇ ನಾಶಮಾಡಿಬಿಡುತ್ತೇನೆ. ಆದರೆ ಜರಾಸಂಧನನ್ನು ಮಾತ್ರ ಕೊಲ್ಲು ವುದಿಲ್ಲ, ಏಕೆಂದರೆ, ಅವನು ಬದುಕಿದ್ದರೆ ಪುನಃ ಅಸುರರ ದೊಡ್ಡ ಸೈನ್ಯವನ್ನು ಸೇರಿಸಿ ಇಲ್ಲಿಗೆ ಕರೆತರುವನು. ಇದರಿಂದ ನನ್ನ ಭೂಭಾರಹರಣ ಕಾರ್ಯವು ಸುಗಮವಾದೀತೆಂದು ಯೋಚಿಸಿ ದನು. || ೭-೮ || ಭೂಭಾರವನ್ನು ಹರಣಮಾಡಿ, ಸಾಧುಗಳ ರಕ್ಷಣೆ - ದುಷ್ಟ ಜನರ ಸಂಹಾರ ಇವೇ ನನ್ನ ಅವತಾರದ ಪ್ರಯೋಜನವಲ್ಲವೇ! || ೯ ||

ಅನ್ಯೋಽಪಿ ಧರ್ಮರಕ್ಷಾಯೈ ದೇಹಃ ಸಂಭ್ರಿಯತೇ ಮಯಾ ।
ವಿರಾಮಾಯಾಪ್ಯಧರ್ಮಸ್ಯ ಕಾಲೇ ಪ್ರಭವತಃ ಕ್ವಚಿತ್ ॥ ೧೦ ॥

ಏವಂ ಧ್ಯಾಯತಿ ಗೋವಿಂದ ಆಕಾಶಾತ್ ಸೂರ್ಯವರ್ಚಸೌ ।
ರಥಾವುಪಸ್ಥಿತೌ ಸದ್ಯಃ ಸಸೂತೌ ಸಪರಿಚ್ಛದೌ ॥ ೧೧ ॥

ಆಯುಧಾನಿ ಚ ದಿವ್ಯಾನಿ ಪುರಾಣಾನಿ ಯದೃಚ್ಛಯಾ ।
ದೃಷ್ಟ್ವಾ ತಾನಿ ಹೃಷೀಕೇಶಃ ಸಂಕರ್ಷಣಮಥಾಬ್ರವೀತ್ ॥ ೧೨ ॥

ಪಶ್ಯಾರ್ಯ ವ್ಯಸನಂ ಪ್ರಾಪ್ತಂ ಯದೂನಾಂ ತ್ವಾವತಾಂ ಪ್ರಭೋ ।
ಏಷ ತೇ ರಥ ಆಯಾತೋ ದಯಿತಾನ್ಯಾಯುಧಾನಿ ಚ ॥ ೧೩ ॥

ಯಾನಮಾಸ್ಥಾಯ ಜಹ್ಯೇತದ್ವ್ಯಸನಾತ್ ಸ್ವಾನ್ ಸಮುದ್ಧರ ।
ಏತದರ್ಥಂ ಹಿ ನೌ ಜನ್ಮ ಸಾಧೂನಾಮೀಶ ಶರ್ಮಕೃತ್ ॥ ೧೪ ॥

ತ್ರಯೋವಿಂಶತ್ಯನೀಕಾಖ್ಯಂ ಭೂಮೇರ್ಭಾರಮಪಾಕುರು ।
ಏವಂ ಸಮ್ಮಂತ್ರ್ಯ ದಾಶಾರ್ಹೌ ದಂಶಿತೌ ರಥಿನೌ ಪುರಾತ್ ॥ ೧೫ ॥

ನಿರ್ಜಗ್ಮತುಃ ಸ್ವಾಯುಧಾಢ್ಯೌ ಬಲೇನಾಲ್ಪೀಯಸಾಽಽವೃತೌ ।
ಶಂಖಂ ದಧ್ಮೌ ವಿನಿರ್ಗತ್ಯ ಹರಿರ್ದಾರುಕಸಾರಥಿಃ ॥ ೧೬ ॥

ತತೋಽಭೂತ್ ಪರಸೈನ್ಯಾನಾಂ ಹೃದಿ ವಿತ್ರಾಸವೇಪಥುಃ ।
ತಾವಾಹ ಮಾಗಧೋ ವೀಕ್ಷ್ಯ ಹೇ ಕೃಷ್ಣ ಪುರುಷಾಧಮ ॥ ೧೭ ॥

ನ ತ್ವಯಾ ಯೋದ್ಧುಮಿಚ್ಛಾಮಿ ಬಾಲೇನೈಕೇನ ಲಜ್ಜಯಾ ।
ಗುಪ್ತೇನ ಹಿ ತ್ವಯಾ ಮನ ನ ಯೋತ್ಸ್ಯೇ ಯಾಹಿ ಬಂಧುಹನ್ ॥ ೧೮ ॥

ತವ ರಾಮ ಯದಿ ಶ್ರದ್ಧಾ ಯುಧ್ಯಸ್ವ ಧೈರ್ಯಮುದ್ವಹ ।
ಹಿತ್ವಾ ವಾ ಮಚ್ಛರೈಶ್ಛಿನ್ನಂ ದೇಹಂ ಸ್ವರ್ಯಾಹಿ ಮಾಂ ಜಹಿ ॥ ೧೯ ॥

ಧರ್ಮದ ರಕ್ಷಣೆಗಾಗಿಯೂ, ಬೆಳೆಯುತ್ತಿರುವ ಅಧರ್ಮವನ್ನು ತಡೆಗಟ್ಟಲು ಕೆಲವು ಸಮಯದಲ್ಲಿ ನಾನು ಅನೇಕ ದೇಹಗಳಲ್ಲಿಯೂ ಅವತರಿಸುತ್ತೇನೆ. ॥ ೧೦ ॥

ಪರೀಕ್ಷಿತ ಮಹಾರಾಜ! ಭಗವಾನ್ ಶ್ರೀಕೃಷ್ಣನು ಹೀಗೆ ಯೋಚಿಸುತ್ತಿರುವಾಗಲೇ ಆಕಾಶದಿಂದ ಸೂರ್ಯಸದೃಶ ಹೊಳೆಯುತ್ತಿರುವ ಎರಡು ರಥಗಳು ಅವನ ಬಳಿಗೆ ಬಂದುವು. ಅವುಗಳು ಸಾರಥಿಗಳಿಂದ ಕೂಡಿದ್ದು ಸಮಸ್ತ ಯುದ್ಧ ಸಾಮಗ್ರಿಗಳಿಂದ ಸುಸಜ್ಜಿತವಾಗಿದ್ದುವು. ॥ ೧೧ ॥ ಇದೇ ಸಮಯದಲ್ಲಿ ಭಗವಂತನ ಸನಾತನವಾದ ದಿವ್ಯ ಆಯುಧಗಳೂ ಅಲ್ಲಿಗೆ ಬಂದು ಉಪಸ್ಥಿತವಾದುವು. ಅವೆಲ್ಲವನ್ನು ನೋಡಿ ಭಗವಾನ್ ಶ್ರೀಕೃಷ್ಣನು ಬಲರಾಮನಲ್ಲಿ ಇಂತೆಂದನು. ॥ ೧೨ ॥ ಮಹಾಶಕ್ತಿಶಾಲಿಯಾದ ಅಣ್ಣನೇ ! ನಿನ್ನಿಂದ ರಕ್ಷಿತವಾದ ಯಾದವರಿಗೆ ಇಂದು ಮಹಾಸಂಕಟವು ಪ್ರಾಪ್ತವಾಗಿದೆ. ಈ ಸಮಯದಲ್ಲಿ ಅವರ ಸಂಕಟವನ್ನು ನಿವಾರಿಸುವುದು ನಮ್ಮ ಕರ್ತವ್ಯವಾಗಿದೆ. ನಮ್ಮ ಕಾರ್ಯಕ್ಕೆ ಬೆಂಬಲವಾಗಿ ಆಕಾಶದಿಂದ ರಥಗಳೂ ಬಂದಿವೆ. ನಮಗೆ ಪ್ರಿಯವಾದ ಆಯುಧಗಳೂ ತಾವಾಗಿಯೇ ಬಂದಿವೆ. ॥ ೧೩ ॥ ಅಣ್ಣಾ! ನೀನು ರಥವನ್ನು ಹತ್ತಿ ಕುಳಿತು ಶತ್ರುಸೈನ್ಯವನ್ನು ಸಂಹಾರಮಾಡಿ ನಮ್ಮ ಸ್ವಜನರನ್ನು ಈ ವಿಪತ್ತಿನಿಂದ ಪಾರುಮಾಡು. ಸಾಧುಗಳಿಗೆ ಸುಖವನ್ನುಂಟು ಮಾಡಲೆಂದೇ ನಾವಿಬ್ಬರೂ ಅವತರಿಸಿದ್ದೇವಲ್ಲ! ॥ ೧೪ ॥ ಆದ್ದರಿಂದ ಈಗ ಈ ಇಪ್ಪತ್ತಮೂರು ಅಕ್ಷೌಹಿಣಿ ಸೇನೆಯ ರೂಪದಲ್ಲಿರುವ ವಿಪುಲವಾದ ಭೂಭಾರವನ್ನು ಕಡಿಮೆ ಮಾಡು, ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮನು ಹೀಗೆ ಸಮಾಲೋಚಿಸಿ ಕವಚಗಳನ್ನು ಧರಿಸಿ, ರಥಾರೂಢರಾಗಿ ಮಥುರೆಯಿಂದ ಹೊರಟರು. ಆಗ ಅವರು ದಿವ್ಯಾಯುಧಗಳಿಂದ ಸಂಪನ್ನರಾಗಿದ್ದರು ಮತ್ತು ಅತ್ಯಲ್ಪವಾದ ಸೇನೆಯೂ ಅವರೊಂದಿಗೆ ಹಿಂಬಾಲಿಸಿತು. ಶ್ರೀಕೃಷ್ಣನ ರಥವನ್ನು ದಾರುಕನು ನಡೆಸುತ್ತಿದ್ದನು. ಪುರದಿಂದ ಹೊರಗೆ ಬಂದು ಅವನು ತನ್ನ ಪಾಂಚಜನ್ಯ ಶಂಖವನ್ನು ಊದಿದನು. ॥ ೧೫-೧೬ ॥ ಭಯಂಕರವಾದ ಆ ಶಂಖಧ್ವನಿಯನ್ನು ಕೇಳಿ ಶತ್ರು ಸೈನಿಕರ ಹೃದಯಗಳು ಭಯದಿಂದ ನಡುಗಿಹೋದುವು. ರಥದಲ್ಲಿ ಕುಳಿತು ಬಂದಿರುವ ಬಲರಾಮ-ಕೃಷ್ಣರನ್ನು ನೋಡಿ ಜರಾಸಂಧನು ಹೇಳಿದನು - ಎಲೈ ಪುರುಷಾಧಮನೇ ! ನಿನ್ನಂತಹ ಬಾಲಕನೊಬ್ಬನೊಡನೆ ಯುದ್ಧಮಾಡಲು ನನಗೆ ನಾಚಿಕೆಯಾಗುತ್ತದೆ. ಇಷ್ಟು ದಿವಸಗಳವರೆಗೆ ಎಲ್ಲೆಲ್ಲೋ ಬಚ್ಚಿಕೊಂಡೇ ತಿರುಗುತ್ತಿದ್ದೆ. ಎಲೈ ಮೂರ್ಖನೇ ! ನೀನು ನಿನ್ನ ಸೋದರ ಮಾವನನ್ನೇ ಕೊಂದವನು. ಆದಕ್ಕಾಗಿ ನಾನು ನಿನ್ನೊಡನೆ ಯುದ್ಧ ಮಾಡುವುದಿಲ್ಲ, ಹೊರಟು ಹೋಗು. ನನ್ನ ಮುಂದೆ ಇರಬೇಡ. ॥ ೧೭-೧೮ ॥ ಬಲರಾಮಾ! ಯುದ್ಧದಲ್ಲಿ ಮಡಿದರೆ ಸ್ವರ್ಗಪ್ರಾಪ್ತಿಯಾಗುತ್ತದೆ ಎಂಬ ಶ್ರದ್ಧೆ ನಿನಗಿದ್ದರೆ ಧೈರ್ಯದಿಂದ ನನ್ನೊಡನೆ ಯುದ್ಧಮಾಡು. ನನ್ನ ಬಾಣಗಳಿಂದ ಛಿನ್ನ-ಭಿನ್ನವಾದ ಶರೀರವನ್ನು ಇಲ್ಲೇ ಬಿಟ್ಟು ಸ್ವರ್ಗಕ್ಕೆ ಹೋಗು. ಇಲ್ಲವೇ ನಿನ್ನಲ್ಲಿ ಶಕ್ತಿಯಿದ್ದರೆ ನನ್ನನ್ನೇ ಕೊಂದು ಹಾಕು. ॥ ೧೯ ॥

ಶ್ರೀಭಗವಾನುವಾಚ

ನ ವೈ ಶೂರಾ ವಿಕತ್ಥಂತೇ ದರ್ಶಯಂತ್ಯೇವ ಪೌರುಷಮ್ ।
ನ ಗೃಹ್ಣೀಮೋ ವಚೋ ರಾಜನ್ನಾತುರಸ್ಯ ಮುಮೂರ್ಷತಃ ॥ ೨೦ ॥

ಶ್ರೀಶುಕ ಉವಾಚ

ಜರಾಸುತಸ್ತಾವಭಿಸೃತ್ಯ ಮಾಧವೌ
ಮಹಾಬಲೌಘೇನ ಬಲೀಯಸಾಽಽವೃಣೋತ್ ।
ಸಸೈನ್ಯಯಾನಧ್ವಜವಾಜಿಸಾರಥೀ
ಸೂರ್ಯಾನಲೌ ವಾಯುರಿವಾಭ್ರರೇಣುಭಿಃ ॥ ೨೧ ॥

ಸುಪರ್ಣತಾಲಧ್ವಜಚಿಹ್ನಿತೌ ರಥಾ-
ವಲಕ್ಷಯಂತ್ಯೋ ಹರಿರಾಮಯೋರ್ಮೃಧೇ ।
ಸ್ತ್ರಿಯಃ ಪುರಾಟ್ಟಾಲಕಹರ್ಮ್ಯಗೋಪುರಂ
ಸಮಾಶ್ರಿತಾಃ ಸಂಮುಮುಹುಃ ಶುಚಾರ್ದಿತಾಃ ॥ ೨೨ ॥

ಹರಿಃ ಪರಾನೀಕಪಯೋಮುಚಾಂ ಮುಹುಃ
ಶಿಲೀಮುಖಾತ್ಯುಲ್ಬಣವರ್ಷಪೀಡಿತಮ್ ।
ಸ್ವಸೈನ್ಯಮಾಲೋಕ್ಯ ಸುರಾಸುರಾರ್ಚಿತಂ
ವ್ಯಸ್ಫೂರ್ಜಯಚ್ಛಾರ್ಙ್ಗಶರಾಸನೋತ್ತಮಮ್ ॥ ೨೩ ॥

ಗೃಹ್ಣನ್ ನಿಷಂಗಾದಥ ಸಂದಧಚ್ಛರಾನ್
ವಿಕೃಷ್ಯ ಮುಂಚನ್ ಶಿತಬಾಣಪೂಗಾನ್ ।
ನಿಘ್ನನ್ ರಥಾನ್ ಕುಂಜರವಾಜಿಪತ್ತೀನ್
ನಿರಂತರಂ ಯದ್ವದಲಾತಚಕ್ರಮ್ ॥ ೨೪ ॥

ನಿರ್ಭಿನ್ನಕುಂಭಾಃ ಕರಿಣೋ ನಿಪೇತು-
ರನೇಕಶೋಽಶ್ವಾ ಶರವೃಕ್ಣಕಂಧರಾಃ ।
ರಥಾ ಹತಾಶ್ವಧ್ವಜಸೂತನಾಯಕಾಃ
ಪದಾತಯಶ್ಛಿನ್ನಭುಜೋರುಕಂಧರಾಃ ॥ ೨೫ ॥

ಸಂಛಿದ್ಯಮಾನದ್ವಿಪದೇಭವಾಜಿನಾ-
ಮಂಗಪ್ರಸೂತಾಃ ಶತಶೋಽಸೃಗಾಪಗಾಃ ।
ಭುಜಾಹಯಃ ಪೂರುಷಶೀರ್ಷಕಚ್ಛಪಾ
ಹತದ್ವಿಪದ್ವೀಪಹಯಗ್ರಹಾಕುಲಾಃ ॥ ೨೬ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಜರಾಸಂಧನೇ! ಶೂರರಾದವರು ನಿನ್ನಂತೆ ಯಾರೂ ಜಂಬ ಕೊಚ್ಚಿಕೊಳ್ಳುವುದಿಲ್ಲ, ಪರಾಕ್ರಮವನ್ನೇ ತೋರುತ್ತಾರೆ. ಸಾಯಲು ಹೊರಟಿರುವ ಸನ್ನಿಪಾತದ ರೋಗಿಯು ಗಳಹುತ್ತಿರುವಂತೆ ನಿನ್ನ ಮಾತುಗಳನ್ನು ನಾನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ವಾಯುವು ಮೋಡಗಳಿಂದ ಸೂರ್ಯನನ್ನು, ಅಗ್ನಿಯನ್ನು ಧೂಳಿನಿಂದಲೂ ಮುಚ್ಚಿಬಿಡುವಂತೆ ಜರೆಯ ಮಗನಾದ ಜರಾಸಂಧನು ಬಲರಾಮ-ಶ್ರೀಕೃಷ್ಣರನ್ನು ಬಲಿಷ್ಠವಾದ ಮಹಾಸೈನ್ಯದಿಂದ ಸುತ್ತುವರಿದು ಮುತ್ತಿಗೆ ಹಾಕಿದನು. ಇದರಿಂದ ಅವರ ಸೈನ್ಯ, ರಥ, ಧ್ವಜ, ಸಾರಥಿ, ಕುದುರೆಗಳು ಕಾಣದಾದರು. ॥ ೨೧ ॥ ಯುದ್ಧವನ್ನು ನೋಡಲು ಹೆಬ್ಬಾಲುಗಳಲ್ಲಿಯೂ, ಉಪ್ಪರಿಗೆಗಳಲ್ಲಿಯೂ ನಿಂತಿದ್ದ ಮಥುರಾನಗರದ ಸ್ತ್ರೀಯರು ಗರುಡ-ತಾಲಧ್ವಜಗಳನ್ನು ಹೊಂದಿದ್ದ ಶ್ರೀಕೃಷ್ಣ-ಬಲರಾಮರ ರಥಗಳನ್ನು ಕಾಣದೆ ಶೋಕಾಭಿಭೂತರಾಗಿ ಮೂರ್ಛೆ ಹೊಂದಿದರು. ॥ ೨೨॥ ಶತ್ರುಸೈನ್ಯಗಳೆಂಬ ಮೇಘಗಳ ಮೂಲಕ ಬಾಣಗಳೆಂಬ ಅತಿವೃಷ್ಟಿಯಿಂದ ಪೀಡಿತವಾದ ತನ್ನ ಕಡೆಯ ಸೈನ್ಯವನ್ನು ನೋಡಿ ಶ್ರೀಹರಿಯು ದೇವಾಸುರರಿಂದ ಅರ್ಚಿಸಲ್ಪಡುತ್ತಿದ್ದ ಶಾರ್ಙ್ಗಧನುಸ್ಸನ್ನು ಟಂಕಾರ ಮಾಡಿದನು.॥ ೨೩. ॥ ಬಳಿಕ ಶ್ರೀಕೃಷ್ಣನು ಬತ್ತಳಿಕೆಯಿಂದ ತೀಕ್ಷ್ಣವಾದ ಬಾಣಗಳನ್ನು ತೆಗೆದು, ಧನುಸ್ಸಿಗೆ ಹೂಡಿ, ನಾಣನ್ನು ಆಕರ್ಣಾಂತವಾಗಿ ಸೆಳೆದು ಪುಂಖಾನು-ಪುಂಖವಾಗಿ ಪ್ರಯೋಗಿಸಿ, ಜರಾಸಂಧನ ಚತುರಂಗ ಸೈನ್ಯವನ್ನು ಸಂಹರಿಸುತ್ತಿದ್ದನು. ಆ ಸಮಯದಲ್ಲಿ ಅವನ ಧನಸ್ಸು ನಿರಂತರವಾಗಿ ತಿರುಗುವ ಕೊಳ್ಳಿಯ ಚಕ್ರದಂತೆ ಕಾಣುತ್ತಿತ್ತು.॥ ೨೪॥ ಸತತವಾದ ಬಾಣಗಳ ಪ್ರಹಾರದಿಂದ ಅನೇಕ ಆನೆಗಳ ಶಿರಸ್ಸುಗಳು ಕತ್ತರಿಸಲ್ಪಟ್ಟು ಸತ್ತು ಬೀಳುತ್ತಿದ್ದವು. ಬಾಣಗಳ ಮಳೆಯಿಂದ ಅನೇಕ ಕುದುರೆಗಳ ತಲೆಗಳು ತುಂಡಾಗಿ ಬೀಳುತ್ತಿದ್ದವು. ಕುದುರೆಗಳೂ, ಧ್ವಜಗಳೂ ಸಾರಥಿಗಳೂ, ರಥಿಕರೂ ಹತರಾಗಿ ಹೋಗುತ್ತಿದ್ದರು. ಪದಾತಿಗಳು ಶ್ರೀಕೃಷ್ಣನ ಚೂಪಾದ ಬಾಣಗಳಿಂದ ಕತ್ತರಿಸಲ್ಪಟ್ಟ ತೋಳು, ತೊಡೆ, ಕುತ್ತಿಗೆಗಳಿಂದ ಆಪ್ಪಳಿಗಿ ಕೆಳಕ್ಕೆ ಬೀಳುತ್ತಿದ್ದರು. ॥ ೨೫ ॥ ಶ್ರೀಕೃಷ್ಣನು ಪ್ರಯೋಗಿಸುತ್ತಿದ್ದ ಬಾಣಗಳಿಂದ ಕತ್ತರಿಸಲ್ಪಟ್ಟ ಪದಾತಿಗಳ, ಕುದುರೆ-ಆನೆಗಳ ಶರೀರದಿಂದ ರಕ್ತವು ಧಾರಾಕಾರವಾಗಿ ಹರಿದು ಅದರಿಂದ ನೂರಾರು ರುಧಿರನದಿಗಳು ಹುಟ್ಟಿಕೊಂಡು ಹರಿಯತೊಡಗಿದವು. ಭಯಂಕರವಾಗಿ ಕಾಣುತ್ತಿದ್ದ ಆ ರಣನದಿಗಳಲ್ಲಿ ಸೈನಿಕರ ತೋಳುಗಳು ನೀರುಹಾವುಗಳಂತೆ ಕಾಣುತ್ತಿದ್ದವು. ಸೈನಿಕರ ತಲೆಗಳು ಆಮೆಗಳಂತಿದ್ದವು. ಸತ್ತು ಬಿದ್ದಿದ್ದ ಮಹಾಗಜಗಳ ಶರೀರಗಳೇ ಆ ರಕ್ತನದಿಯ ದ್ವೀಪಗಳು. ಕುದುರೆಗಳು ಮೊಸಳೆಯಂತಿದ್ದರೆ, ಸೈನಿಕರ ಕತ್ತರಿಸಿ ಬಿದ್ದಿದ್ದ ಕೈ-ಕಾಲುಗಳು ಅದರಲ್ಲಿನ ಮೀನುಗಳಂತೆ ಕಾಣುತ್ತಿದ್ದವು. ಸೈನಿಕರ ತಲೆಕೂದಲುಗಳು ಆ ನದಿಯ ಪಾಚಿಯಂತಿದ್ದರೆ, ತುಂಡು ತುಂಡಾಗಿ ಬಿದ್ದಿದ್ದ ಧನಸ್ಸುಗಳೇ ನದಿಯ ಅಲೆಗಳಂತೆ ಕಾಣುತ್ತಿದ್ದವು. ರಾಶಿ-ರಾಶಿಯಾಗಿ ಬಿದ್ದಿದ್ದ ಆಯುಧಗಳು ನದಿಯ ದಡದಲ್ಲಿರುವ ಪೊದೆಗಳಂತಿದ್ದರೆ, ಗುರಾಣಿಗಳು ರಕ್ತನದಿಯ

ಕರೋರುಮೀನಾ ನರಕೇಶಶೈವಲಾ
ಧನುಸ್ತರಂಗಾಯುಧಗುಲ್ಮಸಂಕುಲಾಃ ।
ಅಚ್ಛೂರಿಕಾವರ್ತಭಯಾನಕಾ ಮಹಾ-
ಮಣಿಪ್ರವೇಕಾಭರಣಾಶ್ಮಶರ್ಕರಾಃ ॥ ೨೭ ॥

ಪ್ರವರ್ತಿತಾ ಭೀರುಭಯಾವಹಾ ಮೃಧೇ
ಮನಸ್ವಿನಾಂ ಹರ್ಷಕರೀಃ ಪರಸ್ಪರಮ್ ।
ವಿನಿಘ್ನತಾರೀನ್ ಮುಸಲೇನ ದುರ್ಮದಾನ್
ಸಂಕರ್ಷಣೇನಾಪರಿಮೇಯತೇಜಸಾ ॥ ೨೮ ॥

ಬಲಂ ತದಂಗಾರ್ಣವದುರ್ಗಭೈರವಂ
ದುರಂತಪಾರಂ ಮಗಧೇಂದ್ರಪಾಲಿತಮ್ ।
ಕ್ಷಯಂ ಪ್ರಣೀತಂ ವಸುದೇವಪುತ್ರಯೋ-
ರ್ವಿಕ್ರೀಡಿತಂ ತಜ್ಜಗದೀಶಯೋಃ ಪರಮ್ ॥ ೨೯ ॥

ಸ್ಥಿತ್ಯುದ್ಭವಾಂತಂ ಭುವನತ್ರಯಸ್ಯ ಯಃ
ಸಮೀಹತೇಽನಂತಗುಣಃ ಸ್ವಲೀಲಯಾ ।
ನ ತಸ್ಯ ಚಿತ್ರಂ ಪರಪಕ್ಷನಿಗ್ರಹಃ
ತಥಾಪಿ ಮರ್ತ್ಯಾನುವಿಧಸ್ಯ ವರ್ಣ್ಯತೇ ॥ ೩೦ ॥

ಜಗ್ರಾಹ ವಿರಥಂ ರಾಮೋ ಜರಾಸಂಧಂ ಮಹಾಬಲಮ್ ।
ಹತಾನೀಕಾವಶಿಷ್ಟಾಸುಂ ಸಿಂಹಃ ಸಿಂಹಮಿವೌಜಸಾ
॥ ೩೧ ॥

ಬಧ್ಯಮಾನಂ ಹತಾರಾತಿಂ ಪಾಶೈರ್ವಾರುಣಮಾನುಷೈಃ ।
ವಾರಯಾಮಾಸ ಗೋವಿಂದಸ್ತೇನ ಕಾರ್ಯಚಿಕೀರ್ಷಯಾ
॥ ೩೨ ॥

ಸ ಮುಕ್ತೋ ಲೋಕನಾಥಾಭ್ಯಾಂ ವ್ರೀಡಿತೋ ವೀರಸಮ್ಮತಃ ।
ತಪಸೇ ಕೃತಸಂಕಲ್ಪೋ ವಾರಿತಃ ಪಥಿ ರಾಜಭಿಃ
॥ ೩೩ ॥

ವಾಕ್ಯೈಃ ಪವಿತ್ರಾರ್ಥಪದೈರ್ನಯನ್ಯೈಃ ಪ್ರಾಕೃತೈರಪಿ ।
ಸ್ವಕರ್ಮಬಂಧಪ್ರಾಪ್ತೋಽಯಂ ಯದುಭಿಸ್ತೇ ಪರಾಭವಃ
॥ ೩೪ ॥

ಸುಳಿಗಳಂತೆ ಕಾಣುತ್ತಿದ್ದವು. ಬಹುಮೂಲ್ಯ ಮಣಿಗಳೂ, ಆಭೂಷಣಗಳೂ ನದಿಯಲ್ಲಿದ್ದ ಬಂಡೆಗಳಂತೆಯೂ, ಮರಳಿನಂತೆಯೂ ಇದ್ದವು. ॥ ೨೬-೨೭ ॥ ಊಹಿಸಲು ಅಸಾಧ್ಯವಾದ ಶಕ್ತಿ ಪರಾಕ್ರಮಗಳಿಂದ ಕೂಡಿದ್ದ ಬಲರಾಮನು ದುರ್ಮದರಾದ ಜರಾಸಂಧನ ಸೈನಿಕರನ್ನು ಮುಸಲಾಯುಧದಿಂದ ಸಂಹರಿಸುತ್ತಾ ಹೇಡಿಗಳಿಗೆ ಭಯವನ್ನೂ, ವೀರರಿಗೆ ಸಂತೋಷವನ್ನು ಉಂಟು ಮಾಡುವ ಅಂತಹ ನೂರಾರು ನದಿಗಳನ್ನು ರಣರಂಗದಲ್ಲಿ ಹರಿಸಿಬಿಟ್ಟನು. ॥ ೨೮ ॥ ಪರೀಕ್ಷಿತನೇ! ಜರಾಸಂಧನ ಆ ಸೈನ್ಯವು ಸಮುದ್ರದಂತೆ ಅತಿದುರ್ಗಮವಾಗಿತ್ತು, ಭಯಂಕರವಾಗಿತ್ತು. ಸಾಮಾನ್ಯರಿಂದ ಜಯಿಸಲು ಅಸಾಧ್ಯವಾಗಿತ್ತು. ಆದರೆ ಜಗದೀಶ್ವರರಾದ ಭಗವಾನ್ ಶ್ರೀಕೃಷ್ಣನು ಮತ್ತು ಬಲರಾಮನು ಅತ್ಯಂತ ಪ್ರಬಲವಾದ ಆ ಸೈನ್ಯವನ್ನು ನಾಶಮಾಡಿಬಿಟ್ಟರು. ಅವರಿಗೆ ಇದೊಂದು ಆಟವೇ ಆಗಿತ್ತು. ॥ ೨೯ ॥ ರಾಜೇಂದ್ರ! ಭಗವಂತನು ಅನಂತವಾದ ಗುಣಗಳುಳ್ಳವನು. ಮಹಾ-ಮಹಿಮನಾದ ಅವನು ಆಡುತ್ತಾಡುತ್ತಲೇ ಮೂರು ಲೋಕಗಳ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. ಅಂತಹವನಿಗೆ ಈ ಶತ್ರುಪಕ್ಷದ ವಿಜಯವು ಹೆಚ್ಚಿನದೇನಲ್ಲ, ಆದರೂ ಮನುಷ್ಯನಾಗಿ ಅವತರಿಸಿದಾಗ, ಮನುಷ್ಯರಂತೆ ಲೀಲೆಯನ್ನು ತೋರಿದಾಗ ಅವುಗಳೂ ಯಥಾವತ್ತಾಗಿ ವರ್ಣಿಸಲ್ಪಡುತ್ತವೆ. ॥ ೩೦ ॥

ಹೀಗೆ ಜರಾಸಂಧನ ಸೈನ್ಯವೆಲ್ಲವೂ ನಿರ್ನಾಮವಾಗಿ ಹೋಯಿತು. ರಥವೂ ಮುರಿದು ಹೋಯಿತು. ಶರೀರದಲ್ಲಿ ಪ್ರಾಣಮಾತ್ರ ಉಳಿದಿತ್ತು. ಆಗ ಭಗವಾನ್ ಬಲರಾಮನು ಒಂದು ಸಿಂಹವು ಮತ್ತೊಂದು ಸಿಂಹವನ್ನು ಹಿಡಿಯುವಂತೆ ಜರಾಸಂಧನನ್ನು ಬಲಪೂರ್ವಕವಾಗಿ ಹಿಡಿದುಕೊಂಡನು. ॥ ೩೧ ॥ ಹಲವಾರು ಶತ್ರುಗಳನ್ನು ಸಂಹರಿಸಿದ್ದ ಜರಾಸಂಧನನ್ನು ಮಾನುಷ ಪಾಶದಿಂದಲೂ, ವರುಣಪಾಶಗಳಿಂದಲೂ ಬಂಧಿಸುತ್ತಿದ್ದನು. ಇವನನ್ನು ಬಿಟ್ಟುಬಿಟ್ಟರೆ ಇನ್ನೂ ಅನೇಕ ಸೈನ್ಯವನ್ನು ಜೊತೆ ಸೇರಿಸಿಕೊಂಡು ಬರುವನು. ಆಗ ಭೂಭಾರಹರಣದ ಕಾರ್ಯವು ಸುಲಭವಾದೀತೆಂದು ಭಗವಾನ್ ಶ್ರೀಕೃಷ್ಣನು ಯೋಚಿಸಿ ಬಲರಾಮನಿಗೆ ಜರಾಸಂಧನನ್ನು ಬಂಧಿಸದಂತೆ ತಡೆದನು. ॥ ೩೨ ॥ ದೊಡ್ಡ-ದೊಡ್ಡ ಪರಾಕ್ರಮಶಾಲಿಗಳೂ ಜರಾಸಂಧನನ್ನು ಸಮ್ಮಾನಿಸುತ್ತಿದ್ದರು. ಬಲರಾಮ-ಕೃಷ್ಣರು ತನ್ನ ಮೇಲೆ ದಯತೋರಿ ದೀನನಂತೆ ಬಿಟ್ಟುಬಿಟ್ಟರು. ಇದರಿಂದ ಅವನಿಗೆ ಅತಿಯಾದ ನಾಚಿಕೆ ಯಾಯಿತು. ಆಗ ಅವನು ಯಾರಿಗೂ ಮುಖತೋರದೆ ತಪಸ್ಸಿಗೆ ಹೋಗಲು ನಿಶ್ಚಯಿಸಿದನು. ಆದರೆ ದಾರಿಯಲ್ಲಿ ಅವನ ಸಂಗಡಿಗರಾದ ರಾಜರು ಅನೇಕ ವಿಧದಿಂದ ಸಮಾಧಾನ ಗೊಳಿಸುತ್ತಾ - ರಾಜನೇ! ಅಲ್ಪಬಲರಾದ ಯಾದವರೆಲ್ಲಿ? ಮಹಾಬಲಶಾಲಿಯಾದ ನೀನೆಲ್ಲಿ? ಅವರು ನಿನ್ನನ್ನು ಖಂಡಿತವಾಗಿ ಸೋಲಿಸಲಾರರು. ನಿನಗೆ ಪ್ರಾರಬ್ಧವಶದಿಂದ ಈ ಸೋಲು ಉಂಟಾಗಿದೆ. ಇದು ದೈವೇಚ್ಛೆಯೇ ಹೊರತು ಬೇರೇನಿಲ್ಲ, ಅವರು ಪುನಃ ವಿಜಯವನ್ನು ಸಂಪಾದಿಸುವ ಆಸೆಯನ್ನು ತೋರಿಸಿ, ಲೌಕಿಕವಾದ ದೃಷ್ಟಾಂತಗಳನ್ನೂ, ಯುಕ್ತಿಗಳನ್ನೂ ಮುಂದಿಟ್ಟು ಅವನು ತಪಸ್ಸಿಗೆ ಹೋಗಬಾರದೆಂದು ಜರಾಸಂಧನನ್ನು ತಡೆದರು.॥೩೩-೩೪॥

ಹತೇಷು ಸರ್ವಾನೀಕೇಷು ನೃಪೋ ಬಾರ್ಹದ್ರಥಸ್ತದಾ ।
ಉಪೇಕ್ಷಿತೋ ಭಗವತಾ ಮಗಧಾನ್ ದುರ್ಮನಾ ಯಯೌ
॥ ೩೫ ॥

ಮುಕುಂದೋಽಪ್ಯಕ್ಷತಬಲೋ ನಿಸ್ತೀರ್ಣಾರಿಬಲಾರ್ಣವಃ ।
ವಿಕೀರ್ಯಮಾಣಃ ಕುಸುಮೈಸ್ತ್ರಿದಶೈರನುಮೋದಿತಃ
॥ ೩೬ ॥

ಮಾಥುರೈರುಪಸಂಗಮ್ಯ ವಿಜ್ವರೈರ್ಮುದಿತಾತ್ಮಭಿಃ ।
ಉಪಗೀಯಮಾನವಿಜಯಃ ಸೂತಮಾಗಧವಂದಿಭಿಃ
॥ ೩೭ ॥

ಶಂಖದುಂದುಭಯೋ ನೇದುರ್ಭೇರಿತೂರ್ಯಾಣ್ಯನೇಕಶಃ ।
ವೀಣಾವೇಣುಮೃದಂಗಾನಿ ಪುರಂ ಪ್ರವಿಶತಿ ಪ್ರಭೌ
॥ ೩೮ ॥

ಸಿಕ್ತಮಾರ್ಗಾಂ ಹೃಷ್ಟಜನಾಂ ಪತಾಕಾಭಿರಲಂಕೃತಾಮ್ ।
ನಿರ್ಘುಷ್ಟಾಂ ಬ್ರಹ್ಮಘೋಷೇಣ ಕೌತುಕಾಬದ್ಧತೋರಣಾಮ್
॥ ೩೯ ॥

ನಿಚೀಯಮಾನೋ ನಾರೀಭಿರ್ಮಾಲ್ಯದಧ್ಯಕ್ಷತಾಂಕುರೈಃ ।
ನಿರೀಕ್ಷ್ಯಮಾಣಃ ಸಸ್ನೇಹಂ ಪ್ರೀತ್ಯುತ್ಕಲಿತಲೋಚನೈಃ
॥ ೪೦ ॥

ಆಯೋಧನಗತಂ ವಿತ್ತಮನಂತಂ ವೀರಭೂಷಣಮ್ ।
ಯದುರಾಜಾಯ ತತ್ ಸರ್ವಮಾಹೃತಂ ಪ್ರಾದಿಶತ್ಪ್ರಭುಃ
॥ ೪೧ ॥

ಏವಂ ಸಪ್ತದಶಕೃತ್ವಸ್ತಾವತ್ಯಕ್ಷೌಹಿಣೀಬಲಃ ।
ಯುಯುಧೇ ಮಾಗಧೋ ರಾಜಾ ಯದುಭಿಃ ಕೃಷ್ಣಪಾಲಿತೈಃ
॥ ೪೨ ॥

ಅಕ್ಷಿಣ್ವಂಸ್ತದ್ಬಲಂ ಸರ್ವಂ ವೃಷ್ಣಯಃ ಕೃಷ್ಣತೇಜಸಾ ।
ಹತೇಷು ಸ್ವೇಷ್ವನೀಕೇಷು ತ್ಯಕ್ತೋಽಯಾದರಿಭಿರ್ನೃಪಃ
॥ ೪೩ ॥

ಅಷ್ಟಾದಶಮಸಂಗ್ರಾಮೇ ಆಗಾಮಿನಿ ತದಂತರಾ ।
ನಾರದಪ್ರೇಷಿತೋ ವೀರೋ ಯವನಃ ಪ್ರತ್ಯದೃಶ್ಯತ
॥ ೪೪ ॥

ಪರೀಕ್ಷಿತನೇ! ಆಗ ಜರಾಸಂಧನ ಎಲ್ಲ ಸೈನ್ಯವೂ ಸತ್ತುಹೋಗಿತ್ತು. ಭಗವಾನ್ ಬಲರಾಮನು ಅವನನ್ನು ಉಪೇಕ್ಷೆಯಿಂದಲೇ ಬಿಟ್ಟು ಬಿಟ್ಟನು. ಇದರಿಂದ ಅವನು ಬಹಳ ದುಃಖಿತನಾಗಿಯೇ ಮಗಧ ದೇಶಕ್ಕೆ ಮರಳಿದನು. ॥ ೩೫ ॥

ಪರೀಕ್ಷಿದ್ರಾಜನೇ! ಭಗವಾನ್ ಶ್ರೀಕೃಷ್ಣನ ಅಲ್ಪವಾದ ಸೈನ್ಯದಲ್ಲಿ ಯಾರ ಕೂದಲೂ ಕೊಂಕಲಿಲ್ಲ, ಜರಾಸಂಧನ ಸಮುದ್ರದಂತೆ ಇದ್ದ ಇಪ್ಪತ್ತಮೂರು ಅಕ್ಷೌಹಿಣೀ ಸೇನೆಯ ಮೇಲೆ ಸಹಜವಾಗಿ ವಿಜಯವನ್ನು ಪಡೆದರು. ಆಗ ದೇವತೆಗಳೂ ವಿಜಯಿಯಾದ ಶ್ರೀಕೃಷ್ಣನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ ಅವನ ಕಾರ್ಯವನ್ನು ಅನುಮೋದಿಸಿದರು. ॥ ೩೬ ॥ ಜರಾಸಂಧನ ಪರಾಜಯದಿಂದ ಮಥುರಾನಿವಾಸಿಗಳು ಭಯರಹಿತರಾಗಿದ್ದರು ಹಾಗೂ ಶ್ರೀಕೃಷ್ಣನ ವಿಜಯದಿಂದ ಅವರ ಹೃದಯ ಆನಂದದಿಂದ ತುಂಬಿಹೋಗಿತ್ತು. ಶ್ರೀಕೃಷ್ಣನು ಬಂದು ಅವರೊಡನೆ ಸೇರಿಕೊಂಡಾಗ ಸೂತ, ಮಾಗಧ, ವಂದೀ ಜನರು ಅವನ ವಿಜಯೋತ್ಸವದ ವೀರಗೀತೆಗಳನ್ನು ಹಾಡುತ್ತಿದ್ದರು. ॥ ೩೭ ॥ ಭಗವಾನ್ ಶ್ರೀಕೃಷ್ಣನು ನಗರವನ್ನು ಪ್ರವೇಶಿಸಿದಾಗ ಅಲ್ಲಿ ಶಂಖ, ಭೇರಿ, ದುಂದುಭಿ, ವೀಣೆ, ವೇಣು, ಮೃದಂಗವೇ ಮೊದಲಾದ ಮಂಗಳ ವಾದ್ಯಗಳು ಮೊಳಗುತ್ತಿದ್ದವು. ॥ ೩೮ ॥ ಮಥುರೆಯ ಪ್ರತಿಯೊಂದು ಬೀದಿಯನ್ನೂ ಗುಡಿಸಿ-ಸಾರಿಸಿದ್ದರು. ಎಲ್ಲೆಲ್ಲೂ ಉತ್ಸಾಹದಿಂದ ಪ್ರಜಾಜನರು ಓಡಾಡುತ್ತಿದ್ದರು. ಇಡೀ ನಗರವು ಸಣ್ಣ-ಸಣ್ಣ ಬಾವುಟಗಳಿಂದಲೂ, ದೊಡ್ಡ-ದೊಡ್ಡ ವಿಜಯ ಪತಾಕೆಗಳಿಂದಲೂ ಅಲಂಕರಿಸಲ್ಪಟ್ಟಿತ್ತು. ಬ್ರಾಹ್ಮಣರ ವೇದ ಧ್ವನಿಗಳು ನಿನಾದಿತವಾಗುತ್ತಿದ್ದವು. ಆನಂದೋತ್ಸವದ ಸೂಚಕವಾಗಿ ಎಲ್ಲೆಡೆ ತೋರಣಗಳನ್ನು ಕಟ್ಟಿದ್ದರು. ॥ ೩೯ ॥ ಶ್ರೀಕೃಷ್ಣನು ನಗರವನ್ನು ಪ್ರವೇಶಿಸುತ್ತಿರುವಾಗ ನಗರದ ನಾರಿಯರು ಪ್ರೇಮೋತ್ಕಂಠಿತೆಯರಾಗಿ, ಸ್ನೇಹಪೂರ್ವಕವಾದ ಕಣ್ಣುಗಳಿಂದ ಅವನನ್ನು ದಿಟ್ಟಿಸುತ್ತಾ, ಹೂವಿನ ಹಾರಗಳನ್ನು, ಮೊಸರು ಬೆರೆಸಿದ ಅಕ್ಷತೆಗಳನ್ನು, ಧಾನ್ಯದ ಮೊಳಕೆಗಳನ್ನು ಶ್ರೀಕೃಷ್ಣನ ಮೇಲೆ ಎರಚುತ್ತಿದ್ದರು. ॥ ೪೦ ॥ ಭಗವಾನ್ ಶ್ರೀಕೃಷ್ಣನು ರಣಭೂಮಿಯಿಂದ ಅಪಾರ ಧನವನ್ನು ಮತ್ತು ವೀರರ ಆಭೂಷಣಗಳನ್ನು ತಂದಿದ್ದನು. ಅದೆಲ್ಲವನ್ನೂ ಯದುವಂಶೀಯ ರಾಜನಾದ ಉಗ್ರಸೇನನಿಗೆ ಒಪ್ಪಿಸಿದನು. ॥ ೪೧ ॥

ಪರೀಕ್ಷಿತನೇ! ಹೀಗೆ ಮಗಧರಾಜ ಜರಾಸಂಧನು ಹದಿನೇಳು ಬಾರಿ ಇಪ್ಪತ್ತಮೂರು-ಇಪ್ಪತ್ತಮೂರು ಅಕ್ಷೌಹಿಣಿ ಸೈನ್ಯವನ್ನು ಸೇರಿಸಿ ಭಗವಾನ್ ಶ್ರೀಕೃಷ್ಣನಿಂದ ರಕ್ಷಿತವಾದ ಯದುವಂಶೀಯರೊಡನೆ ಯುದ್ಧಮಾಡಿದನು. ॥ ೪೨ ॥ ಆದರೆ ಯಾದವರು ಶ್ರೀಕೃಷ್ಣನ ಶಕ್ತಿಯಿಂದ ಪ್ರತಿಬಾರಿಯೂ ಅವನ ಸೈನ್ಯವನ್ನು ನಾಶಮಾಡಿದರು. ಸೈನ್ಯವೆಲ್ಲವೂ ನಾಶವಾದಾಗ ಯದುವಂಶೀಯರು ಉಪೇಕ್ಷೆಯಿಂದ ಬಿಟ್ಟುಬಿಟ್ಟಾಗ ಜರಾಸಂಧನು ತನ್ನ ರಾಜಧಾನಿಗೆ ಮರಳುತ್ತಿದ್ದನು. ॥ ೪೩ ॥ ಮಾಗಧನು ಹದಿನೆಂಟನೆಯ ಬಾರಿಯೂ ಸಂಗ್ರಾಮದ ಸಿದ್ಧತೆ ಮಾಡಿಕೊಂಡಾಗಲೇ ನಾರದರಿಂದ ಕಳುಹಲ್ಪಟ್ಟ ವೀರಕಾಲಯವನು ಕಾಣಿಸಿಕೊಂಡನು ॥ ೪೪ ॥

ರುರೋಧ ಮಥುರಾಮೇತ್ಯ ತಿಸೃಭಿರ್ಮ್ಲೇಚ್ಛಕೋಟಿಭಿಃ ।
ನೃಲೋಕೇ ಚಾಪ್ರತಿದ್ವಂದ್ವೋ ವೃಷ್ಣೀನ್ ಶ್ರುತ್ವಾಽಽತ್ಮಸಂಮಿತಾನ್
॥ ೪೫ ॥

ತಂ ದೃಷ್ಟ್ವಾಚಿಂತಯತ್ ಕೃಷ್ಣಃ ಸಂಕರ್ಷಣಸಹಾಯವಾನ್ ।
ಅಹೋ ಯದೂನಾಂ ವೃಜಿನಂ ಪ್ರಾಪ್ತಂ ಹ್ಯುಭಯತೋ ಮಹತ್
॥ ೪೬ ॥

ಯವನೋಽಯಂ ನಿರುಂಧೇಽಸ್ಮಾನದ್ಯ ತಾವನ್ಮಹಾಬಲಃ ।
ಮಾಗಧೋಽಪ್ಯದ್ಯ ವಾ ಶ್ವೋ ವಾ ಪರಶ್ವೋ ವಾಽಽಗಮಿಷ್ಯತಿ
॥ ೪೭ ॥

ಆವಯೋರ್ಯುಧ್ಯತೋರಸ್ಯ ಯದ್ಯಾಗಂತಾ ಜರಾಸುತಃ ।
ಬಂಧೂನ್ ವಧಿಷ್ಯತ್ಯಥವಾ ನೇಷ್ಯತೇ ಸ್ವಪುರಂ ಬಲೀ
॥ ೪೮ ॥

ತಸ್ಮಾದದ್ಯ ವಿಧಾಸ್ಯಾಮೋ ದುರ್ಗಂ ದ್ವಿಪದದುರ್ಗಮಮ್ ।
ತತ್ರ ಜ್ಞಾತೀನ್ ಸಮಾಧಾಯ ಯವನಂ ಘಾತಯಾಮಹೇ
॥ ೪೯ ॥

ಇತಿ ಸಮ್ಮಂತ್ರ್ಯ ಭಗವಾನ್ ದುರ್ಗಂ ದ್ವಾದಶಯೋಜನಮ್ ।
ಅಂತಃ ಸಮುದ್ರೇ ನಗರಂ ಕೃತ್ಸ್ನಾದ್ಭುತಮಚೀಕರತ್
॥ ೫೦ ॥

ದೃಶ್ಯತೇ ಯತ್ರ ಹಿ ತ್ವಾಷ್ಟ್ರಂ ವಿಜ್ಞಾನಂ ಶಿಲ್ಪನೈಪುಣಮ್ ।
ರಥ್ಯಾಚತ್ವರವೀಥೀಭಿರ್ಯಥಾವಾಸ್ತು ವಿನಿರ್ಮಿತಮ್
॥ ೫೧ ॥

ಸುರದ್ರುಮಲತೋದ್ಯಾನವಿಚಿತ್ರೋಪವನಾನ್ವಿತಮ್ ।
ಹೇಮಶೃಂಗೈರ್ದಿವಿಸ್ಪೃಗ್ಭಿಃ ಸ್ಫಾಟಿಕಾಟ್ಟಾಲಗೋಪುರೈಃ
॥ ೫೨ ॥

ರಾಜತಾರಕುಟೈಃ ಕೋಷ್ಠೈರ್ಹೇಮಕುಂಭೈರಲಂಕೃತೈಃ ।
ರತ್ನಕೂಟೈಃ ಗೃಹೈಃ ಹೈಮೈಃ ಮಹಾಮರಕತಸ್ಥಲೈಃ
॥ ೫೩ ॥

ವಾಸ್ತೋಷ್ಪತೀನಾಂ ಚ ಗೃಹೈರ್ವಲಭೀಭಿಶ್ಚ ನಿರ್ಮಿತಮ್ ।
ಚಾತುರ್ವರ್ಣ್ಯಜನಾಕೀರ್ಣಂ ಯದುದೇವಗೃಹೋಲ್ಲಸತ್
॥ ೫೪ ॥

ಯುದ್ಧದಲ್ಲಿ ಕಾಲಯವನ ಮುಂದೆ ನಿಲ್ಲಬಲ್ಲ ವೀರನು ಪ್ರಪಂಚದಲ್ಲೇ ಇನ್ನೊಬ್ಬನಿರಲಿಲ್ಲ. ಯದುವಂಶೀಯರು ನನ್ನಂತೆಯೇ ಬಲಶಾಲಿಗಳಾಗಿದ್ದಾರೆ ಮತ್ತು ನನ್ನೊಡನೆ ಯುದ್ಧಮಾಡಬಲ್ಲರು ಎಂದು ಕೇಳಿದಾಗ ಅವನು ಮೂರು ಕೋಟಿ ಮ್ಲೇಚ್ಛರ ಸೇನೆಯೊಂದಿಗೆ ಬಂದು ಮಥುರೆಯನ್ನು ಮುತ್ತಿದನು. ॥ ೪೫ ॥ ಕಾಲಯವನನು ಮಥುರಾ ಪಟ್ಟಣವನ್ನು ಆಕ್ರಮಿಸಿದುದನ್ನು ಕಂಡು ಸಂಕರ್ಷಣನಿಗೆ ಸಹಾಯಕನಾದ ಶ್ರೀಕೃಷ್ಣನು ಅವನೊಡನೆ ಯೋಚಿಸಿದನು - ಅಯ್ಯೋ! ಈ ಸಮಯದಲ್ಲಿ ಜರಾಸಂಧ ಮತ್ತು ಕಾಲಯವನ ಈ ಇಬ್ಬರೂ ಬಂದಿರುತ್ತಾರೆ. ಇದರಿಂದ ಯಾದವರ ಮೇಲೆ ಎರಡು ಆಪತ್ತುಗಳು ಏಕಕಾಲದಲ್ಲಿ ಸಂಭವಿಸಿವೆ. ॥ ೪೬ ॥ ಇಂದು ಕಾಲಯವನನು ಮೂರುಕೋಟಿ ಮ್ಲೇಚ್ಛಸೈನ್ಯಸಮೇತನಾಗಿ ಬಂದು ಆಕ್ರಮಿಸಿರುವನು. ಇಂದೋ ನಾಳೆಯೋ ಜರಾಸಂಧನೂ ಬರಬಹುದು. ॥ ೪೭ ॥ ನಾವಿಬ್ಬರೂ ಇವನೊಡನೆ ಯುದ್ಧದಲ್ಲಿ ತೊಡಗಿದಾಗಲೇ ಜರಾಸಂಧನು ಬಂದು ತಲುಪಿದರೆ ಮಹಾಬಲಿಷ್ಠನಾದ ಅವನು ನಮ್ಮ ಬಂಧುಗಳನ್ನೆಲ್ಲ ಕೊಂದು ಹಾಕಬಹುದು ಅಥವಾ ಸೆರೆಹಿಡಿದುಕೊಂಡು ತನ್ನ ನಗರಕ್ಕೆ ಕೊಂಡು ಹೋಗಬಹುದು. ॥ ೪೮ ॥ ಅದಕ್ಕಾಗಿ ಇಂದು ನಾವು ಯಾವುದೇ ಮನುಷ್ಯನಿಗೆ ಪ್ರವೇಶಿಸಲು ಅತ್ಯಂತ ಕಠಿಣವಾದ ಒಂದು ದುರ್ಗವನ್ನು ನಿರ್ಮಾಣಮಾಡೋಣ. ನಮ್ಮ ಸ್ವಜನ-ಸಂಬಂಧಿಗಳನ್ನು ಆ ಕೋಟೆಯಲ್ಲಿ ಇರಿಸಿ ಮತ್ತೆ ಈ ಕಾಲಯವನ ವಧೆ ಮಾಡಿಸೋಣ. ॥ ೪೯ ॥ ಬಲರಾಮನೊಂದಿಗೆ ಹೀಗೆ ವಿಚಾರ ವಿನಿಯಮ ಮಾಡಿ ಭಗವಾನ್ ಶ್ರೀಕೃಷ್ಣನು ಸಮುದ್ರದ ಮಧ್ಯದಲ್ಲಿ ಒಂದು ದುರ್ಗಮವಾದ ನಗರವನ್ನು ನಿರ್ಮಿಸಿದನು. ಅದರಲ್ಲಿ ಎಲ್ಲ ವಸ್ತುಗಳೂ ಅದ್ಭುತವಾಗಿದ್ದವು. ಆ ನಗರದ ಉದ್ದಗಲವು ಹನ್ನೆರಡು ಯೋಜನಗಳಷ್ಟಿತ್ತು. ॥ ೫೦ ॥ ಆ ನಗರದ ಒಂದೊಂದು ವಸ್ತುಗಳಲ್ಲೂ ವಿಶ್ವಕರ್ಮನ ವಾಸ್ತುವಿಜ್ಞಾನವು ಹಾಗೂ ಶಿಲ್ಪಕಲೆಯ ನೈಪುಣ್ಯವು ಪ್ರಕಟವಾಗಿತ್ತು. ಅದರಲ್ಲಿ ವಾಸ್ತುಶಾಸ್ತ್ರಕ್ಕನುಸಾರವಾಗಿ ದೊಡ್ಡ-ದೊಡ್ಡ ರಾಜಬೀದಿಗಳೂ, ವೃತ್ತಗಳೂ, ಇತರ ಮಾರ್ಗಗಳೂ ಯಥಾಸ್ಥಾನಗಳಲ್ಲಿ ವಿಭಾಜಿಸಲ್ಪಟ್ಟಿತ್ತು. ॥ ೫೧ ॥ ಆ ನಗರದಲ್ಲಿ ಪಾರಿಜಾತವೇ ಮೊದಲಾದ ದೇವತಾವೃಕ್ಷಗಳಿಂದಲೂ, ಲತೆಗಳಿಂದಲೂ ಸಂಪನ್ನವಾಗಿದ್ದ ಸುಂದರವಾದ ಉದ್ಯಾನವನಗಳೂ ಮತ್ತು ಚಿತ್ರ-ವಿಚಿತ್ರವಾದ ಉಪವನಗಳೂ ಇದ್ದವು. ಅಲ್ಲಿ ಆಕಾಶವನ್ನು ಮುಟ್ಟುತ್ತಿದ್ದ ಸ್ವರ್ಣಗೋಪುರಗಳಿಂದಲೂ, ಸ್ಫಟಿಕಮಯವಾದ ಉಪ್ಪರಿಗೆಗಳಿಂದಲೂ, ಬಹಿರ್ದ್ವಾರಗಳಿಂದಲೂ ಅತ್ಯಂತ ಸುಂದರವಾಗಿ ಕಾಣುತ್ತಿತ್ತು.॥೫೨॥ ಬೆಳ್ಳಿ ಮತ್ತು ಹಿತ್ತಾಳೆಗಳಿಂದ ನಿರ್ಮಿಸಿದ ಅನೇಕ ಧಾನ್ಯಭಂಡಾರಗಳಿದ್ದವು. ಕುಸುರಿ ಕೆಲಸಗಳಿಂದ ಕೂಡಿದ ಚಿನ್ನದ ಕಲಶಗಳಿಂದ ಅಲಂಕೃತವಾದ ಮಹಾ-ಮಹಾ ಸೌಧಗಳಿದ್ದು, ಮರಕತಮಯವಾಗಿದ್ದ ಅದರ ನೆಲಗಳಿಂದ ಆ ದ್ವಾರಕಾ ಪಟ್ಟಣವು ಸುಂದರವಾಗಿ ಶೋಭಿಸುತ್ತಿತ್ತು. ॥ ೫೩ ॥ ಚಂದ್ರಶಾಲೆಗಳೊಡನೆ ನಿರ್ಮಿಸಿದ ವಾಸ್ತುದೇವತೆಯ ಮಂದಿರಗಳು ನಿರ್ಮಾಣಗೊಂಡಿದ್ದವು. ಅದರಲ್ಲಿ ನಾಲ್ಕು ವರ್ಣದವರೂ ವಾಸಿಸುತ್ತಿದ್ದು, ನಗರದ ಮಧ್ಯದಲ್ಲಿ ಯದುವಂಶ ಪ್ರಧಾನರಾದ ಉಗ್ರಸೇನ, ವಸುದೇವ, ಬಲರಾಮ, ಶ್ರೀಕೃಷ್ಣರೇ ಮೊದಲಾದವರ ಅರಮನೆಗಳು ಪ್ರಕಾಶಿಸುತ್ತಿದ್ದವು. ॥ ೫೪ ॥

ಸುಧರ್ಮಾಂ ಪಾರಿಜಾತಂ ಚ ಮಹೇಂದ್ರಃ ಪ್ರಾಹಿಣೋದ್ಧರೇಃ ।
ಯತ್ರ ಚಾವಸ್ಥಿತೋ ಮರ್ತ್ಯೋ ಮರ್ತ್ಯಧರ್ಮೈರ್ನ ಯುಜ್ಯತೇ
॥ ೫೫ ॥

ಶ್ಯಾಮೈಕಕರ್ಣಾನ್ ವರುಣೋ
ಹಯಾನ್‌ಶುಕ್ಲಾನ್ ಮನೋಜವಾನ್ ।
ಅಷ್ಟೌ ನಿಧಿಪತಿಃ ಕೋಶಾನ್
ಲೋಕಪಾಲೋ ನಿಜೋದಯಾನ್ ॥ ೫೬ ॥

ಯದ್ಯದ್ಭಗವತಾ ದತ್ತಮಾಧಿಪತ್ಯಂ ಸ್ವಸಿದ್ಧಯೇ ।
ಸರ್ವಂ ಪ್ರತ್ಯರ್ಪಯಾಮಾಸುರ್ಹರೌ ಭೂಮಿಗತೇ ನೃಪ
॥ ೫೭ ॥

ತತ್ರ ಯೋಗಪ್ರಭಾವೇಣ ನೀತ್ವಾ ಸರ್ವಜನಂ ಹರಿಃ ।
ಪ್ರಜಾಪಾಲೇನ ರಾಮೇಣ ಕೃಷ್ಣಃ ಸಮನುಮಂತ್ರಿತಃ ।
ನಿರ್ಜಗಾಮ ಪುರದ್ವಾರಾತ್ ಪದ್ಮಮಾಲೀ ನಿರಾಯುಧಃ
॥ ೫೮ ॥

ಪರೀಕ್ಷಿತನೇ! ಆ ಸಮಯದಲ್ಲಿ ದೇವೇಂದ್ರನು ಭಗವಾನ್ ಶ್ರೀಕೃಷ್ಣನಿಗಾಗಿ ಪಾರಿಜಾತವೃಕ್ಷ ಮತ್ತು ಸುಧರ್ಮಾ ಎಂಬ ಸಭೆಯನ್ನು ಕಳುಹಿಸಿಕೊಟ್ಟನು. ಆ ದಿವ್ಯವಾದ ಸಭೆಯಲ್ಲಿ ಕುಳಿತವನಿಗೆ ಹಸಿವು-ಬಾಯಾರಿಕೆ ಮುಂತಾದ ಮರ್ತ್ಯಧರ್ಮವಿರುತ್ತಿರಲಿಲ್ಲ. ॥ ೫೫ ॥ ಒಂದು ಕಿವಿಮಾತ್ರ ಕಪ್ಪಾಗಿದ್ದು ಬಿಳಿಯ ಬಣ್ಣದಿಂದ ಪ್ರಕಾಶಿಸುತ್ತಿದ್ದ ಮನೋವೇಗಕ್ಕೆ ಸಮಾನ ವೇಗವುಳ್ಳ ಹಲವಾರು ಕುದುರೆಗಳನ್ನೂ ವರುಣನು ಕಳಿಸಿಕೊಟ್ಟನು. ಧನಪತಿಯಾದ ಕುಬೇರನು ತನ್ನ ಎಂಟು ನಿಧಿಗಳನ್ನೂ ಕಳಿಸಿಕೊಟ್ಟನು. ಲೋಕಪಾಲರೂ ಕೂಡ ತಮ್ಮ-ತಮ್ಮ ವಿಭೂತಿಗಳನ್ನು ಭಗವಂತನ ಬಳಿಗೆ ಕಳಿಸಿಕೊಟ್ಟರು. ॥ ೫೬ ॥ ಪರೀಕ್ಷಿತನೇ! ಸಮಸ್ತ ಲೋಕಪಾಲರಿಗೂ ಭಗವಾನ್ ಶ್ರೀಕೃಷ್ಣನು ಅವರವರ ಕಾರ್ಯವನ್ನು ನಿರ್ವಹಿಸಬೇಕಾದ ಶಕ್ತಿಗಳನ್ನೂ, ಸಿದ್ಧಿಗಳನ್ನೂ ದಯಪಾಲಿಸಿದ್ದನು. ಶ್ರೀಕೃಷ್ಣನು ಪೃಥಿವಿಯಲ್ಲಿ ಅವತರಿಸಿ, ಲೀಲೆಗಳನ್ನು ತೋರಿಸಲು ಪ್ರಾರಂಭಿಸಿದಾಗ ಲೋಕಪಾಲರೆಲ್ಲರೂ ತಮ್ಮಲ್ಲಿದ್ದ ಸಿದ್ಧಿಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದರು. ॥ ೩.೭ ॥ ಭಗವಾನ್ ಶ್ರೀಕೃಷ್ಣನು ತನ್ನ ಸಮಸ್ತ ಸ್ವಜನ ಸಂಬಂಧಿಗಳನ್ನು ತನ್ನ ಅಚಿಂತ್ಯವಾದ ಮಹಾಶಕ್ತಿಯಾದ ಯೋಗಮಾಯೆಯಿಂದ ದ್ವಾರಕೆಗೆ ಕರೆತಂದನು. ಉಳಿದ ಪ್ರಜೆಗಳ ರಕ್ಷಣೆಯನ್ನು ಬಲರಾಮನಿಗೆ ಒಪ್ಪಿಸಿ, ಅವನಿಂದ ಅನುಮತಿಯನ್ನು ಪಡೆದು ಭಗವಂತನು ಕಮಲದ ಮಾಲೆಯನ್ನು ಧರಿಸಿ ನಿರಾಯುಧನಾಗಿ ಪಟ್ಟಣದ ಮಹಾದ್ವಾರದಿಂದ ಹೊರಬಿದ್ದನು. ॥ ೫೮ ॥

*ಐವತ್ತನೆಯ ಅಧ್ಯಾಯವು ಮುಗಿಯಿತು. ॥ ೫೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ದುರ್ಗನಿವೇಶನಂ ನಾಮ ಪಂಚಾಶತ್ತಮೋಽಧ್ಯಾಯಃ ॥ ೫೦ ॥

# ಐವತ್ತೊಂದನೆಯ ಅಧ್ಯಾಯ

## ಕಾಲಯವನನು ಭಸ್ಮವಾದುದು – ಮುಚುಕುಂದನ ಕಥೆ

*ಶ್ರೀಶುಕ ಉವಾಚ*

ತಂ ವಿಲೋಕ್ಯ ವಿನಿಷ್ಕ್ರಾಂತಮುಜ್ಜಿಹಾನಮಿವೋಡುಪಮ್ ।
ದರ್ಶನೀಯತಮಂ ಶ್ಯಾಮಂ ಪೀತಕೌಶೇಯವಾಸಸಮ್
॥ ೧ ॥

ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಾಮುಕ್ತಕಂಧರಮ್ ।
ಪೃಥುದೀರ್ಘಚತುರ್ಬಾಹುಂ ನವಕಂಜಾರುಣೇಕ್ಷಣಮ್
॥ ೨ ॥

ನಿತ್ಯಪ್ರಮುದಿತಂ ಶ್ರೀಮತ್ಸುಕಪೋಲಂ ಶುಚಿಸ್ಮಿತಮ್ ।
ಮುಖಾರವಿಂದಂ ಬಿಭ್ರಾಣಂ ಸ್ಫುರನ್ಮಕರಕುಂಡಲಮ್
॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತ ಮಹಾರಾಜ! ಮಥುರಾಪಟ್ಟಣದ ಮಹಾದ್ವಾರದಿಂದ ಹೊರಬಂದ ಶ್ರೀಕೃಷ್ಣನು ಆಗತಾನೆ ಉದಯಿಸಿದ ಪೂರ್ಣಚಂದ್ರನಂತೆ ಅತ್ಯಂತ ಸುಂದರವಾಗಿ ಕಾಣುತ್ತಿದ್ದನು. ಶ್ಯಾಮಲವರ್ಣನಾದ ಅವನು ದಿವ್ಯವಾದ ಪೀತಾಂಬರವನ್ನು ಉಟ್ಟಿದ್ದನು. ಅವನ ವಕ್ಷಸ್ಥಳದಲ್ಲಿ ಶ್ರೀವತ್ಸದ ಚಿಹ್ನೆಯಿತ್ತು. ಕೊರಳಲ್ಲಿ ಕೌಸ್ತುಭಮಣಿಯು ಹೊಳೆಯುತ್ತಿತ್ತು. ಅವನಿಗೆ ದಪ್ಪವಾಗಿಯೂ, ನೀಳವಾಗಿಯೂ ಇದ್ದ ನಾಲ್ಕು ಭುಜಗಳಿದ್ದವು. ಆಗ ತಾನೇ ಅರಳಿದ ಕಮಲದಂತಹ ಕಣ್ಣುಗಳನ್ನು ಹೊಂದಿದ್ದನು. ಮುಖಕಮಲದಲ್ಲಿ ರಾಶಿ-ರಾಶಿಯಾಗಿ ಆನಂದವು ಮಿನುಗುತ್ತಿತ್ತು. ಅವನ ಮಂದ-ಮಂದ ಮುಗುಳು ನಗೆಯು ನೋಡುವವರ ಮನಸ್ಸನ್ನು ಅಪಹರಿಸುತ್ತಿತ್ತು. ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳು ಓಲಾಡುತ್ತಿದ್ದವು. ಅವನನ್ನು ನೋಡಿದ ಕಾಲಯವನನು – ಇವನೇ ವಾಸುದೇವನೂ ಮತ್ತು ನಾರದರು

ವಾಸುದೇವೋ ಹ್ಯಯಮಿತಿ ಪುಮಾನ್ ಶ್ರೀವತ್ಸಲಾಂಛನಃ ।
ಚತುರ್ಭುಜೋಽರವಿಂದಾಕ್ಷೋ ವನಮಾಲ್ಯತಿಸುಂದರಃ
॥ ೪ ॥

ಲಕ್ಷಣೈರ್ನಾರದಪ್ರೋಕ್ತೈರ್ನಾನ್ಯೋ ಭವಿತುಮರ್ಹತಿ ।
ನಿರಾಯುಧಶ್ಚಲನ್ ಪದ್ಭ್ಯಾಂ ಯೋತ್ಸ್ಯೇಽನೇನ ನಿರಾಯುಧಃ
॥ ೫ ॥

ಇತಿ ನಿಶ್ಚಿತ್ಯ ಯವನಃ ಪ್ರಾದ್ರವಂತಂ ಪರಾಙ್ಮುಖಮ್ ।
ಅನ್ವಧಾವಜ್ಜಿಘೃಕ್ಷುಸ್ತಂ ದುರಾಪಮಪಿ ಯೋಗಿನಾಮ್
॥ ೬ ॥

ಹಸ್ತಪ್ರಾಪ್ತಮಿವಾತ್ಮಾನಂ ಹರಿಣಾ ಸ ಪದೇ ಪದೇ ।
ನೀತೋ ದರ್ಶಯತಾ ದೂರಂ ಯವನೇಶೋಽದ್ರಿಕಂದರಮ್
॥ ೭ ॥

ಪಲಾಯನಂ ಯದುಕುಲೇ ಜಾತಸ್ಯ ತವ ನೋಚಿತಮ್ ।
ಇತಿ ಕ್ಷಿಪನ್ನನುಗತೋ ನೈನಂ ಪ್ರಾಪಾಹತಾಶುಭಃ
॥ ೮ ॥

ಏವಂ ಕ್ಷಿಪ್ತೋಽಪಿ ಭಗವಾನ್ ಪ್ರಾವಿಶದ್ಗಿರಿಕಂದರಮ್ ।
ಸೋಽಪಿ ಪ್ರವಿಷ್ಟಸ್ತತ್ರಾನ್ಯಂ ಶಯಾನಂ ದದೃಶೇ ನರಮ್
॥ ೯ ॥

ನನ್ವಸೌ ದೂರಮಾನೀಯ ಶೇತೇ ಮಾಮಿಹ ಸಾಧುವತ್ ।
ಇತಿ ಮತ್ವಾಚ್ಯುತಂ ಮೂಢಸ್ತಂ ಪದಾ ಸಮತಾಡಯತ್
॥ ೧೦ ॥

ಸ ಉತ್ಥಾಯ ಚಿರಂ ಸುಪ್ತಃ ಶನೈರುನ್ಮೀಲ್ಯ ಲೋಚನೇ ।
ದಿಶೋ ವಿಲೋಕಯನ್ ಪಾರ್ಶ್ವೇ ತಮದ್ರಾಕ್ಷೀದವಸ್ಥಿತಮ್
॥ ೧೧ ॥

ಸ ತಾವತ್ತಸ್ಯ ರುಷ್ಟಸ್ಯ ದೃಷ್ಟಿಪಾತೇನ ಭಾರತ ।
ದೇಹಜೇನಾಗ್ನಿನಾ ದಗ್ಧೋ ಭಸ್ಮಸಾದಭವತ್ ಕ್ಷಣಾತ್
॥ ೧೨ ॥

ರಾಜೋವಾಚ

ಕೋ ನಾಮ ಸ ಪುಮಾನ್ ಬ್ರಹ್ಮನ್ ಕಸ್ಯ ಕಿಂವೀರ್ಯ ಏವ ಚ ।
ಕಸ್ಮಾದ್ಗುಹಾಂ ಗತಃ ಶಿಶ್ಯೇ ಕಿಂತೇಜೋ ಯವನಾರ್ದನಃ
॥ ೧೩ ॥

ಹೇಳಿದ್ದಂತೆ ಅವನು ಶ್ರೀವತ್ಸಲಾಂಛನನಾಗಿದ್ದನು. ಚತುರ್ಭುಜನಾಗಿದ್ದನು. ಕಮಲಾಕ್ಷನಾಗಿದ್ದನು. ವನಮಾಲಿಯಾಗಿದ್ದನು. ಕಡು ಚೆಲುವನೂ ಆಗಿದ್ದನು. ಇವನು ಶ್ರೀಕೃಷ್ಣನಲ್ಲದೆ ಬೇರೆಯವನಲ್ಲವೆಂದು ನಿಶ್ಚಯಿಸಿದನು. ಅವನು ಆಯುಧ ರಹಿತನಾಗಿ ಕಾಲ್ನಡಿಗೆಯಲ್ಲೇ ಹೋಗುತ್ತಿರುವುದರಿಂದ ತಾನೂ ನಿರಾಯುಧನಾಗಿಯೇ ಇವನೊಂದಿಗೆ ಯುದ್ಧಮಾಡುವೆನೆಂದು ಕಾಲಯವನನು ನಿಶ್ಚಯಿಸಿದನು. ॥ ೧-೫ ॥

ಹೀಗೆ ನಿಶ್ಚಯಿಸಿದ ಕಾಲಯವನನು ತನಗೆ ಬೆನ್ನುತೋರಿ ಓಡಿ ಹೋಗುತ್ತಿದ್ದ, ಯೋಗಿಗಳಿಂದಲೂ ಹೊಂದಲು ಅಸಾಧ್ಯನಾಗಿದ್ದ ಶ್ರೀಕೃಷ್ಣನನ್ನು ಹಿಡಿಯಲಿಕ್ಕಾಗಿ ಅವನನ್ನು ಬೆನ್ನಟ್ಟಿಕೊಂಡು ಹೋದನು. ॥ ೬ ॥ ಶ್ರೀಕೃಷ್ಣನು ಪ್ರತಿಯೊಂದು ಹೆಜ್ಜೆಯಲ್ಲೂ ಸಿಕ್ಕಿಬಿದ್ದನೆಂದೇ ಕಾಲಯವನನಿಗೆ ಭಾಸವಾಗುತ್ತಿತ್ತು. ಆದರೆ ಲೀಲಾ ಮಾನುಷ ವಿಗ್ರಹನಾದ ಶ್ರೀಕೃಷ್ಣನು ಮಾತ್ರ ಅವನ ಕೈಗೆ ಸಿಗುತ್ತಿರಲಿಲ್ಲ. ಹೀಗೆ ಕಾಲಯವನನ್ನು ದೂರದ ಪರ್ವತ ಗುಹೆಯ ಬಳಿಗೆ ಕರದೊಯ್ದನು. ॥ ೭ ॥ ಶ್ರೀಕೃಷ್ಣನನ್ನು ಹಿಡಿದು ಬಿಡಬೇಕೆಂದು ಅವನ ಹಿಂದೆಯೇ ಓಡುತ್ತಿದ್ದ ಕಾಲಯವನನು ಗಟ್ಟಿಯಾಗಿ ಕೂಗಿ ಶ್ರೀಕೃಷ್ಣನಿಗೆ ಹೇಳಿದನು - ಶ್ರೇಷ್ಠವಾದ ಯದುವಂಶದಲ್ಲಿ ಹುಟ್ಟಿರುವ ನಿನಗೆ ಯುದ್ಧದಿಂದ ಪಲಾಯನ ಮಾಡುವುದು ಉಚಿತವಲ್ಲ. ಹೀಗೆ ಆಕ್ಷೇಪಿಸುತ್ತಾ ಮುಂದೆ-ಮುಂದೆ ಹೋಗುತ್ತಿದ್ದರೂ ಕಾಲಯವನನಿಗೆ ಪಾಪ ಶೇಷವು ಇನ್ನೂ ಇದ್ದುದರಿಂದ ಭಗವಂತನು ಅವನ ಕೈಗೆ ಸಿಗಲಿಲ್ಲ. ॥ ೮ ॥ ಹೀಗೆ ಅವನು ಆಕ್ಷೇಪಿಸುತ್ತಿದ್ದರೂ ಅದನ್ನು ಲಕ್ಷಿಸದೆ ಭಗವಂತನು ಆ ಪರ್ವತದ ಗುಹೆಯೊಳಗೆ ಹೊಕ್ಕನು. ಅವನ ಹಿಂದೆಯೇ ಕಾಲಯವನನೂ ಗುಹೆಯೊಳಗೆ ಹೋದನು. ಆದರೆ ಅಲ್ಲಿ ಶ್ರೀಕೃಷ್ಣನನ್ನು ಕಾಣದೆ ಬೇರೊಬ್ಬ ಪುರುಷನು ಮಲಗಿರುವುದನ್ನು ನೋಡಿದನು. ॥ ೯ ॥ ನನ್ನನ್ನು ಇಷ್ಟು ದೂರಕ್ಕೆ ಕರೆತಂದು ಸಾಧುವಿನಂತೆ ಮಾಯಾವಿಯಾದ ಕೃಷ್ಣನು ಮಲಗಿರುವನಲ್ಲ? ಹೀಗೆ ಹೇಳುತ್ತಾ ಮೂಢನಾದ ಕಾಲಯವನನು ಮಲಗಿರುವವನು ಅಚ್ಯುತನೆಂದೇ ಭಾವಿಸಿ ಕಾಲಿನಿಂದ ಅವನನ್ನು ಒದೆದನು. ॥ ೧೦ ॥ ಆ ಪುರುಷನು ಬಹಳ ದಿನಗಳಿಂದ ಅಲ್ಲಿ ಮಲಗಿದ್ದನು. ಕಾಲಿನ ಒದೆತವು ತಾಕಿದಾಕ್ಷಣ ಅವನು ಎಚ್ಚರಗೊಂಡು ನಿಧಾನವಾಗಿ ಕಣ್ಣುಗಳನ್ನು ಬಿಡುತ್ತಾ ಎಲ್ಲ ದಿಕ್ಕುಗಳನ್ನು ನೋಡುತ್ತಾ, ಕಡೆಗೆ ತನ್ನ ಪಕ್ಕದಲ್ಲಿಯೇ ನಿಂತಿದ್ದ ಕಾಲಯವನನ್ನು ನೋಡಿದನು. ॥ ೧೧ ॥ ಪರೀಕ್ಷಿತನೇ! ಕೋಪಿಷ್ಠನಾದ ಆ ಪುರುಷನ ದೃಷ್ಟಿಯು ಬಿದ್ದೊಡನೆಯೇ ಕಾಲಯವನು ತನ್ನ ದೇಹದಿಂದಲೇ ಹುಟ್ಟಿದ ಅಗ್ನಿಯಿಂದ ಸುಟ್ಟು ಕ್ಷಣಾರ್ಧದಲ್ಲಿ ಬೂದಿಯಾದನು. ॥ ೧೨ ॥

**ಪರೀಕ್ಷಿದ್ರಾಜನು ಕೇಳಿದನು** - ಪೂಜ್ಯರೇ! ಕೇವಲ ದೃಷ್ಟಿಪಾತದಿಂದಲೇ ಕಾಲಯವನನು ಭಸ್ಮವಾಗಿ ಹೋದನಲ್ಲ ಆ ಮಹಾಪುರುಷನು ಯಾರು? ಯಾವ ವಂಶದವನು? ಯಾರ ಮಗನು? ಅವನಲ್ಲಿ ಅಂತಹ ಶಕ್ತಿಯು ಹೇಗಿತ್ತು? ಅವನು ಪರ್ವತದ ಗುಹೆಯಲ್ಲಿ ಹೋಗಿ ಏಕೆ ಮಲಗಿದ್ದನು? ದಯಮಾಡಿ ಇವೆಲ್ಲವನ್ನೂ ಹೇಳಿರಿ. ॥ ೧೩ ॥

ಶ್ರೀಶುಕ ಉವಾಚ

ಸ ಇಕ್ಷ್ವಾಕುಕುಲೇ ಜಾತೋ ಮಾಂಧಾತೃತನಯೋ ಮಹಾನ್ ।
ಮುಚುಕುಂದ ಇತಿ ಖ್ಯಾತೋ ಬ್ರಹ್ಮಣ್ಯಃ ಸತ್ಯಸಂಗರಃ
॥ ೧೪ ॥

ಸ ಯಾಚಿತಃ ಸುರಗಣೈರಿಂದ್ರಾದ್ಯೈರಾತ್ಮರಕ್ಷಣೇ ।
ಅಸುರೇಭ್ಯಃ ಪರಿತ್ರಸ್ತೈಸ್ತದ್ರಕ್ಷಾಂ ಸೋಽಕರೋಚ್ಚಿರಮ್
॥ ೧೫ ॥

ಲಬ್ಧ್ವಾ ಗುಹಂ ತೇ ಸ್ವಃಪಾಲಂ ಮುಚುಕುಂದ ಮಥಾಬ್ರುವನ್ ।
ರಾಜನ್ ವಿರಮತಾಂ ಕೃಚ್ಛ್ರಾದ್ಭವಾನ್ ನಃ ಪರಿಪಾಲನಾತ್
॥ ೧೬ ॥

ನರಲೋಕೇ ಪರಿತ್ಯಜ್ಯ ರಾಜ್ಯಂ ನಿಹತಕಂಟಕಮ್ ।
ಅಸ್ಮಾನ್ ಪಾಲಯತೋ ವೀರ ಕಾಮಾಸ್ತೇ ಸರ್ವ ಉಜ್ಝಿತಾಃ
॥ ೧೭ ॥

ಸುತಾ ಮಹಿಷ್ಯೋ ಭವತೋ ಜ್ಞಾತಯೋಽಮಾತ್ಯಮಂತ್ರಿಣಃ ।
ಪ್ರಜಾಶ್ಚ ತುಲ್ಯಕಾಲೀಯಾ ನಾಧುನಾ ಸಂತಿ ಕಾಲಿತಾಃ
॥ ೧೮ ॥

ಕಾಲೋ ಬಲೀಯಾನ್ ಬಲಿನಾಂ ಭಗವಾನೀಶ್ವರೋಽವ್ಯಯಃ ।
ಪ್ರಜಾಃ ಕಾಲಯತೇ ಕ್ರೀಡನ್ ಪಶುಪಾಲೋ ಯಥಾ ಪಶೂನ್
॥ ೧೯ ॥

ವರಂ ವೃಣೀಷ್ವ ಭದ್ರಂ ತೇ ಋತೇ ಕೈವಲ್ಯಮದ್ಯ ನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ
॥ ೨೦ ॥

ಏವಮುಕ್ತಃ ಸ ವೈ ದೇವಾನಭಿವಂದ್ಯ ಮಹಾಯಶಾಃ ।
ಅಶಯಿಷ್ಟ ಗುಹಾವಿಷ್ಟೋ ನಿದ್ರಯಾ ದೇವದತ್ತಯಾ
॥ ೨೧ ॥

ಸ್ವಾಪಂ ಯಾತಂ ಯಸ್ತು ಮಧ್ಯೇ ಬೋಧಯೇತ್ತ್ವಾಮಚೇತನಃ ।
ಸ ತ್ವಯಾ ದೃಷ್ಟಮಾತ್ರಸ್ತು ಭಸ್ಮೀಭವತು ತತ್ಕ್ಷಣಾತ್
॥ ೨೨ ॥

ಯವನೇ ಭಸ್ಮಸಾನ್ನೀತೇ ಭಗವಾನ್ ಸಾತ್ವತರ್ಷಭಃ ।
ಆತ್ಮಾನಂ ದರ್ಶಯಾಮಾಸ ಮುಚುಕುಂದಾಯ ಧೀಮತೇ
॥ ೨೩ ॥

ತಮಾಲೋಕ್ಯ ಘನಶ್ಯಾಮಂ ಪೀತಕೌಶೇಯವಾಸಸಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭೇನ ವಿರಾಜಿತಮ್
॥ ೨೪ ॥

ಚತುರ್ಭುಜಂ ರೋಚಮಾನಂ ವೈಜಯಂತ್ಯಾ ಚ ಮಾಲಯಾ ।
ಚಾರುಪ್ರಸನ್ನವದನಂ ಸ್ಫುರನ್ಮಕರಕುಂಡಲಮ್
॥ ೨೫ ॥

ಶ್ರೀಶುಕಮಹಾಮುನಿಗಳು ಹೇಳಿದರು – ಎಲೈ ಪರೀಕ್ಷಿತನೇ! ಅವನು ಇಕ್ಷ್ವಾಕುವಂಶದ ಮಾಂಧಾತ ಮಹಾರಾಜನ ಪುತ್ರನಾದ ಮುಚುಕುಂದ ರಾಜನಾಗಿದ್ದನು. ಆತನು ಬ್ರಾಹ್ಮಣಪ್ರಿಯನೂ, ಸತ್ಯನಿಷ್ಠನೂ, ಸಂಗ್ರಾಮ ವಿಜಯಿಯೂ ಆಗಿದ್ದನು. ॥ ೧೪ ॥ ಇಂದ್ರಾದಿ ದೇವತೆಗಳು ಒಮ್ಮೆ ಅಸುರರಿಂದ ಭಯಗೊಂಡಿದ್ದಾಗ ಅವರು ತಮ್ಮ ರಕ್ಷಣೆಗಾಗಿ ಮುಚುಕುಂದ ರಾಜನನ್ನು ಪ್ರಾರ್ಥಿಸಿ ಕೊಂಡರು. ಅವನು ಬಹಳ ದಿನಗಳವರೆಗೆ ದೇವತೆಗಳನ್ನು ರಾಕ್ಷಸ ರಿಂದ ರಕ್ಷಿಸಿದನು. ॥ ೧೫ ॥ ಬಹಳ ದಿವಸಗಳ ತರುವಾಯ ದೇವತೆಗಳ ಸೇನಾಪತಿಯಾಗಿ ಕಾರ್ತಿಕೇಯನು ದೊರಕಿದಾಗ ದೇವತೆಗಳು ಮುಚುಕುಂದನಿಗೆ ಹೇಳಿದರು – ಮಹಾರಾಜಾ! ನಮ್ಮನ್ನು ರಕ್ಷಿಸಲಿಕ್ಕಾಗಿ ನೀವು ಬಹಳ ಶ್ರಮಪಟ್ಟಿರುವಿರಿ. ಆದ್ದರಿಂದ ಈಗ ನೀವು ವಿಶ್ರಾಂತಿ ಪಡೆಯಿರಿ. ॥ ೧೬ ॥ ವೀರಶಿರೋ ಮಣಿಯೇ! ನೀನು ನಮ್ಮ ರಕ್ಷಣೆಗಾಗಿ ಮರ್ತ್ಯಲೋಕದ ನಿಷ್ಕಂಟಕ ವಾದ ರಾಜ್ಯವನ್ನು ಜೀವನದ ಅಭಿಲಾಷೆಗಳನ್ನು, ಭೋಗಗಳನ್ನು ಪರಿತ್ಯಾಗ ಮಾಡಿರುವಿ. ॥ ೧೭ ॥ ಈಗ ನಿನ್ನ ಪುತ್ರರಾಗಲೀ, ಪತ್ನೀಯಾಗಲೀ, ಬಂಧು-ಬಾಂಧವರಾಗಲೀ, ಅಮಾತ್ಯ-ಮಂತ್ರಿ ಗಳಾಗಲೀ, ನೀನಿದ್ದಾಗ ಇದ್ದ ಪ್ರಜಾವರ್ಗವಾಗಲೀ ಯಾರೂ ಉಳಿಯಲಿಲ್ಲ, ಎಲ್ಲರೂ ಕಾಲವಶರಾಗಿ ಹೋಗಿದ್ದಾರೆ. ॥ ೧೮ ॥ ಕಾಲನೆಂಬುವನು ಸಮಸ್ತ ಬಲಿಷ್ಠರಿಗಿಂತಲೂ ಅತ್ಯಂತ ಬಲಿಷ್ಠನಾಗಿ ಇರುವನು. ಅವನು ಸಾಕ್ಷಾತ್ ಅವಿನಾಶಿಯಾದ ಭಗವತ್ಸ್ವರೂಪ ನಾಗಿರುವನು. ದನಗಾಯಿಗಳು ಹಸುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವಂತೆ ಕಾಲನು ಆಡುತ್ತಾಡುತ್ತಲೇ ಸಮಸ್ತ ಪ್ರಜೆಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಾನೆ. ॥ ೧೯ ॥ ಮುಚುಕುಂದ ಮಹಾರಾಜ! ನಿನಗೆ ಮಂಗಳವಾಗಲಿ. ಮೋಕ್ಷಪದವಿಯೊಂದನ್ನು ಇಟ್ಟು ಬೇರೆ ಯಾವುದೇ ವರವನ್ನಾದರೂ ನೀನು ನಮ್ಮಿಂದ ಕೇಳಿ ಪಡೆದುಕೋ. ಏಕೆಂದರೆ, ಕೈವಲ್ಯ ಪದವಿಯನ್ನು ದಯಪಾಲಿಸುವ ಸಾಮರ್ಥ್ಯವು ಕೇವಲ ಅವಿನಾಶಿಯಾದ ಭಗವಾನ್ ವಿಷ್ಣುವಿನಲ್ಲೇ ಇರುವುದು. ॥ ೨೦ ॥ ದೇವತೆಗಳು ಹೀಗೆ ಹೇಳಿದಾಗ ಪರಮಯಶಸ್ವಿಯಾದ ಮುಚುಕುಂದನು ಅವರಿಗೆ ವಂದಿಸಿ, ಬಹಳ ದಣಿದಿದ್ದರಿಂದ ನಿದ್ದೆಯನ್ನು ವರವಾಗಿ ಬೇಡಿಕೊಂಡನು. ಹೀಗೆ ದೇವತೆಗಳಿಂದ ವರವನ್ನು ಪಡೆದುಕೊಂಡು ನಿದ್ದೆಯಿಂದ ತುಂಬಿದವನಾಗಿ ಈ ಪರ್ವತದ ಗುಹೆಯಲ್ಲಿ ಬಂದು ಮಲಗಿದನು. ॥ ೨೧ ॥ ಆ ಸಮಯದಲ್ಲಿ ದೇವತೆಗಳು ಹೇಳಿದರು – ರಾಜನೇ! ಮಲಗಿದ್ದಾಗ ನಿನ್ನನ್ನು ಯಾವನಾದರು ಮೂರ್ಖನು ಎಬ್ಬಿಸಿಬಿಟ್ಟರೆ, ಅವನು ನಿನ್ನ ದೃಷ್ಟಿಬೀಳುತ್ತಲೇ ಭಸ್ಮವಾಗಿ ಹೋಗುವನು. ॥ ೨೨ ॥

ಪರೀಕ್ಷಿತನೇ! ಕಾಲಯವನನು ಭಸ್ಮವಾಗಿ ಹೋದಾಗ ಯದು ವಂಶ ಶಿರೋಮಣಿಯಾದ ಭಗವಾನ್ ಶ್ರೀಕೃಷ್ಣನು ಧೀಮಂತನಾದ ಮುಚುಕುಂದನಿಗೆ ಕಾಣಿಸಿಕೊಂಡನು. ಭಗವಾನ್ ಶ್ರೀಕೃಷ್ಣನ ಶ್ರೀವಿಗ್ರಹವು ವರ್ಷಾಕಾಲದ ಮೇಘದಂತೆ ಶ್ಯಾಮಲವಾಗಿತ್ತು. ರೇಷ್ಮೆಯ ಪೀತಾಂಬರವನ್ನು ಧರಿಸಿದ್ದನು. ವಕ್ಷಸ್ಥಳದಲ್ಲಿ ಶ್ರೀವತ್ಸವೂ, ಕೊರಳಲ್ಲಿ ಕೌಸ್ತುಭಮಣಿಯೂ ವಿರಾಜಿಸುತ್ತಿತ್ತು. ಚತುರ್ಭುಜ ನಾಗಿದ್ದು ವೈಜಯಂತಿಮಾಲೆಯು ಮಂಡಿಗಳವರೆಗೆ ನೇತಾಡು ತ್ತಿತ್ತು. ಮುಖಕಮಲವು ಅತ್ಯಂತ ಸುಂದರವಾಗಿದ್ದು ಪ್ರಸನ್ನತೆ ಯಿಂದ ಅರಳಿತ್ತು. ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳು

ಪ್ರೇಕ್ಷಣೀಯಂ ನೃಲೋಕಸ್ಯ ಸಾನುರಾಗಸ್ಮಿತೇಕ್ಷಣಮ್ ।
ಅಪೀಚ್ಯವಯಸಂ ಮತ್ತಮೃಗೇಂದ್ರೋದಾರವಿಕ್ರಮಮ್
॥ ೨೬ ॥

ಪರ್ಯಪೃಚ್ಛನ್ಮಹಾಬುದ್ಧಿಸ್ತೇಜಸಾ ತಸ್ಯ ಧರ್ಷಿತಃ ।
ಶಂಕಿತಃ ಶನಕೈ ರಾಜಾ ದುರ್ಧರ್ಷಮಿವ ತೇಜಸಾ
॥ ೨೭ ॥

ಮುಚುಕುಂದ ಉವಾಚ

ಕೋ ಭವಾನಿಹ ಸಂಪ್ರಾಪ್ತೋ ವಿಪಿನೇ ಗಿರಿಗಹ್ವರೇ ।
ಪದ್ಭ್ಯಾಂ ಪದ್ಮಪಲಾಶಾಭ್ಯಾಂ ವಿಚರಸ್ಯುರುಕಂಟಕೇ
॥ ೨೮ ॥

ಕಿಂಸ್ವಿತ್ತೇಜಸ್ವಿನಾಂ ತೇಜೋ
ಭಗವಾನ್ ವಾ ವಿಭಾವಸುಃ ।
ಸೂರ್ಯಃ ಸೋಮೋ ಮಹೇಂದ್ರೋ ವಾ
ಲೋಕಪಾಲೋಽಪರೋಽಪಿ ವಾ ॥ ೨೯ ॥

ಮನ್ಯೇ ತ್ವಾಂ ದೇವದೇವಾನಾಂ ತ್ರಯಾಣಾಂ ಪುರುಷರ್ಷಭಮ್ ।
ಯದ್ಬಾಧಸೇ ಗುಹಾಧ್ವಾಂತಂ ಪ್ರದೀಪಃ ಪ್ರಭಯಾ ಯಥಾ
॥ ೩೦ ॥

ಶುಶ್ರೂಷತಾಮವ್ಯಲೀಕಮಸ್ಮಾಕಂ ನರಪುಂಗವ ।
ಸ್ವಜನ್ಮ ಕರ್ಮ ಗೋತ್ರಂ ವಾ ಕಥ್ಯತಾಂ ಯದಿ ರೋಚತೇ
॥ ೩೧ ॥

ವಯಂ ತು ಪುರುಷವ್ಯಾಘ್ರ ಐಕ್ಷ್ವಾಕಾಃ ಕ್ಷತ್ರಬಂಧವಃ ।
ಮುಚುಕುಂದ ಇತಿ ಪ್ರೋಕ್ತೋ ಯೌವನಾಶ್ವಾತ್ಮಜಃ ಪ್ರಭೋ
॥ ೩೨ ॥

ಚಿರಪ್ರಜಾಗರಶ್ರಾಂತೋ ನಿದ್ರಯೋಪಹತೇಂದ್ರಿಯಃ ।
ಶಯೇಽಸ್ಮಿನ್ ವಿಜನೇ ಕಾಮಂ ಕೇನಾಪ್ಯುತ್ಥಾಪಿತೋಽಧುನಾ
॥ ೩೩ ॥

ಸೋಽಪಿ ಭಸ್ಮೀಕೃತೋ ನೂನಮಾತ್ಮೀಯೇನೈವ ಪಾಪ್ಮನಾ ।
ಅನಂತರಂ ಭವಾನ್ ಶ್ರೀಮಾನ್ ಲಕ್ಷಿತೋಽಮಿತ್ರಶಾತನಃ
॥ ೩೪ ॥

ತೇಜಸಾ ತೇಽವಿಷಹ್ಯೇಣ ಭೂರಿ ದ್ರಷ್ಟುಂ ನ ಶಕ್ನುಮಃ ।
ಹತೌಜಸೋ ಮಹಾಭಾಗ ಮಾನನೀಯೋಽಸಿ ದೇಹಿನಾಮ್
॥ ೩೫ ॥

ಏವಂ ಸಂಭಾಷಿತೋ ರಾಜ್ಞಾ ಭಗವಾನ್ ಭೂತಭಾವನಃ ।
ಪ್ರತ್ಯಾಹ ಪ್ರಹಸನ್ ವಾಣ್ಯಾ ಮೇಘನಾದಗಭೀರಯಾ
॥ ೩೬ ॥

ಹೊಳೆಯುತ್ತಿದ್ದವು. ತುಟಿಗಳಲ್ಲಿ ಪ್ರೇಮಪೂರ್ಣವಾದ ಮಂದ ಹಾಸವಿತ್ತು. ಕಟಾಕ್ಷವೀಕ್ಷಣೆಯಿಂದ ಅನುರಾಗದ ಮಳೆಯನ್ನೇ ಸುರಿಸುವಂತಿತ್ತು. ಅತ್ಯಂತ ದರ್ಶನೀಯವಾದ ತರುಣಾವಸ್ಥೆಯಿದ್ದು, ಮದಿಸಿದ ಸಿಂಹದಂತೆ ಗಂಭೀರವಾದ ನಡಿಗೆಯುಳ್ಳವನಾಗಿದ್ದನು. ಮುಚುಕುಂದರಾಜನು ಬಹಳ ಬುದ್ಧಿವಂತನೂ, ಧೀರನೂ ಆಗಿದ್ದರೂ ಭಗವಂತನ ಇಂತಹ ದಿವ್ಯಜ್ಯೋತಿರ್ಮಯ ಮೂರ್ತಿಯನ್ನು ನೋಡಿ ಚಕಿತನಾಗಿ ಅವನ ತೇಜಸ್ಸಿನಿಂದ ಹತಪ್ರಭನಾದನು. ಭಗವಂತನು ತನ್ನ ತೇಜಸ್ಸಿನಿಂದ ದುರ್ಧರ್ಷನಾಗಿ ಕಾಣುತ್ತಿದ್ದನು. ರಾಜನು ಸ್ವಲ್ಪ ಸಂಕೋಚದಿಂದಲೇ ಮೆಲ್ಲ-ಮೆಲ್ಲನೆ ಕೇಳಿದನು ॥ ೨೩-೨೭ ॥

ಮುಚುಕುಂದ ರಾಜನು ಕೇಳಿದನು - ಸ್ವಾಮಿ! ನೀನು ಯಾರು ? ಕಲ್ಲು-ಮುಳ್ಳುಗಳಿಂದ ಕೂಡಿದ ಈ ಘೋರ ಅರಣ್ಯದಲ್ಲಿ ತಾವರೆಯಂತಿರುವ ಕೋಮಲ ಚರಣಗಳಿಂದ ಏಕೆ ವಿಚರಿಸುತ್ತಿರುವೆ ? ಈ ಪರ್ವತದ ಗುಹೆಯೊಳಗೆ ಬರುವ ಪ್ರಯೋಜನವಾದರೂ ಏನಿತ್ತು ? ॥ ೨೮ ॥ ಮೂರ್ತಿಮತ್ತಾಗಿ ಬಂದಿರುವ ತೇಜಸ್ವಿಗಳ ತೇಜಸ್ಸೇ ನೀನಾಗಿರುವೆಯಾ ? ಅಥವಾ ಭಗವಾನ್ ಅಗ್ನಿದೇವನಲ್ಲವಲ್ಲ! ನೀನು ಸೂರ್ಯ, ಚಂದ್ರ, ದೇವರಾಜ ಇಂದ್ರ, ಅಥವಾ ಬೇರೆ ಯಾವನಾದರೂ ಲೋಕಪಾಲನಾಗಿರುವೆಯಾ ? ॥ ೨೯ ॥ ದೇವತೆಗಳ ಆರಾಧ್ಯರಾದ ಬ್ರಹ್ಮ, ವಿಷ್ಣು, ಶಿವ, - ಇವರಲ್ಲಿ ಪುರುಷೋತ್ತಮನಾದ ಭಗವಾನ್ ನಾರಾಯಣನೇ ಆಗಿರುವೆ ಎಂದು ನಾನು ತಿಳಿಯುತ್ತೇನೆ. ಏಕೆಂದರೆ, ದೀಪವು ಕತ್ತಲೆಯನ್ನು ಓಡಿಸುವಂತೆ ನೀನು ನಿನ್ನ ಅಂಗಕಾಂತಿಯಿಂದ ಈ ಗುಹೆಯ ಅಂಧಕಾರವನ್ನು ದೂರ ಮಾಡುತ್ತಿರುವೆ. ॥ ೩೦ ॥ ಪುರುಷ ಶ್ರೇಷ್ಠನೇ! ನಿನಗೆ ಉಚಿತವೆನಿಸಿದರೆ ನಿನ್ನ ಜನ್ಮ ಕರ್ಮ ಮತ್ತು ಗೋತ್ರಗಳನ್ನು ನನಗೆ ಹೇಳು. ಏಕೆಂದರೆ, ನಾನು ಶುದ್ಧವಾದ ಹೃದಯದಿಂದ ಅದನ್ನು ಕೇಳಲು ಬಯಸುತ್ತೇನೆ. ॥ ೩೧ ॥ ಪುರುಷೋತ್ತಮನೇ ! ನನ್ನ ವಿಷಯದಲ್ಲಿ ಕೇಳುವುದಾದರೆ, ನಾನು ಇಕ್ಷ್ವಾಕುವಂಶೀಯ ಕ್ಷತ್ರಿಯನು. ಮುಚುಕುಂದನೆಂದು ನನ್ನ ಹೆಸರು. ಯುವನಾಶ್ವನ ಮಗನಾದ ಮಾಂಧಾತನ ಮಗನಾಗಿದ್ದೇನೆ. ॥ ೩೨ ॥ ಪ್ರಭುವೇ! ನಾನು ಹಲವಾರು ವರ್ಷಗಳು ನಿದ್ರೆಯೇ ಇಲ್ಲದೆ ಬಹಳ ಆಯಾಸಗೊಂಡಿದ್ದೆ. ನಿದ್ರೆಯಿಂದ ನನ್ನ ಇಂದ್ರಿಯಗಳೆಲ್ಲವೂ ಶಕ್ತಿಹೀನವಾಗಿದ್ದವು. ಅದರಿಂದಾಗಿ ನಾನು ನಿರ್ಜನವಾಗಿದ್ದ ಈ ಗುಹೆಯಲ್ಲಿ ಮಲಗಿದ್ದೆ. ಈಗ ತಾನೇ ನನ್ನನ್ನು ಯಾರೋ ಎಚ್ಚರಿಸಿಬಿಟ್ಟರು. ॥ ೩೩ ॥ ತಾನು ಮಾಡಿದ್ದ ಪಾಪದ ಫಲವಾಗಿಯೇ ಆ ವ್ಯಕ್ತಿಯು ಭಸ್ಮವಾಗಿಹೋದನು. ಅನಂತರ ಶತ್ರುನಾಶಕನಾದ ಪರಮ ಸುಂದರನಾದ ನೀನು ನನಗೆ ಕಾಣಿಸಿಕೊಂಡೆ. ॥ ೩೪ ॥ ಮಹಾನುಭಾವಾ ! ನೀನು ಸಮಸ್ತ ಪ್ರಾಣಿಗಳಿಗೂ ಪೂಜ್ಯನಾಗಿರುವೆ. ನಿನ್ನ ಸಹಿಸಲಶಕ್ಯವಾದ ದಿವ್ಯ ತೇಜಸ್ಸಿನಿಂದಾಗಿ ನಿನ್ನನ್ನು ದಿಟ್ಟಿಸಿ ನೋಡಲೂ ನನಗೆ ಸಾಧ್ಯವಾಗುತ್ತಿಲ್ಲ, ನಿನ್ನ ತೇಜಸ್ಸಿನ ಮುಂದೆ ನನ್ನ ತೇಜಸ್ಸು ಉಡುಗಿಹೋಗಿ ಬಿಟ್ಟಿದೆ. ॥ ೩೫ ॥ ಮುಚುಕುಂದ ಮಹಾರಾಜನು ಹೀಗೆ ಹೇಳಲು ಸಮಸ್ತ ಪ್ರಾಣಿಗಳ ನಿಯಾಮಕನಾದ ಭಗವಾನ್ ಶ್ರೀಕೃಷ್ಣನು ನಗುತ್ತಾ ಮೇಘಗಂಭೀರವಾದ ಧ್ವನಿಯಿಂದ ಹೀಗೆಂದನು. ॥ ೩೬ ॥

ಶ್ರೀಭಗವಾನುವಾಚ

ಜನ್ಮಕರ್ಮಾಭಿಧಾನಾನಿ ಸಂತಿ ಮೇಽಂಗ ಸಹಸ್ರಶಃ ।
ನ ಶಕ್ಯಂತೇಽನುಸಂಖ್ಯಾತುಮನಂತತ್ವಾನ್ಮಯಾಪಿ ಹಿ ॥ ೩೭ ॥

ಕ್ವಚಿದ್ರಜಾಂಸಿ ವಿಮಮೇ ಪಾರ್ಥಿವಾನ್ಯುರುಜನ್ಮಭಿಃ ।
ಗುಣಕರ್ಮಾಭಿಧಾನಾನಿ ನ ಮೇ ಜನ್ಮಾನಿ ಕರ್ಹಿಚಿತ್ ॥ ೩೮ ॥

ಕಾಲತ್ರಯೋಪಪನ್ನಾನಿ ಜನ್ಮಕರ್ಮಾಣಿ ಮೇ ನೃಪ ।
ಅನುಕ್ರಮಂತೋ ನೈವಾಂತಂ ಗಚ್ಛಂತಿ ಪರಮರ್ಷಯಃ ॥ ೩೯ ॥

ತಥಾಪ್ಯದ್ಯತನಾನ್ಯಂಗ ಶೃಣುಷ್ವ ಗದತೋ ಮಮ ।
ವಿಜ್ಞಾಪಿತೋ ವಿರಿಂಚೇನ ಪುರಾಹಂ ಧರ್ಮಗುಪ್ತಯೇ ।
ಭೂಮೇರ್ಭಾರಾಯಮಾಣಾನಾಮಸುರಾಣಾಂ ಕ್ಷಯಾಯ ಚ ॥ ೪೦ ॥

ಅವತೀರ್ಣೋ ಯದುಕುಲೇ ಗೃಹ ಆನಕದುಂದುಭೇಃ ।
ವದಂತಿ ವಾಸುದೇವೇತಿ ವಸುದೇವಸುತಂ ಹಿ ಮಾಮ್ ॥ ೪೧ ॥

ಕಾಲನೇಮಿರ್ಹತಃ ಕಂಸಃ ಪ್ರಲಂಬಾದ್ಯಾಶ್ಚ ಸದ್ದ್ವಿಷಃ ।
ಅಯಂ ಚ ಯವನೋ ದಗ್ಧೋ ರಾಜಂಸ್ತೇ ತಿಗ್ಮಚಕ್ಷುಷಾ ॥ ೪೨ ॥

ಸೋಽಹಂ ತವಾನುಗ್ರಹಾರ್ಥಂ ಗುಹಾಮೇತಾಮುಪಾಗತಃ ।
ಪ್ರಾರ್ಥಿತಃ ಪ್ರಚುರಂ ಪೂರ್ವಂ ತ್ವಯಾಹಂ ಭಕ್ತವತ್ಸಲಃ ॥ ೪೩ ॥

ವರಾನ್ ವೃಣೀಷ್ವ ರಾಜರ್ಷೇ ಸರ್ವಾನ್ ಕಾಮಾನ್ ದದಾಮಿ ತೇ ।
ಮಾಂ ಪ್ರಪನ್ನೋ ಜನಃ ಕಶ್ಚಿನ್ ನಭೂಯೋಽರ್ಹತಿ ಶೋಚಿತುಮ್ ॥ ೪೪ ॥

ಶ್ರೀಶುಕ ಉವಾಚ

ಇತ್ಯುಕ್ತಸ್ತಂ ಪ್ರಣಮ್ಯಾಹ ಮುಚುಕುಂದೋ ಮುದಾನ್ವಿತಃ ।
ಜ್ಞಾತ್ವಾ ನಾರಾಯಣಂ ದೇವಂ ಗರ್ಗವಾಕ್ಯಮನುಸ್ಮರನ್ ॥ ೪೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಮುಚುಕುಂದನೇ ! ನನ್ನ ಜನ್ಮ, ಕರ್ಮ ಮತ್ತು ನಾಮಧೇಯಗಳು ಸಾವಿರಾರು ಸಂಖ್ಯೆಯಲ್ಲಿವೆ. ಅವು ಅನಂತವಾಗಿವೆ ; ಆದ್ದರಿಂದ ಅವುಗಳನ್ನು ವಿವರಿಸಿ ಹೇಳಲು ನನಗೂ ಶಕ್ಯವಿಲ್ಲ. ॥ ೩೭ ॥ ಯಾವನಾದರೂ ಮನುಷ್ಯನು ಹಲವಾರು ಜನ್ಮಗಳಲ್ಲಿ ಭೂಮಿಯಲ್ಲಿರುವ ಧೂಳಿನ ಕಣಗಳನ್ನು ಎಣಿಸಬಲ್ಲನು. ಆದರೆ ನನ್ನ ಜನ್ಮ, ಗುಣ, ಕರ್ಮ, ನಾಮಗಳನ್ನು ಯಾರೇ ಆದರೂ ಎಂದಿಗೂ ಎಣಿಕೆ ಮಾಡುವ ಅಥವಾ ತಿಳಿಯುವ ಸಾಧ್ಯತೆಯೇ ಇಲ್ಲ. ॥ ೩೮ ॥ ಮಹಾರಾಜ ! ಸನಕ, ಸನಂದನರೇ ಮೊದಲಾದ ಮಹರ್ಷಿಗಳು ನನ್ನ ತ್ರಿಕಾಲ ಸಿದ್ಧವಾದ ಜನ್ಮ-ಕರ್ಮಗಳನ್ನು ವರ್ಣಿಸುತ್ತಲೇ ಇರುತ್ತಾರೆ. ಆದರೆ ಅದರ ಕೊನೆಯನ್ನು ಅವರೆಂದಿಗೂ ಮುಟ್ಟುವುದಿಲ್ಲ. ನನ್ನ ಜನ್ಮ ಕರ್ಮಗಳಿಗೆ ಅಂತ್ಯವೆಂಬುದೇ ಇಲ್ಲ. ॥ ೩೯ ॥ ಪ್ರಿಯ ಮುಚುಕುಂದನೇ ! ಹೀಗಿದ್ದರೂ ನಾನು ನನ್ನ ವರ್ತಮಾನ ಜನ್ಮ, ಕರ್ಮ ಮತ್ತು ನಾಮಗಳನ್ನು ವರ್ಣಿಸುವೆನು ಕೇಳು. ಹಿಂದೆ ಬ್ರಹ್ಮನು 'ಅಸುರರನ್ನು ಸಂಹರಿಸಿ ಭೂಭಾರವನ್ನು ಇಳಿಸಬೇಕೆಂದು ನನ್ನನ್ನು ಪ್ರಾರ್ಥಿಸಿದ್ದನು. ॥ ೪೦ ॥ ಚತುರ್ಮುಖನ ಪ್ರಾರ್ಥನೆಯಂತೆ ನಾನು ಯದುವಂಶದಲ್ಲಿ ವಸುದೇವನ ಮನೆಯಲ್ಲಿ ಅವತರಿಸಿರುವೆನು. ಈಗ ನಾನು ವಸುದೇವನ ಪುತ್ರನಾದ್ದರಿಂದ ಜನರು ನನ್ನನ್ನು ವಾಸುದೇವನೆಂದು ಕರೆಯುತ್ತಾರೆ. ॥ ೪೧ ॥ ಇದುವರೆಗೆ ಸತ್ಪುರುಷರನ್ನು ದ್ವೇಷಿಸುತ್ತಿದ್ದ ಕಂಸನಾಗಿ ಹುಟ್ಟಿದ್ದ ಕಾಲನೇಮಿ ಎಂಬ ಅಸುರನನ್ನೂ, ಪ್ರಲಂಬನೇ ಮೊದಲಾದ ಕಂಸನ ಅನುಯಾಯಿಗಳಾದ ಹಲವಾರು ರಾಕ್ಷಸರನ್ನು ಸಂಹಾರ ಮಾಡಿದ್ದೇನೆ. ರಾಜನೇ ! ಈ ಕಾಲಯವನನೂ ಕೂಡ ನನ್ನ ಪ್ರೇರಣೆಯಿಂದಲೇ ನಿನ್ನ ತೀಕ್ಷ್ಣದೃಷ್ಟಿಬಿದ್ದಾಕ್ಷಣ ಭಸ್ಮನಾಗಿ ಹೋದನು. ॥ ೪೨ ॥ ಅದೇ ನಾನು ನಿನ್ನ ಮೇಲೆ ಕೃಪೆದೋರಲು ಈ ಗುಹೆಗೆ ಬಂದಿರುವೆನು. ಭಕ್ತವತ್ಸಲನಾದ ನನ್ನನ್ನು ಹಿಂದೆ ನೀನು ಬಹಳವಾಗಿ ಆರಾಧಿಸಿದ್ದೆ. ॥ ೪೩ ॥ ಅದಕ್ಕಾಗಿ ರಾಜರ್ಷಿಯೇ! ನಿನಗೆ ಅಭೀಷ್ಟವಾದ ವರವನ್ನು ಬೇಡು. ನಾನು ನಿನ್ನ ಯಾವುದೇ ಕಾಮನೆಯನ್ನಾದರೂ ಪೂರ್ಣಗೊಳಿಸುವೆನು. ನನಗೆ ಶರಣಾಗತನಾದ ಯಾರೇ ಆಗಲಿ ಪುನಃ ಶೋಕಪಡಬಾರದು ; ಇದು ನನ್ನ ಆಶಯವಾಗಿದೆ. ॥ ೪೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಹೀಗೆ ಹೇಳಿದಾಗ ಮುಚುಕುಂದನಿಗೆ – 'ಯದುವಂಶದಲ್ಲಿ ಭಗವಂತನು ಅವತರಿಸಲಿದ್ದಾನೆ' ಎಂಬ ವೃದ್ಧರಾದ ಗರ್ಗರ ಮಾತು ನೆನಪಿಗೆ ಬಂತು. ಇವನು ಸಾಕ್ಷಾತ್ ಭಗವಾನ್‌ನಾರಾಯಣನೇ ಆಗಿರುವನೆಂದು ಅವನು ತಿಳಿದು ಆನಂದತುಂದಿಲನಾಗಿ ಭಗವಂತನ ಚರಣಗಳಲ್ಲಿ ವಂದಿಸಿಕೊಂಡು ಇಂತೆಂದನು. ॥ ೪೫ ॥

ಮುಚುಕುಂದ ಉವಾಚ

ವಿಮೋಹಿತೋಽಯಂ ಜನ ಈಶ ಮಾಯಯಾ
ತ್ವದೀಯಯಾ ತ್ವಾಂ ನ ಭಜತ್ಯನರ್ಥದೃಕ್ ।
ಸುಖಾಯ ದುಃಖಪ್ರಭವೇಷು ಸಜ್ಜತೇ
ಗೃಹೇಷು ಯೋಷಿತ್ಪುರುಷಶ್ಚ ವಂಚಿತಃ ॥ ೪೬ ॥

ಲಬ್ಧ್ವಾ ಜನೋ ದುರ್ಲಭಮತ್ರ ಮಾನುಷಂ
ಕಥಂಚಿದವ್ಯಂಗ ಮಯತ್ನತೋಽನಘ ।
ಪಾದಾರವಿಂದಂ ನ ಭಜತ್ಯಸನ್ಮತಿ-
ರ್ಗೃಹಾಂಧಕೂಪೇ ಪತಿತೋ ಯಥಾ ಪಶುಃ ॥ ೪೭ ॥

ಮಮೈಷ ಕಾಲೋಽಜಿತ ನಿಷ್ಫಲೋ ಗತೋ
ರಾಜ್ಯಶ್ರಿಯೋನ್ನದ್ಧಮದಸ್ಯ ಭೂಪತೇಃ ।
ಮರ್ತ್ಯಾತ್ಮಬುದ್ಧೇಃ ಸುತದಾರಕೋಶಭೂ-
ಷ್ವಾಸಜ್ಜಮಾನಸ್ಯ . ದುರಂತಚಿಂತಯಾ ॥ ೪೮ ॥

ಕಲೇವರೇಽಸ್ಮಿನ್ ಘಟಕುಡ್ಯಸಂನಿಭೇ
ನಿರೂಢಮಾನೋ ನರದೇವ ಇತ್ಯಹಮ್ ।
ವೃತೋ ರಥೇಭಾಶ್ವಪದಾತ್ಯನೀಕಪೈ-
ರ್ಗಾಂ ಪರ್ಯಟಂಸ್ತ್ವಾಗಣಯನ್ ಸುದುರ್ಮದಃ ॥ ೪೯ ॥

ಪ್ರಮತ್ತಮುಚ್ಚೈರಿತಿಕೃತ್ಯಚಿಂತಯಾ
ಪ್ರವೃದ್ಧಲೋಭಂ ವಿಷಯೇಷು ಲಾಲಸಮ್ ।
ತ್ವಮಪ್ರಮತ್ತಃ ಸಹಸಾಭಿಪದ್ಯಸೇ
ಕ್ಷುಲ್ಲೇಲಿಹಾನೋಽಹಿರಿವಾಖುಮಂತಕಃ ॥ ೫೦ ॥

ಪುರಾ ರಥೈರ್ಹೇಮಪರಿಷ್ಕೃತೈಶ್ಚರನ್
ಮತಂಗಜೈರ್ವಾ ನರದೇವಸಂಜ್ಞಿತಃ ।
ಸ ಏವ ಕಾಲೇನ ದುರತ್ಯಯೇನ ತೇ
ಕಲೇವರೋ ವಿಟ್ಕೃಮಿಭಸ್ಮಸಂಜ್ಞಿತಃ ॥ ೫೧ ॥

**ಮುಚುಕುಂದನು ಹೇಳಿದನು** – ಪ್ರಭೋ! ಈ ಜನರು ನಿನ್ನ ಮಾಯೆಯಿಂದ ಅತ್ಯಂತ ವಿಮೋಹಿತರಾಗಿದ್ದಾರೆ. ನಿನ್ನಿಂದ ವಿಮುಖರಾದ ಇವರು ಅನರ್ಥಕಾರಿ ಸಂಸಾರದಲ್ಲೇ ಸಿಕ್ಕಿ ಹಾಕಿಕೊಂಡು ನಿನ್ನನ್ನು ಭಜಿಸುತ್ತಿಲ್ಲ. ನಿನ್ನ ಮಾಯೆಯಿಂದ ವಂಚಿತರಾದ ಸ್ತ್ರೀ-ಪುರುಷರು ಸುಖವನ್ನು ಬಯಸಿ ದುಃಖಕ್ಕೆ ಮೂಲ ಕಾರಣವಾದ ಮನೆ-ಮಠಗಳೆಂಬ ಮಮಕಾರದಿಂದ ಸಂಸಾರದಲ್ಲಿ ಆಸಕ್ತರಾಗಿರುತ್ತಾರೆ. ॥ ೪೬ ॥ ಪಾಪರೂಪವಾದ ಸಂಸಾರದಿಂದ ಸರ್ವಥಾ ರಹಿತವಾದ ಪ್ರಭುವೇ! ಈ ಭೂಮಿಯು ಅತ್ಯಂತ ಪವಿತ್ರವಾದ ಕರ್ಮಭೂಮಿಯಾಗಿದೆ. ಇಲ್ಲಿ ಮನುಷ್ಯ ಜನ್ಮವು ಲಭಿಸುವುದು ಅತ್ಯಂತ ದುರ್ಲಭವೇ ಸರಿ. ಸರ್ವಾಂಗ ಪರಿಪೂರ್ಣವಾದ ಮನುಷ್ಯ ಶರೀರವನ್ನು ಪ್ರಯತ್ನವಿಲ್ಲದೆ ಹೇಗೋ ಹೊಂದಿಯೂ ಸದ್ಬುದ್ಧಿಯಿಲ್ಲದ ಜನರು ನಿನ್ನ ಪಾದಾರವಿಂದವನ್ನು ಭಜಿಸುವುದಿಲ್ಲ. ಹುಲ್ಲಿನ ಆಸೆಯಿಂದ ಪಶುವು ಪಾಳುಬಾವಿಯಲ್ಲಿ ಬೀಳುವಂತೆ ಮನುಷ್ಯನು ಸುಖಮಯವಾಗಿ ಕಾಣುವ ಸಂಸಾರವೆಂಬ ಕಗ್ಗತ್ತಲೆಯ ಬಾವಿಯಲ್ಲಿ ಬೀಳುತ್ತಾನೆ. ॥ ೪೭ ॥ ಓ ಅಜಿತ ಪ್ರಭುವೇ ? ನಾನೊಬ್ಬ ರಾಜನಾಗಿದ್ದು, ಸಂಪತ್ಸಮೃದ್ಧವಾದ ರಾಜ್ಯಲಕ್ಷ್ಮಿಯನ್ನು ಪಡೆದು ಉನ್ಮತ್ತನಾಗಿದ್ದೆನು. ದೇಹಾತ್ಮ ಬುದ್ಧಿಯುಳ್ಳ ನಾನು ಪತ್ನೀ-ಪುತ್ರರು-ಭಂಡಾರ-ರಾಜ್ಯ –ಐಶ್ವರ್ಯ – ಇತ್ಯಾದಿಗಳಲ್ಲಿಯೇ ಸದಾಕಾಲ ಆಸಕ್ತನಾಗಿದ್ದೆ. ಹಗಲು-ರಾತ್ರಿಗಳಲ್ಲಿಯೂ ನನಗೆ ಅವುಗಳದ್ದೇ ಚಿಂತೆಯಾಗಿತ್ತು. ಹೀಗಾಗಿ ಇದುವರೆಗಿನ ನನ್ನ ಜೀವನವು ವ್ಯರ್ಥವಾಗಿ ಹೋಯಿತು. ॥ ೪೮ ॥ ದೇವದೇವನೇ! ಮಡಕೆಗೂ, ಗೋಡೆಗೂ ಸಮಾನವಾದ, ನನ್ನಿಂದ ಬೇರೆಯಾದ ಈ ದೇಹವನ್ನೇ ನನ್ನ ಸ್ವರೂಪವೆಂದು ತಿಳಿದುಕೊಂಡಿದ್ದೆ. ಮಾನವರೆಲ್ಲರೂ ನಾನು ರಾಜನಾಗಿರುವೆನೆಂದು ಭಾವಿಸಿಕೊಂಡು ರಥ-ಗಜಾಶ್ವ- ಪದಾತಿಗಳೆಂಬ ಚತುರಂಗ ಬಲದಿಂದ ಸಮಾವೃತನಾಗಿ ದುರಭಿಮಾನದಿಂದ ಭೂಮಿಯಲ್ಲಿ ಅಲೆದಾಡುತ್ತಿದ್ದೆ. ಹೀಗೆ ಮದಾಂಧನಾಗಿ ನಾನು ನಿನ್ನ ವಿಷಯದಲ್ಲಿ ಯೋಚಿಸಲೇ ಇಲ್ಲ. ॥ ೪೯ ॥ 'ಆ ರಾಜ್ಯವನ್ನು ಗೆಲ್ಲಬೇಕು, ಅವನ ಬೊಕ್ಕಸವನ್ನು ಅಪಹರಿಸಬೇಕು' ಮುಂತಾದ ಆಲೋಚನೆಗಳಿಂದ ಹೆಚ್ಚಿದ ಆಶೆಯುಳ್ಳವನಾಗಿ, ವಿಷಯಸುಖದಲ್ಲೇ ಆಸಕ್ತನಾದ, ಅತಿಯಾದ ಪ್ರಮಾದಕ್ಕೆ ವಶನಾಗಿರುವ ಮನುಷ್ಯನನ್ನು ನೀನು, ಅಪ್ರಮತ್ತನಾದ ಅಂತಕನಾಗಿ – ಹಸಿವಿನಿಂದ ಕಟವಾಯಿಗಳನ್ನು ಸವರಿಕೊಳ್ಳುತ್ತಾ ಇಲಿಯನ್ನು ಹಿಡಿಯುವ ಹಾವಿನಂತೆ – ಬೇಗನೇ ಹಿಡಿದು ಬಿಡುವೆ. ॥ ೫೦ ॥ ಹೀಗೆ ಸುವರ್ಣಾಭರಣಗಳಿಂದ ಸಮಲಂಕೃತವಾದ ರಥಗಳಲ್ಲಿ ಅಥವಾ ಚಿನ್ನದ ಅಂಬಾರಿಯಿಂದ ಮದಿಸಿದ ಆನೆಯ ಮೇಲೆ ಕುಳಿತು ನರದೇವನೆಂಬ ಅಭಿಧಾನವನ್ನು ಪಡೆದು ಪ್ರಪಂಚವೆಲ್ಲಾ ಪರ್ಯಟನೆ ಮಾಡುತ್ತಿದ್ದ ಶರೀರವು ನಾಶವಾಗಿ ಹೋಗಲು, ಅಶಕ್ಯವಾದ ನಿನ್ನ ಕಾಲಕ್ಕೆ ಪರವಶವಾಗಿ, ಪಕ್ಷಿಗಳ, ವಿಷ್ಠೆಯೋ, ಹುಳುವೋ ಅಥವಾ ಭಸ್ಮವೋ ಆಗಿಬಿಡುತ್ತದೆ. ॥ ೫೧ ॥ ಪ್ರಭುವೇ! ಒಬ್ಬ ಚಕ್ರವರ್ತಿಯು ಎಲ್ಲ ದಿಕ್ಕುಗಳಲ್ಲಿಯೂ ವಿಜಯವನ್ನು ಸಂಪಾದಿಸಿ, ತನ್ನೆದುರಿಗೆ ಯುದ್ಧಮಾಡುವವರೇ ಪ್ರಪಂಚದಲ್ಲಿ ಯಾರೂ ಇಲ್ಲವೆಂದು ಎಣಿಸಿ ಸಿಂಹಾಸನದ ಮೇಲೆ ಕುಳಿತಾಗ ಅವನಿಗೆ ಸಮಾನರಾದ ಮತ್ತು ಸಾಮಂತ ರಾಜರು ನತ

ನಿರ್ಜಿತ್ಯ ದಿಕ್ಚಕ್ರಮಭೂತವಿಗ್ರಹೋ
ವರಾಸನಸ್ಥಃ ಸಮರಾಜವಂದಿತಃ ।
ಗೃಹೇಷು ಮೈಥುನ್ಯಸುಖೇಷು ಯೋಷಿತಾಂ
ಕ್ರೀಡಾಮೃಗಃ ಪೂರುಷ ಈಶ ನೀಯತೇ ॥ ೫೨ ॥

ಕರೋತಿ ಕರ್ಮಾಣಿ ತಪಸ್ಸುನಿಷ್ಠಿತೋ
ನಿವೃತ್ತಭೋಗಸ್ತದಪೇಕ್ಷಯಾ ದದತ್ ।
ಪುನಶ್ಚ ಭೂಯೇಯಮಹಂ ಸ್ವರಾಡಿತಿ
ಪ್ರವೃದ್ಧತರ್ಷೋ ನ ಸುಖಾಯ ಕಲ್ಪತೇ ॥ ೫೩ ॥

ಭವಾಪವರ್ಗೋ ಭ್ರಮತೋ ಯದಾ ಭವೇ-
ಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ ।
ಸತ್ಸಂಗಮೋ ಯರ್ಹಿ ತದೈವ ಸದ್ಗತೌ
ಪರಾವರೇಶೇ ತ್ವಯಿ ಜಾಯತೇ ಮತಿಃ ॥ ೫೪ ॥

ಮನ್ಯೇ ಮಮಾನುಗ್ರಹ ಈಶ ತೇ ಕೃತೋ
ರಾಜ್ಯಾನುಬಂಧಾಪಗಮೋ ಯದೃಚ್ಛಯಾ ।
ಯಃ ಪ್ರಾರ್ಥ್ಯತೇ ಸಾಧುಭಿರೇಕಚರ್ಯಯಾ
ವನಂ ವಿವಿಕ್ಷದ್ಭಿರಖಂಡಭೂಮಿಪೈಃ ॥ ೫೫ ॥

ನ ಕಾಮಯೇಽನ್ಯಂ ತವ ಪಾದಸೇವನಾ-
ದಕಿಂಚನಪ್ರಾರ್ಥ್ಯತಮಾದ್ವರಂ ವಿಭೋ ।
ಆರಾಧ್ಯ ಕಸ್ತ್ವಾಂ ಹ್ಯಪವರ್ಗದಂ ಹರೇ
ವೃಣೀತ ಆರ್ಯೋ ವರಮಾತ್ಮಬಂಧನಮ್ ॥ ೫೬ ॥

ತಸ್ಮಾದ್ವಿಸೃಜ್ಯಾಶಿಷ ಈಶ ಸರ್ವತೋ
ರಜಸ್ತಮಃಸತ್ತ್ವಗುಣಾನುಬಂಧನಾಃ ।
ನಿರಂಜನಂ ನಿರ್ಗುಣಮದ್ವಯಂ ಪರಂ
ತ್ವಾಂ ಜ್ಞಪ್ತಿಮಾತ್ರಂ ಪುರುಷಂ ವ್ರಜಾಮ್ಯಹಮ್ ॥ ೫೭ ॥

ಚಿರಮಿಹ ವೃಜಿನಾರ್ತಸ್ತಪ್ಯಮಾನೋಽನುತಾಪೈ-
ರವಿತೃಷಷಡಮಿತ್ರೋಽಲಬ್ಧಶಾಂತಿಃ ಕಥಂಚಿತ್ ।
ಶರಣದ ಸಮುಪೇತಸ್ತ್ವತ್ಪದಾಬ್ಜಂ ಪರಾತ್ಮ-
ನ್ನಭಯಮೃತಮಶೋಕಂ ಪಾಹಿ ಮಾಽಽಪನ್ನಮೀಶ ॥ ೫೮ ॥

ಮಸ್ತಕರಾಗುತ್ತಾರೋ, ಅಂತಹ ರಾಜಾಧಿರಾಜನು ಗ್ರಾಮಸುಖಗಳಿಗೆ ನೆಲೆಯಾಗಿರುವ ಮನೆಯಲ್ಲಿ ಹೆಂಗಸರ ಆಟದ ಪಶುವಾಗಿ ಬಿಡುತ್ತಾನೆ. ॥ ೫೨ ॥ ಬಹಳಷ್ಟು ಜನರು ವಿಷಯಭೋಗಗಳನ್ನು ತ್ಯಜಿಸಿ ತಪೋನಿಷ್ಠರಾಗಿ ಹಲವಾರು ದಾನಕರ್ಮಗಳನ್ನು, ಯಜ್ಞಕರ್ಮಗಳನ್ನೂ ಮಾಡುತ್ತಾರೆ. ಆದರೆ ಅವರ ಆ ತಪಸ್ಸು ನಾನು ಪುನಃ ಚಕ್ರವರ್ತಿಯಾಗಬೇಕೆಂಬುದೇ ಆಗಿರುತ್ತದೆ. ಹೀಗೆ ವೃದ್ಧಿ ಹೊಂದಿದ ತೃಷ್ಣೆಯುಳ್ಳವರು ಎಂದಿಗೂ ಸುಖಿಗಳಾಗಲಾರರು. ॥ ೫೩ ॥ ಅಚ್ಯುತನೇ! ಜೀವನು ಅನಾದಿಕಾಲದಿಂದಲೂ ಹುಟ್ಟು-ಸಾವುಗಳೆಂಬ ಸಂಸಾರ ಚಕ್ರದಲ್ಲಿ ಸಿಕ್ಕಿ ಸುತ್ತುತ್ತಲೇ ಇರುವನು. ಸಂಸಾರ ಚಕ್ರದಿಂದ ಪಾರಾಗುವ ಸಮಯವು ಬಂದಾಗ ಅವನಿಗೆ ಸತ್ಸಂಗವು ದೊರೆಯುತ್ತದೆ. ಸತ್ಸಂಗವಾದೊಡನೆಯೇ ಕಾರ್ಯ-ಕಾರಣರೂಪನಾದ, ಜಗತ್ತಿಗೆ ಏಕಮಾತ್ರಸ್ವಾಮಿಯಾದ, ಸತ್ಪುರುಷರಿಗೆ ಪರಮಾಶ್ರಯನಾದ ನಿನ್ನಲ್ಲಿ ಜೀವಿಯ ಬುದ್ಧಿಯು ಅತ್ಯಂತ ದೃಢತೆಯಿಂದ ತೊಡಗುತ್ತದೆ; ಇದು ನಿಶ್ಚಯವಾದುದು. ॥ ೫೪ ॥ ಸ್ವಾಮಿಯೇ! ನೀನು ನನ್ನ ಮೇಲೆ ಪರಮಾನುಗ್ರಹವನ್ನು ಮಾಡಿರುವೆಯೆಂದೇ ನಾನು ಭಾವಿಸುತ್ತೇನೆ. ನಿನ್ನ ಅನುಗ್ರಹದಿಂದ ಯಾವ ಪರಿಶ್ರಮವೂ ಇಲ್ಲದೆ ನನಗೆ ರಾಜ್ಯದ ಸಂಬಂಧ ಕಡಿದುಹೋಯಿತು. ಸಾಧುಸ್ವಭಾವದ ಚಕ್ರವರ್ತಿಗಳೂ ಕೂಡ ರಾಜ್ಯವನ್ನು ಬಿಟ್ಟು ಏಕಾಂತದಲ್ಲಿ ಭಜನೆ-ಸಾಧನೆ ಮಾಡಬೇಕೆಂದು ಕಾಡಿಗೆ ಹೋಗಲು ಅಪೇಕ್ಷಿಸಿದಾಗ ಅಹಂಕಾರ-ಮಮಕಾರಗಳಿಂದ ಮುಕ್ತರಾಗಲು ನಿನ್ನನ್ನು ಬಹಳವಾಗಿ ಪ್ರಾರ್ಥಿಸುತ್ತಾರೆ. ॥ ೫೫ ॥ ಅಂತರ್ಯಾಮಿಯೇ! ಯಾರ ಬಳಿಯಲ್ಲಿ ಯಾವುದೇ ಸಂಗ್ರಹ-ಪರಿಗ್ರಹವಿಲ್ಲವೋ ಅಥವಾ ಅದರ ಅಭಿಮಾನದಿಂದ ರಹಿತರಾದ ಅಕಿಂಚನರೂ ಕೂಡ ನಿನ್ನ ಚರಣಸೇವೆಯಲ್ಲದೆ ಬೇರೆ ಏನನ್ನೂ ಬೇಡುವುದಿಲ್ಲ. ಹಾಗಿರುವಾಗ ಮೋಕ್ಷವನ್ನು ಕರುಣಿಸುವ ನಿನ್ನ ಆರಾಧನೆ ಮಾಡಿ - ತನ್ನನ್ನು ಬಂಧಿಸುವಂತಹ ಸಾಂಸಾರಿಕ ವಿಷಯಗಳನ್ನು ಯಾವ ಶ್ರೇಷ್ಠ ಪುರುಷನು ತಾನೇ ಬೇಡಿಕೊಳ್ಳುವನು? ॥ ೫೬ ॥ ಆದ್ದರಿಂದ ಪ್ರಭುವೇ! ನಾನು ಸತ್ತ್ವ-ರಜ-ತಮೋಗುಣಗಳಿಗೆ ಸಂಬಂಧಿಸಿದ ಸಮಸ್ತ ಕಾಮನೆಗಳನ್ನು ಬಿಟ್ಟು ಮಾಯೆಯ ಲೇಶಮಾತ್ರ ಸಂಬಂಧವೂ ಇಲ್ಲದ, ಗುಣಾತೀತನಾದ, ಅದ್ವಿತೀಯನಾದ, ಚಿತ್ಸ್ವರೂಪನಾದ, ಪರಮಪುರುಷನಾದ ನಿನಗೆ ಶರಣಾಗುತ್ತೇನೆ. ॥ ೫೭ ॥ ಪರಮೇಶ್ವರನೇ! ಅನಾದಿಕಾಲದಿಂದಲೂ ನನ್ನ ಕರ್ಮಫಲಗಳನ್ನು ಅನುಭವಿಸುತ್ತಾ ನಾನು ಆರ್ತನಾಗಿದ್ದೆ. ಆ ದುಃಖದ ಜ್ವಾಲೆಯು ನನ್ನನ್ನು ಹಗಲು ರಾತ್ರಿಯೆನ್ನದೆ ದಹಿಸುತ್ತಲೇ ಇತ್ತು. ನನ್ನ ಆಂತರಿಕ ಆರು ಶತ್ರುಗಳು (ಐದು ಇಂದ್ರಿಗಳು ಒಂದು ಮನಸ್ಸು) ಎಂದೂ ಶಾಂತರಾಗುವುದೇ ಇಲ್ಲ. ಅವರ ವಿಷಯ ತೃಷ್ಣೆಯು ದಿನ-ದಿನಕ್ಕೆ ವೃದ್ಧಿಸುತ್ತಲೇ ಇದೆ. ಈಗ ನಾನು ಭಯ, ಶೋಕ, ಮೃತ್ಯು ಇವುಗಳಿಂದ ರಹಿತವಾದ ನಿನ್ನ ಪಾದಕಮಲಗಳಲ್ಲಿ ಶರಣಾಗತನಾಗಿದ್ದೇನೆ. ಪರಮಾತ್ಮನೇ! ಶರಣಾಗತನಾದ ನನ್ನನ್ನು ರಕ್ಷಿಸು. ॥ ೫೮ ॥

ಶ್ರೀಭಗವಾನುವಾಚ

ಸಾರ್ವಭೌಮ ಮಹಾರಾಜ ಮತಿಸ್ತೇ ವಿಮಲೋರ್ಜಿತಾ ।
ವರೈಃ ಪ್ರಲೋಭಿತಸ್ಯಾಪಿ ನ ಕಾಮೈರ್ವಿಹತಾ ಯತಃ
॥ ೫೯ ॥

ಪ್ರಲೋಭಿತೋ ವರೈರ್ಯತ್ತ್ವಮಪ್ರಮಾದಾಯ ವಿದ್ಧಿ ತತ್ ।
ನ ಧೀರ್ಮಯ್ಯೇಕಭಕ್ತಾನಾಮಾಶೀರ್ಭಿರ್ಭಿದ್ಯತೇ ಕ್ವಚಿತ್
॥ ೬೦ ॥

ಯುಂಜಾನಾನಾಮಭಕ್ತಾನಾಂ ಪ್ರಾಣಾಯಾಮಾದಿಭಿರ್ಮನಃ ।
ಅಕ್ಷೀಣವಾಸನಂ ರಾಜನ್ ದೃಶ್ಯತೇ ಪುನರುತ್ಥಿತಮ್
॥ ೬೧ ॥

ವಿಚರಸ್ವ ಮಹೀಂ ಕಾಮಂ ಮಯ್ಯಾವೇಶಿತಮಾನಸಃ ।
ಅಸ್ತ್ವೇವ ನಿತ್ಯದಾ ತುಭ್ಯಂ ಭಕ್ತಿರ್ಮಯ್ಯನಪಾಯಿನೀ
॥ ೬೨ ॥

ಕ್ಷಾತ್ರಧರ್ಮಸ್ಥಿತೋ ಜಂತೂನ್ ನ್ಯವಧೀರ್ಮೃಗಯಾದಿಭಿಃ ।
ಸಮಾಹಿತಸ್ತತ್ತಪಸಾ ಜಹ್ಯಘಂ ಮದುಪಾಶ್ರಿತಃ
॥ ೬೩ ॥

ಜನ್ಮನ್ಯನಂತರೇ ರಾಜನ್ ಸರ್ವಭೂತಸುಹೃತ್ತಮಃ ।
ಭೂತ್ವಾ ದ್ವಿಜವರಸ್ತ್ವಂ ವೈ ಮಾಮುಪೈಷ್ಯಸಿ ಕೇವಲಮ್
॥ ೬೪ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಸಾರ್ವಭೌಮ ಮಹಾರಾಜ! ನಿನ್ನ ಬುದ್ಧಿಯು ಪರಿಶುದ್ಧವಾಗಿಯೂ, ಉನ್ನತಮಟ್ಟದಲ್ಲಿಯೂ ಇದೆ. ನಾನು ಪುನಃ ಪುನಃ ನಿನಗೆ ವರದ ಲೋಭವನ್ನು ತೋರುತ್ತಿದ್ದರೂ ನಿನ್ನ ಬುದ್ಧಿಯು ಕಾಮನೆಗಳಿಗೆ ವಶವಾಗಲಿಲ್ಲ. ॥ ೫೯ ॥ ನಾನು ವರವನ್ನು ಕೊಡಲು ನಿನ್ನನ್ನು ಪ್ರಲೋಭಿಸಿದುದು ನಿನ್ನ ಬುದ್ಧಿಯು ಪ್ರಮತ್ತವಾಗಿದೆಯೋ, ಅಪ್ರಮತ್ತವಾಗಿದೆಯೋ ಎಂಬುದನ್ನು ಪರೀಕ್ಷಿಸಲಿಕ್ಕಾಗಿ. ನನ್ನ ಅನನ್ಯಭಕ್ತರಾದವರ ಬುದ್ಧಿಯು ಎಂದಿಗೂ ಕಾಮನೆಗಳಿಗಾಗಿ ಅತ್ತ-ಇತ್ತ ಅಲೆಯುವುದಿಲ್ಲ. ॥ ೬೦ ॥ ನನ್ನ ಭಕ್ತರಲ್ಲದವರು ಪ್ರಾಣಾಯಾಮಾದಿಗಳಿಂದ ತಮ್ಮ ಮನಸ್ಸನ್ನು ವಶಪಡಿಸಿಕೊಳ್ಳಲು ಎಷ್ಟೇ ಪ್ರಯತ್ನಮಾಡಿದರೂ ಅವರ ವಾಸನೆಗಳು ಕ್ಷೀಣಿಸುವುದಿಲ್ಲ. ರಾಜನೇ! ಅವರ ಮನಸ್ಸು ಪುನಃ ವಿಷಯಗಳಿಗಾಗಿ ತವಕಿಸುತ್ತದೆ. ॥ ೬೧ ॥ ರಾಜಾ! ನೀನು ನಿನ್ನ ಮನಸ್ಸನ್ನು ಮತ್ತು ಮನೋಭಾವಗಳನ್ನು ನನ್ನಲ್ಲಿ ಅರ್ಪಿಸಿಬಿಡು. ನನ್ನಲ್ಲಿ ತೊಡಗಿಸು ಮತ್ತೆ ಸ್ವೇಚ್ಛೆಯಿಂದ ಭೂಮಂಡಲದಲ್ಲಿ ಸಂಚರಿಸುತ್ತಿರು. ನನ್ನಲ್ಲಿ ನಿನಗೆ ಸ್ಥಿರವಾದ ಭಕ್ತಿಯು ನಿತ್ಯ-ನಿರಂತರವಾಗಿ ಇದ್ದೇ ಇರುವುದು. ॥ ೬೨ ॥ ನೀನು ಕ್ಷತ್ರಿಯ ಧರ್ಮವನ್ನು ಆಚರಿಸುತ್ತಿರುವಾಗ ಬೇಟೆಯೇ ಮೊದಲಾದ ಸಂದರ್ಭಗಳಲ್ಲಿ ಬಹಳಷ್ಟು ಪಶುಗಳನ್ನು ಕೊಂದಿರುವೆ. ಈಗ ಏಕಾಗ್ರಚಿತ್ತದಿಂದ ನನ್ನನ್ನು ಉಪಾಸಿಸುತ್ತಾ, ತಪಸ್ಸಿನ ಮೂಲಕ ಆ ಪಾಪಗಳನ್ನು ಕಳೆದುಕೋ. ॥ ೬೩ ॥ ರಾಜನೇ! ಮುಂದಿನ ಜನ್ಮದಲ್ಲಿ ನೀನು ಬ್ರಾಹ್ಮಣನಾಗಿ ಹುಟ್ಟಿ ಸಮಸ್ತ ಪ್ರಾಣಿಗಳ ನಿಜವಾದ ಹಿತೈಷಿಯೂ, ಪರಮಸುಹೃದನೂ ಆಗುವೆ. ಮತ್ತೆ ವಿಶುದ್ಧ ವಿಜ್ಞಾನಘನ ಪರಮಾತ್ಮನಾದ ನನ್ನನ್ನು ಪಡೆಯುವೆ. ॥ ೬೪ ॥

*ಐವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೫೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಮುಚುಕುಂದಸ್ತುತಿರ್ನಾಮೈಕಪಂಚಾಶತ್ತಮೋಽಧ್ಯಾಯಃ ॥ ೫೧ ॥

# ಐವತ್ತೆರಡನೆಯ ಅಧ್ಯಾಯ

## ದ್ವಾರಕಾಗಮನ, ಬಲರಾಮನ ವಿವಾಹ,
## ರುಕ್ಮಿಣಿಯ ಸಂದೇಶವನ್ನು ಹೊತ್ತು ತಂದ ಬ್ರಾಹ್ಮಣನ ಆಗಮನ

ಶ್ರೀಶುಕ ಉವಾಚ

ಇತ್ಥಂ ಸೋಽನುಗೃಹೀತೋಽಂಗ ಕೃಷ್ಣೇನೇಕ್ಷ್ವಾಕುನಂದನಃ ।
ತಂ ಪರಿಕ್ರಮ್ಯ ಸನ್ನಮ್ಯ ನಿಶ್ಚಕ್ರಾಮ ಗುಹಾಮುಖಾತ್
॥ ೧ ॥

ಸ ವೀಕ್ಷ್ಯ ಕ್ಷುಲ್ಲಕಾನ್ ಮರ್ತ್ಯಾನ್ ಪಶೂನ್ ವೀರುದ್ವನಸ್ಪತೀನ್ ।
ಮತ್ವಾ ಕಲಿಯುಗಂ ಪ್ರಾಪ್ತಂ ಜಗಾಮ ದಿಶಮುತ್ತರಾಮ್
॥ ೨ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಪರೀಕ್ಷಿತ ಮಹಾರಾಜ! ಭಗವಾನ್ ಶ್ರೀಕೃಷ್ಣನು ಹೀಗೆ ಇಕ್ಷ್ವಾಕುಕುಲ ನಂದನನಾದ ಮುಚುಕುಂದನಿಗೆ ಅನುಗ್ರಹಿಸಿದನು. ಆಗ ಅವನು ಭಗವಂತನಿಗೆ ಪ್ರದಕ್ಷಿಣೆ ಬಂದು, ನಮಸ್ಕರಿಸಿ ಗುಹೆಯಿಂದ ಹೊರಗೆ ಹೊರಟನು. ॥ ೧ ॥ ಗುಹೆಯಿಂದ ಹೊರಗೆ ಬಂದು ಮುಚುಕುಂದನು ನೋಡುತ್ತಾನೆ – ಎಲ್ಲ ಮನುಷ್ಯರು, ಪಶುಗಳು, ಲತಾ-ವೃಕ್ಷಾದಿಗಳು ಮೊದಲಿಗಿಂತ ಬಹಳ ಸಣ್ಣ-ಸಣ್ಣದಾಗಿವೆ. ಓಹೋ! ಈಗ ಕಲಿಯುಗವು ಬಂದುಬಿಟ್ಟಿದೆ ಎಂದು ತಿಳಿದು ಅವನು ಉತ್ತರದ ಕಡೆಗೆ ಪ್ರಯಾಣ ಮಾಡಿದನು. ॥ ೨ ॥

ತಪಃಶ್ರದ್ಧಾಯುತೋ ಧೀರೋ ನಿಃಸಂಗೋ ಮುಕ್ತಸಂಶಯಃ ।
ಸಮಾಧಾಯ ಮನಃ ಕೃಷ್ಣೇ ಪ್ರಾವಿಶದ್ಗಂಧಮಾದನಮ್
॥ ೩ ॥

ಬದರ್ಯಾಶ್ರಮಮಾಸಾದ್ಯ ನರನಾರಾಯಣಾಲಯಮ್ ।
ಸರ್ವದ್ವಂದ್ವಸಹಃ ಶಾಂತಸ್ತಪಸಾಽಽರಾಧಯದ್ಧರಿಮ್
॥ ೪ ॥

ಭಗವಾನ್ ಪುನರಾವ್ರಜ್ಯ ಪುರೀಂ ಯವನವೇಷ್ಟಿತಾಮ್ ।
ಹತ್ವಾ ಮ್ಲೇಚ್ಛಬಲಂ ನಿನ್ಯೇ ತದೀಯಂ ದ್ವಾರಕಾಂ ಧನಮ್
॥ ೫ ॥

ನೀಯಮಾನೇ ಧನೇ ಗೋಭಿರ್ನೃಭಿಶ್ಚಾಚ್ಯುತಚೋದಿತೈಃ ।
ಆಜಗಾಮ ಜರಾಸಂಧಸ್ತ್ರಯೋವಿಂಶತ್ಯನೀಕಪಃ
॥ ೬ ॥

ವಿಲೋಕ್ಯ ವೇಗರಭಸಂ ರಿಪುಸೈನ್ಯಸ್ಯ ಮಾಧವೌ ।
ಮನುಷ್ಯಚೇಷ್ಟಾಮಾಪನ್ನೌ ರಾಜನ್ ದುದ್ರುವತುರ್ದ್ರುತಮ್
॥ ೭ ॥

ವಿಹಾಯ ವಿತ್ತಂ ಪ್ರಚುರಮಭೀತೌ ಭೀರುಭೀತವತ್ ।
ಪದ್ಭ್ಯಾಂ ಪದ್ಮಪಲಾಶಾಭ್ಯಾಂ ಚೇರತುರ್ಬಹುಯೋಜನಮ್
॥ ೮ ॥

ಪಲಾಯಮಾನೌ ತೌ ದೃಷ್ಟ್ವಾ ಮಾಗಧಃ ಪ್ರಹಸನ್ ಬಲೀ ।
ಅನ್ವಧಾವದ್ರಥಾನೀಕೈರೀಶಯೋರಪ್ರಮಾಣವಿತ್
॥ ೯ ॥

ಪ್ರದ್ರುತ್ಯ ದೂರಂ ಸಂಶ್ರಾಂತೌ ತುಂಗಮಾರುಹತಾಂ ಗಿರಿಮ್ ।
ಪ್ರವರ್ಷಣಾಖ್ಯಂ ಭಗವಾನ್ ನಿತ್ಯದಾ ಯತ್ರ ವರ್ಷತಿ
॥ ೧೦ ॥

ಗಿರೌ ನಿಲೀನಾವಾಜ್ಞಾಯ ನಾಧಿಗಮ್ಯ ಪದಂ ನೃಪ ।
ದದಾಹ ಗಿರಿಮೇಧೋಭಿಃ ಸಮಂತಾದಗ್ನಿಮುತ್ಸೃಜನ್
॥ ೧೧ ॥

ತತ ಉತ್ಪತ್ಯ ತರಸಾ ದಹ್ಯಮಾನತಟಾದುಭೌ ।
ದಶೈಕಯೋಜನೋತ್ತುಂಗಾನ್ನಿಪೇತತುರಧೋ ಭುವಿ
॥ ೧೨ ॥

ಅಲಕ್ಷ್ಯಮಾಣೌ ರಿಪುಣಾ ಸಾನುಗೇನ ಯದೂತ್ತಮೌ ।
ಸ್ವಪುರಂ ಪುನರಾಯಾತೌ ಸಮುದ್ರಪರಿಖಾಂ ನೃಪ
॥ ೧೩ ॥

ಸೋಽಪಿ ದಗ್ಧಾವಿತಿ ಮೃಷಾ ಮನ್ವಾನೋ ಬಲಕೇಶವೌ ।
ಬಲಮಾಕೃಷ್ಯ ಸುಮಹನ್ಮಗಧಾನ್ ಮಾಗಧೋ ಯಯೌ
॥ ೧೪ ॥

ಮುಚುಕುಂದ ರಾಜನು ತಪಸ್ಸು, ಶ್ರದ್ಧೆ, ಧೈರ್ಯ, ಅನಾಸಕ್ತಿ ಇವುಗಳಿಂದ ಕೂಡಿದ್ದು ಸಂದೇಹ ರಹಿತನಾಗಿದ್ದನು. ಅವನು ತನ್ನ ಚಿತ್ತವನ್ನು ಭಗವಂತನಲ್ಲಿ ತೊಡಗಿಸಿ ಗಂಧಮಾದನ ಪರ್ವತಕ್ಕೆ ಹೋದನು. ॥ ೩॥ ಅಲ್ಲಿಂದ ಭಗವಾನ್ ನರ-ನಾರಾಯಣರ ನಿತ್ಯನಿವಾಸ ಸ್ಥಾನವಾದ ಬದರಿಕಾಶ್ರಮಕ್ಕೆ ತಲುಪಿ ಬಹಳ ಶಾಂತ ಭಾವದಿಂದ ಶೀತೋಷ್ಣ-ಸುಖ-ದುಃಖಾದಿ ದ್ವಂದ್ವಗಳನ್ನು ಸಹಿಸುತ್ತಾ ತಪಸ್ಸಿನಿಂದ ಭಗವಂತನ ಆರಾಧನೆಯಲ್ಲಿ ತೊಡಗಿದನು. ॥ ೪ ॥

ಇತ್ತಲಾಗಿ ಭಗವಾನ್ ಶ್ರೀಕೃಷ್ಣನು ಮಥುರೆಗೆ ಮರಳಿದನು. ಅದುವರೆಗೂ ಕಾಲಯವನನ ಸೈನಿಕರು ಮಥುರೆಯನ್ನು ಆಕ್ರಮಿಸಿಕೊಂಡೇ ಇದ್ದರು. ಶ್ರೀಕೃಷ್ಣನು ಆ ಮ್ಲೇಚ್ಛರ ಸೈನ್ಯವನ್ನು ಸಂಹರಿಸಿ, ಅವರ ಎಲ್ಲ ಧನವನ್ನು ಕಸಿದುಕೊಂಡು ದ್ವಾರಕೆಗೆ ತೆರಳಿದನು. ॥ ೫ ॥ ಶ್ರೀಕೃಷ್ಣನ ಅಪ್ಪಣೆಯಂತೆ ಆ ಧನವನ್ನು ಮನುಷ್ಯರ, ಎತ್ತುಗಳ ಮೂಲಕ ತೆಗೆದುಕೊಂಡು ಹೋಗುತ್ತಿದ್ದಾಗ ಜರಾಸಂಧನು ಪುನಃ ಹದಿನೆಂಟನೆಯ ಬಾರಿಗೆ ಇಪ್ಪತ್ತಮೂರು ಅಕ್ಷೌಹಿಣಿ ಸೈನ್ಯದೊಂದಿಗೆ ಆಗಮಿಸಿದನು. ॥ ೬ ॥ ಪರೀಕ್ಷಿತನೇ! ಶತ್ರು ಸೈನ್ಯವು ರಭಸದಿಂದ ಬರುತ್ತಿರುವುದನ್ನು ನೋಡಿದ ಭಗವಾನ್ ಶ್ರೀಕೃಷ್ಣ-ಬಲರಾಮರು ಮನುಷ್ಯರಂತೆ ಲೀಲೆಯನ್ನು ತೋರುತ್ತಾ ಅವನ ಇದಿರಿಗೆ ಪಲಾಯನ ಮಾಡಿದರು. ॥ ೭ ॥ ನಿಜವಾಗಿಯೂ ಅವರ ಮನಸ್ಸಿನಲ್ಲಿ ಸ್ವಲ್ಪವೂ ಭಯವಿರಲಿಲ್ಲ, ಆದರೂ ಅತ್ಯಂತ ಭಯಗೊಂಡವರಂತೆ ನಟಿಸುತ್ತಾ, ಆ ಎಲ್ಲ ಧನವನ್ನು ಅಲ್ಲೇ ಬಿಟ್ಟು ಅವರು ಅನೇಕ ಯೋಜನಗಳಷ್ಟು ತಮ್ಮ ಕಮಲದಳದಂತೆ ಇರುವ ಸುಕೋಮಲ ಚರಣಗಳಿಂದ ಓಡುತ್ತಾ ಹೋದರು. ॥ ೮ ॥ ಶ್ರೀಕೃಷ್ಣ-ಬಲರಾಮರು ಓಡುತ್ತಿರುವುದನ್ನು ಮಹಾಬಲಿಷ್ಠನಾದ ಮಾಗಧನು ನೋಡಿ ಗಹಗಹಿಸಿ ನಗುತ್ತಾ ತನ್ನ ರಥ ಸೇನೆಯೊಂದಿಗೆ ಅವರನ್ನು ಹಿಂಬಾಲಿಸಿದನು. ಅವನು ಬಲರಾಮ-ಕೃಷ್ಣರ ಪ್ರಭಾವವನ್ನು ತಿಳಿದವನಾಗಿರಲಿಲ್ಲ. ॥ ೯ ॥ ಬಹಳ ದೂರದವರೆಗೆ ಓಡಿದ್ದರಿಂದ ಸಹೋದರರಿಬ್ಬರೂ ಬಳಲಿ ದಂತಾಗಿ ಎತ್ತರವಾದ ಪ್ರವರ್ಷಣವೆಂಬ ಪರ್ವತವನ್ನು ಹತ್ತಿದರು. ಮೇಘಗಳು ಆ ಪರ್ವತದ ಮೇಲೆ ಸದಾಕಾಲವೂ ಮಳೆಗರೆ ಯುತ್ತಿದ್ದರಿಂದ ಅದು 'ಪ್ರವರ್ಷಣ'ವೆಂಬ ಹೆಸರನ್ನು ಪಡೆದಿತ್ತು. ॥ ೧೦ ॥ ಪರೀಕ್ಷಿತನೇ! ಅವರಿಬ್ಬರೂ ಬೆಟ್ಟದಲ್ಲಿ ಅವಿತು ಕೊಂಡಿದ್ದು ಎಷ್ಟು ಹುಡುಕಿದರೂ ಅವರು ಕಾಣದಿದ್ದಾಗ ಜರಾಸಂಧನು ಪರ್ವತದ ಸುತ್ತಲೂ ಬೆಂಕಿಯಿಟ್ಟು ಅದನ್ನು ಸುಟ್ಟುಬಿಟ್ಟನು. ॥ ೧೧ ॥ ಪರ್ವತದ ತಪ್ಪಲು ಸುತ್ತಲೂ ಉರಿಯುತ್ತಿರುವುದನ್ನು ಭಗವಂತನು ನೋಡಿದನು. ಆಗ ಸೋದರರಿಬ್ಬರೂ ಜರಾಸಂಧನ ಸೈನ್ಯದಿಂದ ಸುತ್ತುವರಿಯಲ್ಪಟ್ಟ ಹನ್ನೊಂದು ಯೋಜನ ಎತ್ತರವಾಗಿದ್ದ ಆ ಪರ್ವತದಿಂದ ವೇಗವಾಗಿ ಕೆಳಗೆ ಭೂಮಿಗೆ ನೆಗೆದರು. ॥ ೧೨ ॥ ರಾಜೇಂದ್ರ! ಜರಾಸಂಧ ನಾಗಲೀ, ಅವನ ಸೈನಿಕರಾಗಲೀ ಯಾರಿಗೂ ಅವರು ಕಾಣಿಸಲಿಲ್ಲ. ಅವರಿಬ್ಬರೂ ಅಲ್ಲಿಂದ ಹೊರಟು ಸಮುದ್ರದಿಂದ ಸುತ್ತುವರಿಯಲ್ಪಟ್ಟ ತಮ್ಮ ದ್ವಾರಕೆಗೆ ಹೋಗಿಬಿಟ್ಟರು. ॥ ೧೩ ॥ ಜರಾಸಂಧನು ಶ್ರೀಕೃಷ್ಣ ಬಲರಾಮರನ್ನು ಕಾಣದೆ ಅವರು ಬೆಂಕಿಯಲ್ಲಿ ಸುಟ್ಟು ಹೋಗಿದ್ದಾರೆ ಎಂದು ತಪ್ಪಾಗಿ ತಿಳಿದುಕೊಂಡನು. ಮತ್ತೆ ಸೈನ್ಯದೊಂದಿಗೆ ಹಿಂದಿರುಗಿ ಮಗಧ ದೇಶಕ್ಕೆ ಹೊರಟು ಹೋದನು. ॥ ೧೪ ॥

ಆನರ್ತಾಧಿಪತಿಃ ಶ್ರೀಮಾನ್ ರೈವತೋ ರೇವತೀಂ ಸುತಾಮ್ ।
ಬ್ರಹ್ಮಣಾ ಚೋದಿತಃ ಪ್ರಾದಾದ್ಬಲಾಯೇತಿ ಪುರೋದಿತಮ್
॥ ೧೫ ॥

ಭಗವಾನಪಿ ಗೋವಿಂದ ಉಪಯೇಮೇ ಕುರೂದ್ವಹ ।
ವೈದರ್ಭೀಂ ಭೀಷ್ಮಕಸುತಾಂ ಶ್ರಿಯೋ ಮಾತ್ರಾಂ ಸ್ವಯಂವರೇ
॥ ೧೬ ॥

ಪ್ರಮಥ್ಯ ತರಸಾ ರಾಜ್ಞಃ ಶಾಲ್ವಾದೀಂಶ್ಚೈದ್ಯಪಕ್ಷಗಾನ್ ।
ಪಶ್ಯತಾಂ ಸರ್ವಲೋಕಾನಾಂ ತಾರ್ಕ್ಷ್ಯಪುತ್ರಃ ಸುಧಾಮಿವ
॥ ೧೭ ॥

*ರಾಜೋವಾಚ*

ಭಗವಾನ್ ಭೀಷ್ಮಕಸುತಾಂ ರುಕ್ಮಿಣೀಂ ರುಚಿರಾನನಾಮ್ ।
ರಾಕ್ಷಸೇನ ವಿಧಾನೇನ ಉಪಯೇಮ ಇತಿ ಶ್ರುತಮ್
॥ ೧೮ ॥

ಭಗವನ್ ಶ್ರೋತುಮಿಚ್ಛಾಮಿ ಕೃಷ್ಣಸ್ಯಾಮಿತತೇಜಸಃ ।
ಯಥಾ ಮಾಗಧಶಾಲ್ವಾದೀನ್ ಜಿತ್ವಾ ಕನ್ಯಾಮುಪಾಹರತ್
॥ ೧೯ ॥

ಬ್ರಹ್ಮನ್ ಕೃಷ್ಣಕಥಾಃ ಪುಣ್ಯಾ ಮಾಧ್ವೀರ್ಲೋಕಮಲಾಪಹಾಃ ।
ಕೋ ನು ತೃಪ್ಯೇತ ಶೃಣ್ವಾನಃ ಶ್ರುತಜ್ಞೋ ನಿತ್ಯನೂತನಾಃ
॥ ೨೦ ॥

*ಶ್ರೀಶುಕ ಉವಾಚ*

ರಾಜಾಽಽಸೀದ್ಭೀಷ್ಮಕೋ ನಾಮ ವಿದರ್ಭಾಧಿಪತಿರ್ಮಹಾನ್ ।
ತಸ್ಯ ಪಂಚಾಭವನ್ ಪುತ್ರಾಃ ಕನ್ಯೈಕಾ ಚ ವರಾನನಾ
॥ ೨೧ ॥

ರುಕ್ಮ್ಯಗ್ರಜೋ ರುಕ್ಮರಥೋ ರುಕ್ಮಬಾಹುರನಂತರಃ ।
ರುಕ್ಮಕೇಶೋ ರುಕ್ಮಮಾಲೀ ರುಕ್ಮಿಣ್ಯೇಷಾಂ ಸ್ವಸಾ ಸತೀ
॥ ೨೨ ॥

ಸೋಪಶ್ರುತ್ಯ ಮುಕುಂದಸ್ಯ ರೂಪವೀರ್ಯಗುಣಶ್ರಿಯಃ ।
ಗೃಹಾಗತೈರ್ಗೀಯಮಾನಾಸ್ತಂ ಮೇನೇ ಸದೃಶಂ ಪತಿಮ್
॥ ೨೩ ॥

ತಾಂ ಬುದ್ಧಿಲಕ್ಷಣೌದಾರ್ಯರೂಪಶೀಲಗುಣಾಶ್ರಯಾಮ್ ।
ಕೃಷ್ಣಶ್ಚ ಸದೃಶೀಂ ಭಾರ್ಯಾಂ ಸಮುದ್ವೋಢುಂ ಮನೋ ದಧೇ
॥ ೨೪ ॥

ಬಂಧೂನಾಮಿಚ್ಛತಾಂ ದಾತುಂ ಕೃಷ್ಣಾಯ ಭಗಿನೀಂ ನೃಪ ।
ತತೋ ನಿವಾರ್ಯ ಕೃಷ್ಣದ್ವಿಡ್ರುಕ್ಮೀ ಚೈದ್ಯಮಮನ್ಯತ
॥ ೨೫ ॥

ಪರೀಕ್ಷಿತ ಮಹಾರಾಜ ! ನಾನು ಹಿಂದೆ (ಒಂಭತ್ತನೆಯ ಸ್ಕಂಧ ದಲ್ಲಿ) ಆನರ್ತ ದೇಶದ ರಾಜನಾದ ರೈವತನು ತನ್ನ ಮಗಳಾದ ರೇವತಿಯನ್ನು ಬ್ರಹ್ಮದೇವರ ಪ್ರೇರಣೆಯಂತೆ ಬಲರಾಮನಿಗೆ ಕೊಟ್ಟು ವಿವಾಹಮಾಡಿದನೆಂಬ ಸಂಗತಿಯನ್ನು ಹೇಳಿದ್ದೆನು.॥೧೫॥ ರಾಜನೇ ! ಭಗವಾನ್ ಶ್ರೀಕೃಷ್ಣನೂ ಕೂಡ ಸ್ವಯಂವರಕ್ಕೆ ಬಂದ ಶಿಶುಪಾಲ ಮತ್ತು ಅವನ ಪಕ್ಷಪಾತಿಗಳು ಶಾಲ್ವರೇ ಮೊದಲಾದ ರಾಜರನ್ನು ಬಲಪೂರ್ವಕವಾಗಿ ಪರಾಜಯಗೊಳಿಸಿ, ಎಲ್ಲರೂ ನೋಡುತ್ತಿರುವಂತೆಯೇ ಗರುಡನು ಅಮೃತವನ್ನು ಅಪಹರಿಸಿದಂತೆಯೇ ವಿದರ್ಭದೇಶದ ರಾಜಕುಮಾರಿಯಾದ ರುಕ್ಮಿಣಿಯನ್ನು ಅಪಹರಿಸಿ ತಂದು ಅವಳೊಡನೆ ವಿವಾಹವಾದನು. ರುಕ್ಮಿಣಿಯು ಭೀಷ್ಮಕನ ಕನ್ಯೆಯಾಗಿದ್ದು ಸಾಕ್ಷಾತ್ ಲಕ್ಷ್ಮಿಯ ಅವತಾರವಾಗಿದ್ದಳು. ॥ ೧೬-೧೭ ॥

**ಪರೀಕ್ಷಿತ ರಾಜನು ಕೇಳಿದನು** - ಪೂಜ್ಯರೇ! ಭಗವಾನ್ ಶ್ರೀಕೃಷ್ಣನು ಭೀಷ್ಮಕನ ಮಗಳಾದ ಪರಮ ಸುಂದರಿ ರುಕ್ಮಿಣೀದೇವಿ ಯನ್ನು ಬಲವಂತವಾಗಿ ಕರೆತಂದು ರಾಕ್ಷಸ ವಿಧಿಯಂತೆ ಅವ ಳೊಂದಿಗೆ ವಿವಾಹವಾದನು ಎಂದು ನಾವು ಕೇಳಿದ್ದೇವೆ. ॥ ೧೮ ॥ ಮಹಾತ್ಮರೇ! ಪರಮತೇಜಸ್ವಿಯಾದ ಶ್ರೀಕೃಷ್ಣನು ಜರಾಸಂಧ, ಶಾಲ್ವ ಮೊದಲಾದ ರಾಜರನ್ನು ಗೆದ್ದು ಯಾವ ವಿಧಿಯಿಂದ ರುಕ್ಮಿಣಿ ಯನ್ನು ಅಪಹರಿಸಿದನು? ಇದನ್ನು ಕೇಳಲು ನಾನು ಇಚ್ಛಿಸು ತ್ತೇನೆ. ॥ ೧೯ ॥ ಬ್ರಹ್ಮರ್ಷಿಗಳೇ! ನಿಶ್ಚಯವಾಗಿಯೂ ಭಗವಾನ್ ಶ್ರೀಕೃಷ್ಣನ ಲೀಲಾ ಪ್ರಸಂಗಗಳು ಪುಣ್ಯತಮವಾದವುಗಳು. ಜಗತ್ತಿನ ಪಾಪಗಳನ್ನು ಹೋಗಲಾಡಿಸಿ, ಪವಿತ್ರಮಾಡುವಂತಹುದು. ಇಂತಹ ನಿತ್ಯನೂತನವಾದ ಆ ಲೀಲೆಗಳನ್ನು ಶ್ರವಣಿಸಿ ಯಾವ ರಸಿಕನು ತಾನೇ ತೃಪ್ತಿಹೊಂದಬಲ್ಲನು ? ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ವಿದರ್ಭದೇಶಕ್ಕೆ ಭೀಷ್ಮಕ ಮಹಾರಾಜನು ಅಧಿಪತಿಯಾಗಿದ್ದನು. ಅವನಿಗೆ ಐವರು ಪುತ್ರರೂ, ಓರ್ವ ಸುಂದರಿಯಾದ ಕನ್ಯೆ ಇದ್ದಳು. ॥ ೨೧ ॥ ಹಿರಿಯ ಪುತ್ರನ ಹೆಸರು ರುಕ್ಮಿ ಎಂದಿದ್ದು ರುಕ್ಮರಥ, ರುಕ್ಮಬಾಹು, ರುಕ್ಮಕೇಶ ಮತ್ತು ರುಕ್ಮಮಾಲಿ ಎಂಬ ನಾಲ್ವರು ಸಹೋದರರ ಹೆಸರುಗಳು. ಸತೀ ರುಕ್ಮಿಣಿಯು ಇವರಿಗೆ ಸಹೋದರಿಯಾಗಿದ್ದಳು. ॥ ೨೨ ॥ ಭೀಷ್ಮಕನ ಅರಮನೆಗೆ ಬರುತ್ತಿದ್ದ ಹರಿದಾಸರಿಂದ ಪ್ರಶಂಸಿಸಲ್ಪಟ್ಟ ಭಗವಾನ್ ಶ್ರೀಕೃಷ್ಣನ ಸೌಂದರ್ಯ, ಪರಾಕ್ರಮ, ಗುಣ-ವೈಭವಗಳನ್ನು ರುಕ್ಮಿಣಿಯು ಕೇಳಿದಳು. ಆಗ ಆಕೆಯು ಶ್ರೀಕೃಷ್ಣನೇ ನನಗೆ ಅನುರೂಪನಾದ ಪತಿಯೆಂದು ನಿಶ್ಚಯಿಸಿದಳು. ॥ ೨೩ ॥ ಅತ್ತ ಭಗವಾನ್ ಶ್ರೀಕೃಷ್ಣನೂ ರುಕ್ಮಿಣಿಯು ಅತ್ಯಂತ ಸುಂದರಳೂ, ಪರಮಬುದ್ಧಿವಂತೆಯೂ, ಉದಾರಳೂ, ಸೌಂದರ್ಯ-ಶೀಲಸ್ವಭಾವ ಗುಣಗಳಿಂದ ಅದ್ವಿತೀಯಳೂ ಆಗಿರುವಳೆಂದು ತಿಳಿದುಕೊಂಡು ರುಕ್ಮಿಣಿಯೇ ತನಗೆ ಅನುರೂಪ ಪತ್ನಿಯೆಂದೇ ಭಾವಿಸಿ ಅವಳೊಂದಿಗೆ ವಿವಾಹ ವಾಗುವುದಾಗಿ ನಿಶ್ಚಯಿಸಿದನು. ॥ ೨೪ ॥ ರುಕ್ಮಿಣಿಯ ವಿವಾಹವು ಶ್ರೀಕೃಷ್ಣನೊಂದಿಗೆ ಆಗಬೇಕೆಂದು ಬಂಧು-ಬಾಂಧವರು ಬಯಸು ತ್ತಿದ್ದರು. ಆದರೆ ರುಕ್ಮಿಯು ಶ್ರೀಕೃಷ್ಣನನ್ನು ಬಹಳವಾಗಿ ದ್ವೇಷಿಸು ತ್ತಿದ್ದನು. ಅವನು ಆಕೆಯನ್ನು ವಿವಾಹಮಾಡಿಕೊಡಲು ತಡೆದು, ತನ್ನ ಮಿತ್ರನಾದ ಶಿಶುಪಾಲನೇ ನಮ್ಮ ತಂಗಿಗೆ ಯೋಗ್ಯವರನೆಂದು ತಿಳಿಯುತ್ತಿದ್ದನು. ॥ ೨೫ ॥

ತದವೇತ್ಯಾಸಿತಾಪಾಂಗೀ ವೈದರ್ಭೀ ದುರ್ಮನಾ ಭೃಶಮ್ ।
ವಿಚಿಂತ್ಯಾಪ್ತಂ ದ್ವಿಜಂ ಕಂಚಿತ್ ಕೃಷ್ಣಾಯ ಪ್ರಾಹಿಣೋದ್ದ್ರುತಮ್
॥ ೨೬ ॥

ದ್ವಾರಕಾಂ ಸ ಸಮಭ್ಯೇತ್ಯ ಪ್ರತೀಹಾರೈಃ ಪ್ರವೇಶಿತಃ ।
ಅಪಶ್ಯದಾದ್ಯಂ ಪುರುಷಮಾಸೀನಂ ಕಾಂಚನಾಸನೇ
॥ ೨೭ ॥

ದೃಷ್ಟ್ವಾ ಬ್ರಹ್ಮಣ್ಯದೇವಸ್ತಮವರುಹ್ಯ ನಿಜಾಸನಾತ್ ।
ಉಪವೇಶ್ಯಾರ್ಹಯಾಂಚಕ್ರೇ ಯಥಾಽಽತ್ಮಾನಂ ದಿವೌಕಸಃ
॥ ೨೮ ॥

ತಂ ಭುಕ್ತವಂತಂ ವಿಶ್ರಾಂತಮುಪಗಮ್ಯ ಸತಾಂ ಗತಿಃ ।
ಪಾಣಿನಾಭಿಮೃಶನ್ ಪಾದಾವವ್ಯಗ್ರಸ್ತಮಪೃಚ್ಛತ
॥ ೨೯ ॥

ಕಚ್ಚಿದ್ದ್ವಿಜವರಶ್ರೇಷ್ಠ ಧರ್ಮಸ್ತೇ ವೃದ್ಧಸಮ್ಮತಃ ।
ವರ್ತತೇ ನಾತಿಕೃಚ್ಛ್ರೇಣ ಸಂತುಷ್ಟಮನಸಃ ಸದಾ
॥ ೩೦ ॥

ಸಂತುಷ್ಟೋ ಯರ್ಹಿ ವರ್ತೇತ ಬ್ರಾಹ್ಮಣೋ ಯೇನ ಕೇನಚಿತ್ ।
ಅಹೀಯಮಾನಃ ಸ್ವಾದ್ಧರ್ಮಾತ್ ಸ ಹ್ಯಸ್ಯಾಖಿಲಕಾಮಧುಕ್
॥ ೩೧ ॥

ಅಸಂತುಷ್ಟೋಽಸಕೃಲ್ಲೋಕಾನಾಪ್ನೋತ್ಯಪಿ ಸುರೇಶ್ವರಃ ।
ಅಕಿಂಚನೋಽಪಿ ಸಂತುಷ್ಟಃ ಶೇತೇ ಸರ್ವಾಂಗವಿಜ್ವರಃ
॥ ೩೨ ॥

ವಿಪ್ರಾನ್ ಸ್ವಲಾಭಸಂತುಷ್ಟಾನ್ ಸಾಧೂನ್ ಭೂತಸುಹೃತ್ತಮಾನ್ ।
ನಿರಹಂಕಾರಿಣಃ ಶಾಂತಾನ್ ನಮಸ್ಯೇ ಶಿರಸಾಸಕೃತ್
॥ ೩೩ ॥

ಕಚ್ಚಿದ್ವಃ ಕುಶಲಂ ಬ್ರಹ್ಮನ್ ರಾಜತೋ ಯಸ್ಯ ಹಿ ಪ್ರಜಾಃ ।
ಸುಖಂ ವಸಂತಿ ವಿಷಯೇ ಪಾಲ್ಯಮಾನಾಃ ಸ ಮೇ ಪ್ರಿಯಃ
॥ ೩೪ ॥

ಯತಸ್ತ್ವಮಾಗತೋ ದುರ್ಗಂ ನಿಸ್ತೀರ್ಯೇಹ ಯದಿಚ್ಛಯಾ ।
ಸರ್ವಂ ನೋ ಬ್ರೂಹ್ಯಗುಹ್ಯಂ ಚೇತ್ ಕಿಂ ಕಾರ್ಯಂ ಕರವಾಮ ತೇ
॥ ೩೫ ॥

ತನ್ನ ಹಿರಿಯಣ್ಣನಾದ ರುಕ್ಮಿಯು ಶಿಶುಪಾಲನೊಂದಿಗೆ ನನ್ನ ವಿವಾಹ ಮಾಡಲಿದ್ದಾನೆಂದು ತಿಳಿದ ಪರಮಸುಂದರಳಾದ ರುಕ್ಮಿಣಿಯು ಅತ್ಯಂತ ದುಃಖಿತಳಾಗಿ ಬಹಳವಾಗಿ ಯೋಚಿಸಿ ಕೊನೆಗೆ ತನ್ನ ವಿಶ್ವಾಸಪಾತ್ರನಾದ ಓರ್ವ ಬ್ರಾಹ್ಮಣನ ಮೂಲಕ ಕೂಡಲೇ ಶ್ರೀಕೃಷ್ಣನಿಗೆ ಸಂದೇಶವನ್ನು ಕಳಿಸಿದಳು. ॥ ೨೬ ॥ ಆ ಬ್ರಾಹ್ಮಣನು ದ್ವಾರಕಾಪಟ್ಟಣಕ್ಕೆ ತಲುಪಿದಾಗ ದ್ವಾರಪಾಲಕರು ಕೃಷ್ಣನ ಅರಮನೆಯೊಳಗೆ ಕರೆದುಕೊಂಡು ಹೋದರು. ಅಲ್ಲಿ ಅವನು ಆದಿಪುರುಷನಾದ ಭಗವಾನ್ ಶ್ರೀಕೃಷ್ಣನು ಸ್ವರ್ಣ ಸಿಂಹಾಸನದ ಮೇಲೆ ವಿರಾಜಮಾನನಾಗಿ ಇರುವುದನ್ನು ನೋಡಿದನು. ॥ ೨೭ ॥ ಬ್ರಾಹ್ಮಣರ ಪರಮಭಕ್ತನಾದ ಭಗವಾನ್ ಶ್ರೀಕೃಷ್ಣನು ಆ ಭೂಸುರೋತ್ತಮನನ್ನು ನೋಡುತ್ತಲೇ ತನ್ನ ಆಸನದಿಂದ ಇಳಿದು, ಅವನನ್ನು ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿ ದೇವತೆಗಳು ಭಗವಂತನನ್ನು ಪೂಜಿಸುವಂತೆಯೇ ಅವನನ್ನು ಪೂಜಿಸಿದನು. ॥ ೨೮ ॥ ಆದರ-ಸತ್ಕಾರವಾದ ಬಳಿಕ, ಕುಶಲ ಪ್ರಶ್ನೆಗಳಾದವು. ಬ್ರಾಹ್ಮಣನು ಉಂಡು-ತಿಂದು ವಿಶ್ರಾಂತಿ ಪಡೆಯುತ್ತಿದ್ದಾಗ ಪರಮಾಶ್ರಯನಾದ ಶ್ರೀಕೃಷ್ಣನು ಅವನ ಬಳಿಯಲ್ಲಿ ಕುಳಿತು ತನ್ನ ಕೋಮಲವಾದ ಕೈಗಳಿಂದ ಅವನ ಪಾದಸೇವೆಯನ್ನು ಮಾಡುತ್ತಾ . ಶಾಂತಭಾವದಿಂದ ಕೇಳಿದನು – ॥ ೨೯ ॥ ದ್ವಿಜಶ್ರೇಷ್ಠನೇ ! ನಿನ್ನ ಮನಸ್ಸು ಸದಾ ಸರ್ವದಾ ಸಂತುಷ್ಟವಾಗಿದೆಯಲ್ಲ ? ಹಿರಿಯರಿಗೆ ಒಪ್ಪಿಗೆಯಾದ ಧರ್ಮವನ್ನು ಆಚರಿಸಲು ನಿನಗೆ ಕಷ್ಟವೇನೂ ಆಗುತ್ತಿಲ್ಲವಲ್ಲ ! ॥ ೩೦ ॥ ಬ್ರಾಹ್ಮಣನು ದೊರೆತುದರಲ್ಲಿ ಸಂತುಷ್ಟನಾಗಿದ್ದು ಸ್ವಧರ್ಮವನ್ನು ಪಾಲಿಸುತ್ತಾ ಅದರಿಂದ ಚ್ಯುತನಾಗದಿದ್ದರೆ ಆ ಸಂತೋಷವೇ ಅವನ ಸಮಸ್ತ ಕಾಮನೆಗಳನ್ನು ಪೂರ್ಣಗೊಳಿಸುತ್ತದೆ. ॥ ೩೧ ॥ ಇಂದ್ರಪದವಿಯೂ ದೊರೆತರೂ ಸಂತೋಷವಾಗದಿರುವವನು ಸುಖಕ್ಕಾಗಿ ಒಂದು ಲೋಕದಿಂದ ಮತ್ತೊಂದು ಲೋಕಗಳಿಗೂ ಪದೇ-ಪದೇ ಅಲೆಯುತ್ತಾ ಎಂದಿಗೂ ಶಾಂತಿಯಿಂದ ಕುಳ್ಳಿರಲಾಗುವುದಿಲ್ಲ. ಆದರೆ ಬಳಿಯಲ್ಲಿ ಸ್ವಲ್ಪವೂ ಸಂಗ್ರಹ-ಪರಿಗ್ರಹವಿಲ್ಲದಿರುವವನು ಅದೇ ಸ್ಥಿತಿಯಲ್ಲಿ ಸಂತುಷ್ಟನಾಗಿದ್ದರೆ, ಅವನಿಗೆ ಎಲ್ಲ ರೀತಿಯ ಸಂತಾಪರಹಿತವಾದ ಸುಖ-ನಿದ್ದೆಯು ಬರುತ್ತದೆ. ॥ ೩೨ ॥ ತಾನಾಗಿ ದೊರೆತಿರುವ ವಸ್ತುವಿನಲ್ಲಿ ಸಂತೋಷಪಡುವ, ಸ್ವಭಾವವು ಅತ್ಯಂತ ಮೃದು ಮಧುರವಾಗಿದ್ದು, ಸಮಸ್ತ ಪ್ರಾಣಿಗಳ ಹಿತೈಷಿಯಾದ, ಅಹಂಕಾರ ರಹಿತರಾಗಿ ಶಾಂತರಾದ ಬ್ರಾಹ್ಮಣರನ್ನು ನಾನು ಸದಾಕಾಲ ತಲೆಬಾಗಿ ನಮಸ್ಕರಿಸುತ್ತೇನೆ. ॥ ೩೩ ॥ ಬ್ರಾಹ್ಮಣೋತ್ತಮನೇ ! ರಾಜನು ನಿಮ್ಮ ಯೋಗ-ಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳುತ್ತಿರುವನಲ್ಲ ? ಯಾರ ರಾಜ್ಯದಲ್ಲಿ ಪ್ರಜೆಗಳು ರಾಜನಿಂದ ಪಾಲಿಸಲ್ಪಡುತ್ತಾ, ಸುಖದಿಂದ ಇರುವರೋ, ಅಂತಹ ರಾಜನು ನನಗೆ ಅತ್ಯಂತ ಪ್ರಿಯನು. ॥ ೩೪ ॥ ಭೂಸುರ ಶ್ರೇಷ್ಠರೇ ! ನೀವು ಎಲ್ಲಿಂದ, ಯಾವ ಕಾರ್ಯಾರ್ಥವಾಗಿ, ಯಾವ ಅಭಿಲಾಷೆಯಿಂದ ಇಷ್ಟೊಂದು ಕಠಿಣವಾದ ಮಾರ್ಗವನ್ನು ಕ್ರಮಿಸಿ ಇಲ್ಲಿಗೆ ಆಗಮಿಸಿರುವಿರಿ. ಅಂತಹ ವಿಶೇಷವಾದ ಗೋಪ್ಯವಲ್ಲವಾಗಿದ್ದರೆ ನನಗೆ ಹೇಳಿರಿ. ನಾನು ನಿಮಗೆ ಯಾವ ಸೇವೆ ಮಾಡಲಿ? ಅಪ್ಪಣೆ ಕೊಡಿರಿ. ॥ ೩೫ ॥

ಏವಂ ಸಂಪೃಷ್ಟಸಂಪ್ರಶ್ನೋ ಬ್ರಾಹ್ಮಣಃ ಪರಮೇಷ್ಠಿನಾ ।
ಲೀಲಾಗೃಹೀತದೇಹೇನ ತಸ್ಮೈ ಸರ್ವಮವರ್ಣಯತ್
॥ ೩೬ ॥

ರುಕ್ಮಿಣ್ಯುವಾಚ

ಶ್ರುತ್ವಾ ಗುಣಾನ್ ಭುವನಸುಂದರ ಶೃಣ್ವತಾಂ ತೇ
ನಿರ್ವಿಶ್ಯ ಕರ್ಣವಿವರೈರ್ಹರತೋಽಂಗತಾಪಮ್ ।
ರೂಪಂ ದೃಶಾಂ ದೃಶಿಮತಾಮಖಿಲಾರ್ಥಲಾಭಂ
ತ್ವಯ್ಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ ॥ ೩೭ ॥

ಕಾ ತ್ವಾ ಮುಕುಂದ ಮಹತೀ ಕುಲಶೀಲರೂಪ-
ವಿದ್ಯಾವಯೋದ್ರವಿಣಧಾಮಭಿರಾತ್ಮತುಲ್ಯಮ್ ।
ಧೀರಾ ಪತಿಂ ಕುಲವತೀ ನ ವೃಣೀತ ಕನ್ಯಾ
ಕಾಲೇ ನೃಸಿಂಹ ನರಲೋಕಮನೋಽಭಿರಾಮಮ್ ॥ ೩೮ ॥

ತನ್ಮೇ ಭವಾನ್ ಖಲು ವೃತಃ ಪತಿರಂಗ ಜಾಯಾ-
ಮಾತ್ಮಾರ್ಪಿತಶ್ಚ ಭವತೋಽತ್ರ ವಿಭೋ ವಿಧೇಹಿ ।
ಮಾ ವೀರಭಾಗಮಭಿಮರ್ಶತು ಚೈದ್ಯ ಆರಾದ್
ಗೋಮಾಯುವನ್ಮೃಗಪತೇರ್ಬಲಿಮಂಬುಜಾಕ್ಷ ॥ ೩೯ ॥

ಪೂರ್ತೇಷ್ಟದತ್ತನಿಯಮವ್ರತದೇವವಿಪ್ರ-
ಗುರ್ವರ್ಚನಾದಿಭಿರಲಂ ಭಗವಾನ್ ಪರೇಶಃ ।
ಆರಾಧಿತೋ ಯದಿ ಗದಾಗ್ರಜ ಏತ್ಯ ಪಾಣಿಂ
ಗೃಹ್ಣಾತು ಮೇ ನ ದಮಘೋಷಸುತಾದಯೋಽನ್ಯೇ ॥ ೪೦ ॥

ಶ್ವೋಭಾವಿನಿ ತ್ವಮಜಿತೋದ್ವಹನೇ ವಿದರ್ಭಾನ್
ಗುಪ್ತಃ ಸಮೇತ್ಯ ಪೃತನಾಪತಿಭಿಃ ಪರೀತಃ ।
ನಿರ್ಮಥ್ಯ ಚೈದ್ಯಮಗಧೇಂದ್ರಬಲಂ ಪ್ರಸಹ್ಯ
ಮಾಂ ರಾಕ್ಷಸೇನ ವಿಧಿನೋದ್ವಹ ವೀರ್ಯಶುಲ್ಕಾಮ್ ॥ ೪೧ ॥

ಪರೀಕ್ಷಿತನೇ! ಲೀಲಾಮಾನುಷ ವಿಗ್ರಹನಾದ ಭಗವಾನ್ ಶ್ರೀಕೃಷ್ಣನು ಹೀಗೆ ಬ್ರಾಹ್ಮಣನಲ್ಲಿ ವಿಚಾರಿಸಿದಾಗ, ಅವನು ಎಲ್ಲವನ್ನೂ ಅರುಹಿದ ಬಳಿಕ ರುಕ್ಮಿಣೀದೇವಿಯ ಸಂದೇಶವನ್ನು ಭಗವಂತನಲ್ಲಿ ನಿವೇದಿಸಿಕೊಂಡನು. ॥ ೩೬ ॥

**ರುಕ್ಮಿಣೀದೇವಿಯು ಹೇಳಿರುವಳು** – ಓ ತ್ರಿಭುವನ ಸುಂದರನೇ! ನಿನ್ನ ಗುಣಗಳು ಶ್ರವಣಿಸುವವರ ಕಿವಿಗಳ ಮೂಲಕ ಹೃದಯವನ್ನು ಪ್ರವೇಶಿಸಿ ಸರ್ವಾಂಗಗಳ ತಾಪವನ್ನು, ಜನ್ಮ-ಜನ್ಮಾಂತರದ ಉರಿಯನ್ನು ಕಳೆಯುತ್ತವೆ. ನಿನ್ನ ರೂಪ-ಸೌಂದರ್ಯವಾದರೋ ಕಣ್ಣುಗಳಿಗೆ ಧರ್ಮಾರ್ಥಕಾಮ – ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಕೊಡುತ್ತದೆ. ನಿನ್ನ ದಿವ್ಯರೂಪವನ್ನು ಸಂದರ್ಶಿಸಿದವರಿಗೆ ಸಕಲ ಸಿದ್ಧಿಗಳೂ ದೊರಕುತ್ತವೆ. ಅಂತಹ ಗುಣಸಾಗರನಾದ ಅಚ್ಯುತನೇ! ನಿನ್ನಲ್ಲಿ ನನ್ನ ಮನಸ್ಸು ಯಾವುದೇ ನಾಚಿಕೆಯಿಲ್ಲದೆ ನೆಟ್ಟಿದೆ. ॥ ೩೭ ॥ ಪ್ರೇಮಸ್ವರೂಪನಾದ ಶ್ಯಾಮ ಸುಂದರನೇ! ಯಾವ ದೃಷ್ಟಿಯಿಂದ ನೋಡಿದರೂ, ಕುಲ, ಶೀಲ, ಸ್ವಭಾವ, ಸೌಂದರ್ಯ, ವಿದ್ಯೆ, ವಯಸ್ಸು, ಧನ-ಧಾಮ – ಹೀಗೆ ಎಲ್ಲದರಲ್ಲಿಯೂ ನೀನು ಅದ್ವಿತೀಯನಾಗಿರುವೆ. ನಿನ್ನಂತೆ ನೀನೇ ಆಗಿರುವೆ. ನರಶ್ರೇಷ್ಠನೇ! ನೀನೇ ಹೇಳು. ಸತ್ಕುಲ ಪ್ರಸೂತೆಯಾದ, ಧೈರ್ಯಶಾಲಿಯಾದ, ಯಾವ ಕನ್ಯೆಯು ತಾನೇ ಕಾಲವು ಸನ್ನಿಹಿತವಾದಾಗ ಸಕಲ ಸದ್ಗುಣ ಸಂಪನ್ನನಾದ, ನರಲೋಕದ ಪ್ರಾಣಿಗಳ ಮನಸ್ಸನ್ನು ಆನಂದಗೊಳಿಸುವ ಸುಂದರನಾದ ನಿನ್ನನ್ನು ಪತಿಯನ್ನಾಗಿ ವರಿಸದೇ ಇರುವಳು? ॥ ೩೮ ॥ ಪ್ರಿಯತಮನೇ! ನಾನು ನಿನ್ನನ್ನು ಪತಿಯನ್ನಾಗಿ ವರಿಸಿಬಿಟ್ಟಿದ್ದೇನೆ. ನಾನು ನಿನಗೆ ಆತ್ಮಸಮರ್ಪಣೆ ಮಾಡಿರುವೆನು. ನೀನು ಅಂತರ್ಯಾಮಿಯಾಗಿರುವೆ. ನನ್ನ ಹೃದಯದಲ್ಲಿರುವುದನ್ನು ನೀನು ತಿಳಿದೇ ಇರುವೆ. ನೀನು ಇಲ್ಲಿಗೆ ಬಂದು ನನ್ನನ್ನು ಪತ್ನಿಯನ್ನಾಗಿ ಸ್ವೀಕರಿಸು. ಕಮಲನಯನ! ಪ್ರಾಣವಲ್ಲಭ! ನಾನು ನಿನ್ನಂತಹ ವೀರನಿಗೆ ಸಮರ್ಪಿತಳಾಗಿರುವೆನು; ನಿನ್ನವಳಾಗಿರುವೆನು. ಸಿಂಹನಿಗೆ ಸಿಗಬೇಕಾದ ಭಾಗವನ್ನು ನರಿಯು ಮುಟ್ಟುವ ಆ ಶಿಶುಪಾಲನು ಎಲ್ಲಾದರೂ ಹತ್ತಿರಕ್ಕೆ ಬಂದು ನನ್ನನ್ನು ಸ್ಪರ್ಶಿಸದಿರಲಿ. ॥ ೩೯ ॥ ನಾನು ಈ ಹಿಂದೆ ಮಾಡಿದ ಇಷ್ಟಾ-ಪೂರ್ತಾದಿಗಳಿಂದಲೂ, ದಾನಗಳಿಂದಲೂ, ವ್ರತನಿಯಮಾದಿಗಳಿಂದಲೂ, ದೇವ-ಬ್ರಾಹ್ಮಣ ಗುರು ಜನರನ್ನು ಪೂಜಿಸುವುದರಿಂದಲೂ ಭಗವಾನ್ ಪರಮೇಶ್ವರನ ಆರಾಧನೆಯಿಂದ ಅವನು ಪ್ರಸನ್ನನಾಗಿದ್ದರೆ ಭಗವಾನ್ ಶ್ರೀಕೃಷ್ಣನು ಆಗಮಿಸಿ ನನ್ನ ಪಾಣಿಗ್ರಹಣಮಾಡಲಿ. ಶಿಶುಪಾಲನೇ ಆಗಲೀ, ಬೇರೆ ಯಾರೇ ಆಗಲಿ ನನ್ನ ಕೈ ಹಿಡಿಯುವುದು ಬೇಡ. ॥ ೪೦ ॥ ಪ್ರಭೋ! ನೀನು ಅಜಿತನಾಗಿರುವೆ. ನನ್ನ ವಿವಾಹವು ನಡೆಯುವ ಒಂದು ದಿನ ಮುಂಚಿತವಾಗಿ ನೀನು ನಮ್ಮ ರಾಜಧಾನಿಗೆ ಗುಪ್ತರೂಪದಿಂದ ಬಂದುಬಿಡು. ಮತ್ತೆ ಶಿಶುಪಾಲ ಹಾಗೂ ಜರಾಸಂಧರ ಸೇನೆಗಳನ್ನು ಧ್ವಂಸಮಾಡಿ ವೀರ್ಯಶುಲ್ಕಳಾದ ನನ್ನನ್ನು ಬಲವಂತವಾಗಿ ಸೆಳೆದೊಯ್ದು ರಾಕ್ಷಸವಿಧಿಯಂತೆ ಪಾಣಿಗ್ರಹಣ ಮಾಡಿಕೋ. ॥ ೪೧ ॥

ಅಂತಃಪುರಾಂತರಚರೀಮನಿಹತ್ಯ ಬಂಧೂಂ-
ಸ್ತ್ವಾಮುದ್ವಹೇ ಕಥಮಿತಿ ಪ್ರವದಾಮ್ಯುಪಾಯಮ್ ।
ಪೂರ್ವೇದ್ಯುರಸ್ತಿ ಮಹತೀ ಕುಲದೇವಿಯಾತ್ರಾ
ಯಸ್ಯಾಂ ಬಹಿರ್ನವವಧೂರ್ಗಿರಿಜಾಮುಪೇಯಾತ್ ॥ ೪೨ ॥

ಅಂತಃಪುರದ ರಾಣೀವಾಸದಲ್ಲಿರುವ ನನ್ನನ್ನು ಅಪಹರಿಸಿಕೊಂಡು ಬರಬೇಕಾದರೆ ತಡೆಯಲು ಬರುವ ರಾಜಭಟರನ್ನು ಬಂಧುಗಳನ್ನು ಕೊಲ್ಲದೆ ಹೇಗೆ ತರಲಿ? ಎಂದು ನೀನು ಯೋಚಿಸುವೆಯಾದರೆ, ಇದಕ್ಕೊಂದು ಉಪಾಯವನ್ನು ನಾನು ತಿಳಿಸುತ್ತೇನೆ. ನಮ್ಮ ಕುಲಾಚಾರದಂತೆ ವಿವಾಹದ ಹಿಂದಿನ ದಿವಸ ಕುಲದೇವಿಯದರ್ಶನ ಮಾಡಲು ದೊಡ್ಡದೊಂದು ಯಾತ್ರೆಯೇ ಹೊರಡುತ್ತದೆ. ಅದರಲ್ಲಿ ವಿವಾಹವಾಗುವ ನವವಧುವು ಗಿರಿಜಾದೇವಿಯ ಮಂದಿರಕ್ಕೆ ಹೋಗಬೇಕು. ಆ ಸಮಯದಲ್ಲಿ ನೀನು ನನ್ನನು ಅಪಹರಿಸಿಕೊಂಡು ಹೋಗಬಹುದು. ॥ ೪೨ ॥

ಯಸ್ಯಾಂಘ್ರಿಪಂಕಜರಜಃಸ್ನಪನಂ ಮಹಾಂತೋ
ವಾಂಛಂತ್ಯುಮಾಪತಿರಿವಾತ್ಮತಮೋಽಪಹತ್ಯೈ ।
ಯರ್ಹ್ಯಂಬುಜಾಕ್ಷ ನ ಲಭೇಯ ಭವತ್ಪ್ರಸಾದಂ
ಜಹ್ಯಾಮಸೂನ್ ವ್ರತಕೃಶಾನ್ ಶತಜನ್ಮಭಿಃ ಸ್ಯಾತ್ ॥ ೪೩ ॥

ಕಮಲಾಕ್ಷನೇ! ಉಮಾಪತಿಯಾದ ಭಗವಾನ್ ಶಂಕರನಿಗೆ ಸಮಾನರಾದ ದೊಡ್ಡ-ದೊಡ್ಡ ಮಹಾಪುರುಷರೂ ಕೂಡ ಆತ್ಮಶುದ್ಧಿಗಾಗಿ ನಿನ್ನ ಚರಣಕಮಲಗಳ ಧೂಳಿಯಲ್ಲಿ ಸ್ನಾನಮಾಡಲು ಬಯಸುತ್ತಾರೆ. ನನಗೇನಾದರೂ ನಿನ್ನ ಪ್ರಸಾದವು, ಚರಣರಜವು ಪಡೆಯಲಾಗದಿದ್ದರೆ ವ್ರತೋಪವಾಸಾದಿಗಳಿಂದ ಶರೀರವನ್ನು ಶೋಷಿಸಿ ಪ್ರಾಣತ್ಯಾಗಮಾಡುತ್ತೇನೆ. ಬೇಕಾದರೆ ನೂರಾರು ಜನ್ಮಗಳು ಕಳೆದಾದರೂ ನಿನ್ನ ಆ ಪ್ರಸಾದವನ್ನು ಅವಶ್ಯಕವಾಗಿ ಪಡೆಯುತ್ತೇನೆ. ॥ ೪೩ ॥

*ಬ್ರಾಹ್ಮಣ ಉವಾಚ*

ಇತ್ಯೇತೇ ಗುಹ್ಯಸಂದೇಶಾ ಯದುದೇವ ಮಯಾಽಽಹೃತಾಃ ।
ವಿಮೃಶ್ಯ ಕರ್ತುಂ ಯಚ್ಚಾತ್ರ ಕ್ರಿಯತಾಂ ತದನಂತರಮ್ ॥ ೪೪ ॥

**ಬ್ರಾಹ್ಮಣನು ಹೇಳುತ್ತಾನೆ** - ಯದುವಂಶ ಶಿರೋಮಣಿಯೇ! ಇದೇ ರುಕ್ಮಿಣಿಯು ಕಳಿಸಿದ ಗುಹ್ಯವಾದ ಸಂದೇಶವಾಗಿದೆ. ಅದನ್ನು ಎತ್ತಿಕೊಂಡು ನಾನು ನಿನ್ನ ಬಳಿಗೆ ಬಂದಿರುವೆನು. ಈ ಸಂಬಂಧದಲ್ಲಿ ಏನು ಮಾಡಬೇಕೋ ಅದನ್ನು ಪರ್ಯಾಲೋಚಿಸಿ, ಅದಕ್ಕನುಸಾರವಾಗಿ ಅತಿ ತ್ವರೆಯಿಂದ ಕಾರ್ಯವನ್ನು ಮಾಡು. ॥ ೪೪ ॥

*ಐವತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೫೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ರುಕ್ಮಿಣ್ಯುದ್ವಾಹಪ್ರಸ್ತಾವೇ ದ್ವಿಪಂಚಾಶತ್ತಮೋಽಧ್ಯಾಯಃ ॥ ೫೨ ॥

# ಐವತ್ತಮೂರನೆಯ ಅಧ್ಯಾಯ

## ರುಕ್ಮಿಣೀ ಕಲ್ಯಾಣ

*ಶ್ರೀಶುಕ ಉವಾಚ*

ವೈದರ್ಭ್ಯಾಃ ಸ ತು ಸಂದೇಶಂ ನಿಶಮ್ಯ ಯದುನಂದನಃ ।
ಪ್ರಗೃಹ್ಯ ಪಾಣಿನಾ ಪಾಣಿಂ ಪ್ರಹಸನ್ನಿದಮಬ್ರವೀತ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ವಿದರ್ಭ ರಾಜಪುತ್ರಿಯಾದ ರುಕ್ಮಿಣಿಯ ಈ ಸಂದೇಶವನ್ನು ಕೇಳಿ ಯದುವಂಶಜನಾದ ಶ್ರೀಕೃಷ್ಣನು ತನ್ನ ಕೈಯಿಂದ ಬ್ರಾಹ್ಮಣನ ಕೈಯನ್ನು ಹಿಡಿದುಕೊಂಡು ನಗುತ್ತಾ ಇಂತೆಂದನು. ॥ ೧ ॥

*ಶ್ರೀಭಗವಾನುವಾಚ*

ತಥಾಹಮಪಿ ತಚ್ಚಿತ್ತೋ ನಿದ್ರಾಂ ಚ ನ ಲಭೇ ನಿಶಿ ।
ವೇದಾಹಂ ರುಕ್ಮಿಣಾ ದ್ವೇಷಾನ್ಮಮೋದ್ವಾಹೋ ನಿವಾರಿತಃ ॥ ೨ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಬ್ರಾಹ್ಮಣೋತ್ತಮರೇ! ವಿದರ್ಭರಾಜಕುಮಾರಿಯು ನನ್ನನ್ನು ಬಯಸುವಂತೆಯೇ ನಾನು ಆಕೆಯನ್ನು ಬಯಸುತ್ತಿರುವೆನು. ನನ್ನ ಮನಸ್ಸು ಅವಳಲ್ಲೇ ನೆಲೆಸಿಬಿಟ್ಟಿದೆ. ರಾತ್ರಿಯಲ್ಲಿ ನನಗೆ ನಿದ್ದೆಯೇ ಬರುವುದಿಲ್ಲ. ರುಕ್ಮಿಯು ದ್ವೇಷದಿಂದ ನನ್ನ ವಿವಾಹವನ್ನು ತಡೆಯುತ್ತಿದ್ದಾನೆ ಎಂಬುದನ್ನು ನಾನು ಬಲ್ಲೆನು. ॥ ೨ ॥

ತಾಮಾನಯಿಷ್ಯ ಉನ್ಮಥ್ಯ ರಾಜನ್ಯಾಪಸದಾನ್ ಮೃಧೇ ।
ಮತ್ಪರಾಮನವದ್ಯಾಂಗೀಮೇಧಸೋಽಗ್ನಿಶಿಖಾಮಿವ ॥ ೩ ॥

*ಶ್ರೀಶುಕ ಉವಾಚ*

ಉದ್ವಾಹರ್ಕ್ಷಂ ಚ ವಿಜ್ಞಾಯ ರುಕ್ಮಿಣ್ಯಾ ಮಧುಸೂದನಃ ।
ರಥಃ ಸಂಯುಜ್ಯತಾಮಾಶು ದಾರುಕೇತ್ಯಾಹ ಸಾರಥಿಮ್ ॥ ೪ ॥

ಸ ಚಾಶ್ವೈಃ ಶೈಬ್ಯಸುಗ್ರೀವಮೇಘಪುಷ್ಪಬಲಾಹಕೈಃ ।
ಯುಕ್ತಂ ರಥಮುಪಾನೀಯ ತಸ್ಥೌ ಪ್ರಾಂಜಲಿರಗ್ರತಃ ॥ ೫ ॥

ಆರುಹ್ಯ ಸ್ಯಂದನಂ ಶೌರಿರ್ದ್ವಿಜಮಾರೋಪ್ಯ ತೂರ್ಣಗೈಃ ।
ಆನರ್ತಾದೇಕರಾತ್ರೇಣ ವಿದರ್ಭಾನಗಮದ್ಧಯೈಃ ॥ ೬ ॥

ರಾಜಾ ಸ ಕುಂಡಿನಪತಿಃ ಪುತ್ರಸ್ನೇಹವಶಂ ಗತಃ ।
ಶಿಶುಪಾಲಾಯ ಸ್ವಾಂ ಕನ್ಯಾಂ ದಾಸ್ಯನ್ ಕರ್ಮಾಣ್ಯಕಾರಯತ್ ॥ ೭ ॥

ಪುರಂ ಸಮ್ಮೃಷ್ಟಸಂಸಿಕ್ತಮಾರ್ಗರಥ್ಯಾಚತುಷ್ಪಥಮ್ ।
ಚಿತ್ರಧ್ವಜಪತಾಕಾಭಿಸ್ತೋರಣೈಃ ಸಮಲಂಕೃತಮ್ ॥ ೮ ॥

ಸ್ರಗ್ಗಂಧಮಾಲ್ಯಾಭರಣೈರ್ವಿರಜೋಽಂಬರಭೂಷಿತೈಃ ।
ಜುಷ್ಟಂ ಸ್ತ್ರೀಪುರುಷೈಃ ಶ್ರೀಮದ್ಗೃಹೈರಗುರುಧೂಪಿತೈಃ ॥ ೯ ॥

ಪಿತೄನ್ ದೇವಾನ್ ಸಮಭ್ಯರ್ಚ್ಯ ವಿಪ್ರಾಂಶ್ಚ ವಿಧಿವನ್ನೃಪ ।
ಭೋಜಯಿತ್ವಾಯಥಾನ್ಯಾಯಂ ವಾಚಯಾಮಾಸ ಮಂಗಲಮ್ ॥ ೧೦ ॥

ಸುಸ್ನಾತಾಂ ಸುದತೀಂ ಕನ್ಯಾಂ ಕೃತಕೌತುಕಮಂಗಲಾಮ್ ।
ಅಹತಾಂಶುಕಯುಗ್ಮೇನ ಭೂಷಿತಾಂ ಭೂಷಣೋತ್ತಮೈಃ ॥ ೧೧ ॥

ಚಕ್ರುಃ ಸಾಮರ್ಗ್ಯಜುರ್ಮಂತ್ರೈರ್ವಧ್ವಾ ರಕ್ಷಾಂ ದ್ವಿಜೋತ್ತಮಾಃ ।
ಪುರೋಹಿತೋಽಥರ್ವವಿದ್ವೈ ಜುಹಾವ ಗ್ರಹಶಾಂತಯೇ ॥ ೧೨ ॥

ಹಿರಣ್ಯರೂಪ್ಯವಾಸಾಂಸಿ ತಿಲಾಂಶ್ಚ ಗುಡಮಿಶ್ರಿತಾನ್ ।
ಪ್ರಾದಾದ್ಧೇನೂಂಶ್ಚ ವಿಪ್ರೇಭ್ಯೋ ರಾಜಾ ವಿಧಿವಿದಾಂ ವರಃ ॥ ೧೩ ॥

ಆದರೆ ವಿಪ್ರೋತ್ತಮರೇ! ಎರಡು ಅರಣಿಗಳನ್ನು ಮಥಿಸಿ ಅಗ್ನಿಯನ್ನು ಹೊರತರುವಂತೆಯೇ ಯುದ್ಧದಲ್ಲಿ ಹೆಸರಾಂತ ಕ್ಷತ್ರಿಯ ಕುಲಕಲಂಕರಾದ ಶಿಶುಪಾಲ, ಜರಾಸಂಧರೇ ಮೊದಲಾದವರನ್ನು ಮಥಿಸಿ ನನ್ನಲ್ಲಿಯೇ ಆಸಕ್ತಳಾಗಿರುವ ಪರಮ ಸುಂದರಿಯಾದ ರುಕ್ಮಿಣಿಯನ್ನು ಕರೆತರುತ್ತೇನೆ. ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಧುಸೂದನ ಶ್ರೀಕೃಷ್ಣನು ಬ್ರಾಹ್ಮಣನಿಗೆ ಹೀಗೆ ಹೇಳಿ ರುಕ್ಮಿಣಿಯ ವಿವಾಹದ ಮುಹೂರ್ತವನ್ನು ಅವನಿಂದ ತಿಳಿದುಕೊಂಡು ಪ್ರಯಾಣಕ್ಕಾಗಿ ರಥವನ್ನು ಬೇಗನೇ ಸಿದ್ಧಗೊಳಿಸುವಂತೆ ಸಾರಥಿಯಾದ ದಾರುಕನಿಗೆ ಹೇಳಿದನು. ॥ ೪ ॥ ದಾರುಕನು ಭಗವಂತನ ರಥಕ್ಕೆ ಶೈಬ್ಯ-ಸುಗ್ರೀವ-ಮೇಘಪುಷ್ಪ ಮತ್ತು ಬಲಾಹಕಗಳೆಂಬ ದಿವ್ಯ ಕುದುರೆಗಳನ್ನು ಹೂಡಿ, ಸಜ್ಜುಗೊಳಿಸಿ ಕೈ ಜೋಡಿಸಿಕೊಂಡು ಶ್ರೀಕೃಷ್ಣನ ಮುಂದೆ ನಿಂತುಕೊಂಡನು.॥ ೫ ॥ ಶೌರಿಯು ಮೊದಲು ಬ್ರಾಹ್ಮಣನನ್ನು ರಥದಲ್ಲಿ ಹತ್ತಿಸಿ, ತಾನೂ ರಥಾರೂಢನಾಗಿ ಶೀಘ್ರಗಾಮಿಗಳಾದ ಕುದುರೆಗಳ ಮೂಲಕ ಒಂದೇ ರಾತ್ರಿಯಲ್ಲಿ ಆನರ್ತದೇಶದಿಂದ ವಿದರ್ಭದೇಶಕ್ಕೆ ಬಂದು ತಲುಪಿದನು. ॥ ೬ ॥ ಕುಂಡಿನನರೇಶನಾದ ಭೀಷ್ಮಕನು ತನ್ನ ಮಗನಾದ ರುಕ್ಮಿಯ ಮೇಲಿನ ವ್ಯಾಮೋಹದಿಂದ ಅವನ ಮಾತಿನಂತೆ ತನ್ನ ಕನ್ಯೆಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆಮಾಡಲು ವಿವಾಹೋ-ತ್ಸವದ ಸಿದ್ಧತೆಗಳನ್ನು ಮಾಡತೊಡಗಿದನು. ॥ ೭ ॥

ಕುಂಡಿನ ನಗರದ ರಾಜಬೀದಿಗಳನ್ನು, ನಾಲ್ಕು ಬೀದಿಗಳು ಸೇರುವ ಚೌಕಗಳನ್ನು, ಗುಡಿಸಿ ಸಾರಿಸಿ, ಗಂಧೋದಕವನ್ನು ಎರಚಲಾಗಿತ್ತು. ಚಿತ್ರ-ವಿಚಿತ್ರವಾದ ಧ್ವಜಗಳಿಂದಲೂ, ಪತಾಕೆಗಳಿಂದಲೂ, ತೋರಣಗಳಿಂದಲೂ ಸಿಂಗರಿಸಿತ್ತು. ॥ ೮ ॥ ಅಲ್ಲಿಯ ಸ್ತ್ರೀ-ಪುರುಷರೆಲ್ಲರೂ ಪುಷ್ಪಹಾರಗಳಿಂದಲೂ, ಸುಗಂಧಯುಕ್ತವಾದ ಮಾಲೆಗಳಿಂದಲೂ, ನಾನಾ ವಿಧವಾದ ಸ್ವರ್ಣಾಭರಣಗಳಿಂದಲೂ, ನವೀನ ವಸ್ತ್ರಗಳಿಂದಲೂ ಭೂಷಿತರಾಗಿದ್ದರು. ಅಂದವಾದ ಮನೆಗಳಿಂದ ಅಗರು – ಚಂದನದ ಸುಗಂಧವು ಹೊರಸೂಸುತ್ತಿತ್ತು. ॥ ೯ ॥ ಪರೀಕ್ಷಿತನೇ! ಮಹಾರಾಜನಾದ ಭೀಷ್ಮಕನು ದೇವ-ಪಿತೃಗಳನ್ನು ಯಥಾವಿಧಿಯಾಗಿ ಪೂಜಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ನಿಯಮಾನುಸಾರ ಸ್ವಸ್ತಿವಾಚನವನ್ನು ಮಾಡಿಸಿದನು. ॥ ೧೦ ॥ ಸುಂದರವಾದ ಹಲ್ಲುಗಳಿಂದ ಶೋಭಿಸುತ್ತಿದ್ದ ಪರಮಸುಂದರಿಯಾದ ರುಕ್ಮಿಣೀದೇವಿಗೆ ಮಂಗಳಸ್ನಾನವನ್ನು ಮಾಡಿಸಿ, ನೂತನವಸ್ತ್ರಗಳನ್ನುಡಿಸಿ, ದಿವ್ಯಾಭರಣಗಳನ್ನು ತೊಡಿಸಿ, ಕೈಗಳಿಗೆ ಮಂಗಳಕರವಾದ ಕಂಕಣವನ್ನು ಕಟ್ಟಿದರು. ॥ ೧೧ ॥ ದ್ವಿಜಶ್ರೇಷ್ಠರು ಋಗ್ಯಜುಃ ಸಾಮ ಮಂತ್ರಗಳಿಂದ ನವವಧುವಿಗೆ ರಕ್ಷಾಬಂಧನವನ್ನು ಮಾಡಿದರು. ಅಥರ್ವವೇದದ ವಿದ್ವಾಂಸರಾದ ಪುರೋಹಿತರು ಗ್ರಹಶಾಂತಿಗಾಗಿ ಹೋಮವನ್ನು ಮಾಡಿದರು. ॥ ೧೨ ॥ ವಿಧಿನಿಯಮಗಳನ್ನು ಬಲ್ಲವರಲ್ಲಿ ಶ್ರೇಷ್ಠನಾದ ಭೀಷ್ಮಕಮಹಾರಾಜನು ಬ್ರಾಹ್ಮಣರಿಗೆ ಚಿನ್ನವನ್ನು, ಬೆಳ್ಳಿಯನ್ನು, ವಸ್ತ್ರಗಳನ್ನು, ಬೆಲ್ಲದೊಡನೆ ಸೇರಿಸಿದ ಎಳ್ಳನ್ನು, ಗೋವುಗಳನ್ನು ದಾನಮಾಡಿದನು. ॥ ೧೩ ॥

ಏವಂ ಚೇದಿಪತೀ ರಾಜಾ ದಮಘೋಷಃ ಸುತಾಯ ವೈ ।
ಕಾರಯಾಮಾಸ ಮಂತ್ರಜ್ಞೈಃ ಸರ್ವಮಭ್ಯುದಯೋಚಿತಮ್
॥ ೧೪ ॥

ಮದಚ್ಯುದ್ಭಿರ್ಗಜಾನೀಕೈಃ ಸ್ಯಂದನೈರ್ಹೇಮಮಾಲಿಭಿಃ ।
ಪತ್ತ್ಯಶ್ವಸಂಕುಲೈಃ ಸೈನ್ಯೈಃ ಪರೀತಃ ಕುಂಡಿನಂ ಯಯೌ
॥ ೧೫ ॥

ತಂ ವೈ ವಿದರ್ಭಾಧಿಪತಿಃ ಸಮಭ್ಯೇತ್ಯಾಭಿಪೂಜ್ಯ ಚ ।
ನಿವೇಶಯಾಮಾಸ ಮುದಾ ಕಲ್ಪಿತಾನ್ಯನಿವೇಶನೇ
॥ ೧೬ ॥

ತತ್ರ ಶಾಲ್ವೋ ಜರಾಸಂಧೋ ದಂತವಕ್ತ್ರೋ ವಿದೂರಥಃ ।
ಆಜಗ್ಮುಶ್ಚೈದ್ಯಪಕ್ಷೀಯಾಃ ಪೌಂಡ್ರಕಾದ್ಯಾಃ ಸಹಸ್ರಶಃ
॥ ೧೭ ॥

ಕೃಷ್ಣರಾಮದ್ವಿಷೋ ಯತ್ತಾಃ ಕನ್ಯಾಂ ಚೈದ್ಯಾಯ ಸಾಧಿತುಮ್ ।
ಯದ್ಯಾಗತ್ಯ ಹರೇತ್ ಕೃಷ್ಣೋ ರಾಮಾದ್ಯೈರ್ಯದುಭಿರ್ವೃತಃ
॥ ೧೮ ॥

ಯೋತ್ಸ್ಯಾಮಃ ಸಂಹತಾಸ್ತೇನ ಇತಿ ನಿಶ್ಚಿತಮಾನಸಾಃ ।
ಆಜಗ್ಮುರ್ಭೂಭುಜಃ ಸರ್ವೇ ಸಮಗ್ರಬಲವಾಹನಾಃ
॥ ೧೯ ॥

ಶ್ರುತ್ವೈತದ್ಭಗವಾನ್ ರಾಮೋ ವಿಪಕ್ಷೀಯನೃಪೋದ್ಯಮಮ್ ।
ಕೃಷ್ಣಂ ಚೈಕಂ ಗತಂ ಹರ್ತುಂ ಕನ್ಯಾಂ ಕಲಹಶಂಕಿತಃ
॥ ೨೦ ॥

ಬಲೇನ ಮಹತಾ ಸಾರ್ಧಂ ಭ್ರಾತೃಸ್ನೇಹಪರಿಪ್ಲುತಃ ।
ತ್ವರಿತಃ ಕುಂಡಿನಂ ಪ್ರಾಗಾದ್ಗಜಾಶ್ವರಥಪತ್ತಿಭಿಃ
॥ ೨೧ ॥

ಭೀಷ್ಮಕನ್ಯಾ ವರಾರೋಹಾ ಕಾಂಕ್ಷಂತ್ಯಾಗಮನಂ ಹರೇಃ ।
ಪ್ರತ್ಯಾಪತ್ತಿಮಪಶ್ಯಂತೀ ದ್ವಿಜಸ್ಯಾಚಿಂತಯತ್ತದಾ
॥ ೨೨ ॥

ಅಹೋ ತ್ರಿಯಾಮಾಂತರಿತ ಉದ್ವಾಹೋ ಮೇಽಲ್ಪರಾಧಸಃ ।
ನಾಗಚ್ಛತ್ಯರವಿಂದಾಕ್ಷೋ ನಾಹಂ ವೇದ್ಮ್ಯತ್ರ ಕಾರಣಮ್ ।
ಸೋಽಪಿ ನಾವರ್ತತೇಽದ್ಯಾಪಿ ಮತ್ಸಂದೇಶಹರೋ ದ್ವಿಜಃ
॥ ೨೩ ॥

ಇದೇ ರೀತಿಯಲ್ಲಿ ಚೇದಿರಾಜನಾದ ದಮಘೋಷನೂ ತನ್ನ ಮಗನಾದ ಶಿಶುಪಾಲನ ವಿವಾಹದ ಸಂಬಂಧವಾಗಿ ಮಂತ್ರಜ್ಞರಾದ ಬ್ರಾಹ್ಮಣರಿಂದ ಮಾಂಗಲಿಕ ಕರ್ಮಗಳನ್ನು ಮಾಡಿಸಿದನು. ॥ ೧೪ ॥ ಅನಂತರ ಮದೋದಕವನ್ನು ಸುರಿಸುತ್ತಿದ್ದ ಗಜಸೈನ್ಯದಿಂದಲೂ, ಸುವರ್ಣಮಾಲೆಗಳಿಂದ ವಿಭೂಷಿತವಾಗಿದ್ದ ರಥಸೈನ್ಯದಿಂದಲೂ, ಪದಾತಿ, ಅಶ್ವಸೈನ್ಯದಿಂದಲೂ ಕೂಡಿಕೊಂಡು ಕುಂಡಿನ ನಗರಕ್ಕೆ ಬಂದು ತಲುಪಿದನು. ॥ ೧೫ ॥ ದಿಬ್ಬಣವು ಬಂದಿತೆಂದು ತಿಳಿದ ವಿದರ್ಭಾಧಿಪತಿ ಭೀಷ್ಮಕನು ಮುಂದೆ ಹೋಗಿ ಅವರನ್ನು ಸ್ವಾಗತ-ಸತ್ಕಾರಗಳಿಂದ ಪದ್ಧತಿಯಂತೆ ಪೂಜಿಸಿದನು. ಬಳಿಕ ಅವರಿಗಾಗಿ ಹಿಂದೆಯೇ ನಿಶ್ಚಯಿಸಿದ ರಾಜಭವನದಲ್ಲಿ ಬೀಗರನ್ನು ಇಳಿಸಿದನು. ॥ ೧೬ ॥ ಶಿಶುಪಾಲನ ಕಡೆಯವರಾಗಿ ಶಾಲ್ವ, ಜರಾಸಂಧ, ದಂತವಕ್ತ್ರ, ವಿದೂರಥ, ಪೌಂಡ್ರಕ ಮೊದಲಾದ ಸಾವಿರಾರು ರಾಜರು ಆಗಮಿಸಿದ್ದರು. ॥ ೧೭ ॥ ಆ ರಾಜರೆಲ್ಲರೂ ಶ್ರೀಕೃಷ್ಣ ಮತ್ತು ಬಲರಾಮರ ವಿರೋಧಿಗಳೇ ಆಗಿದ್ದರು. ರಾಜಕುಮಾರಿ ರುಕ್ಮಿಣಿಯು ಶಿಶುಪಾಲನಿಗೇ ಸಿಗಬೇಕೆಂಬ ಆಶಯದಿಂದ ಬಂದಿದ್ದರು. ಶ್ರೀಕೃಷ್ಣನು ಬಲರಾಮರೇ ಮೊದಲಾದ ಯದುವಂಶೀಯರೊಂದಿಗೆ ಬಂದು ರುಕ್ಮಿಣಿಯನ್ನು ಅಪಹರಿಸಲು ಪ್ರಯತ್ನಿಸಿದರೆ ನಾವೆಲ್ಲರೂ ಸೇರಿ ಯುದ್ಧಮಾಡಬೇಕೆಂದೇ ಅವರೆಲ್ಲರೂ ಮನಸ್ಸಿನಲ್ಲಿ ಮೊದಲೇ ನಿಶ್ಚಯಿಸಿದ್ದರು. ಅದರಿಂದಲೇ ಆ ರಾಜರುಗಳು ತಮ್ಮ-ತಮ್ಮ ಚತುರಂಗ ಸೈನ್ಯದೊಂದಿಗೆ ಬಂದಿದ್ದರು. ॥ ೧೮-೧೯ ॥

ಶತ್ರುಪಕ್ಷದ ಈ ಸನ್ನಾಹವು ಬಲರಾಮನಿಗೆ ತಿಳಿದು ಹೋಯಿತು. ತಮ್ಮನಾದ ಶ್ರೀಕೃಷ್ಣನು ಒಬ್ಬಂಟಿಗನಾಗಿಯೇ ರಾಜಕುಮಾರಿಯನ್ನು ಅಪಹರಿಸಿಕೊಂಡುಬರಲು ಹೋಗಿರುವನೆಂದು ತಿಳಿದಾಗ, ಕನ್ಯೆಯಸಲುವಾಗಿ ಎರಡೂ ಪಕ್ಷದಲ್ಲಿ ಯುದ್ಧವು ಸಂಭವಿಸಬಹುದೆಂದು ಅವನಿಗೆ ಅನಿಸಿತು. ॥ ೨೦ ॥ ಶ್ರೀಕೃಷ್ಣನ ಬಲ-ಪರಾಕ್ರಮಗಳನ್ನು ಬಲರಾಮನು ತಿಳಿದಿದ್ದರೂ ಭ್ರಾತೃಸ್ನೇಹದಿಂದ ಹೃದಯ ತುಂಬಿಬಂದು, ಕೂಡಲೇ ಗಜರಥಾಶ್ವಪದಾತಿಗಳಿಂದ ಕೂಡಿದ ಚತುರಂಗಿಣಿ ಸೈನ್ಯದೊಂದಿಗೆ ಕುಂಡಿನನಗರಕ್ಕೆ ಪ್ರಯಾಣ ಮಾಡಿದನು. ॥ ೨೧ ॥

ಇತ್ತ ಪರಮಸುಂದರಿಯಾದ ರುಕ್ಮಿಣಿಯು ಭಗವಾನ್ ಶ್ರೀಕೃಷ್ಣನ ಶುಭಾಗಮನದ ಪ್ರತೀಕ್ಷೆ ಮಾಡುತ್ತಿದ್ದಳು. ಶ್ರೀಕೃಷ್ಣನ ಸಮಾಚಾರವನ್ನು ನನಗೆ ಯಾರು ತಿಳಿಸುವರು? ಸಂದೇಶವನ್ನು ಕೊಂಡುಹೋದ ಬ್ರಾಹ್ಮಣನು ಇನ್ನೂ ಬಂದಿಲ್ಲ! ಹೀಗೆ ಯೋಚಿಸುತ್ತಾ ಚಿಂತಾತುರಳಾದಳು. ॥ ೨೨ ॥ ಅಯ್ಯೋ! ನಿರ್ಭಾಗ್ಯಳಾದ ನನ್ನ ವಿವಾಹಕ್ಕೆ ಕೇವಲ ಒಂದು ರಾತ್ರಿಮಾತ್ರ ಉಳಿದಿದೆ. ಆದರೆ ನನ್ನ ಜೀವನಸರ್ವಸ್ವನಾದ ಕಮಲನಯನ ಭಗವಂತನು ಇನ್ನೂ ಆಗಮಿಸಲಿಲ್ಲವಲ್ಲ! ಇದರ ಕಾರಣವೇನಿರಬಹುದು? ತಿಳಿಯದಾಗಿದೆ. ಇಷ್ಟೇ ಅಲ್ಲ; ನನ್ನ ಸಂದೇಶವನ್ನು ಕೊಂಡುಹೋದ ವಿಪ್ರೋತ್ತಮನು ಇನ್ನೂ ಬಂದಿಲ್ಲವಲ್ಲ! ॥ ೨೩ ॥